# ಪಲ್ಲಟ





ಶ್ರೀ ಕುಮಾರಸ್ವಾಮಿಗಳು ನವಕಲ್ಯಾಣಮಠ
ಧಾರವಾಡ.



# ಪಲ್ಲವಿ

ಶ್ರೀ ಕುಮಾರಸ್ವಾಮಿಗಳು ನವಕಲ್ಯಾಣಮಠ
ಧಾರವಾಡ.



೧೯೫೯

ಬೆಲೆ: ರೂ. ೨–೦೦

ಪ್ರಕಾಶಕರು :

ಶ್ರೀ ವೀ. ರು. ಕೊಪ್ಪಳ ಎಂ. ಎ., ಬಿ. ಟಿ.
ಕಾರ್ಯದರ್ಶಿ,
ನವಕಲ್ಯಾಣಮಠ, ಧಾರವಾಡ.

[ ಪ್ರಥಮ ಮುದ್ರಣ ೧೦೦೦ ಪ್ರತಿಗಳು

ಮುದ್ರಕರು :

ಶ್ರೀ ಎಂ. ಜಿ. ಪಾಲೇಕರ
ವಸಂತ ಮುದ್ರಣಾಲಯ,
ಧಾರವಾಡ.

# ಮುನ್ನುಡಿ

ಶ್ರೀ ಕುಮಾರಸ್ವಾಮಿಗಳ ವ್ಯಾಖ್ಯಾನ ಉಪನ್ಯಾಸಗಳ ಸಂಗ್ರಹವನ್ನೊಳಗೊಂಡ ಈ ಪುಸ್ತಕವನ್ನು ಸಾರ್ವಜನಿಕರ ಉಪಯೋಗಕ್ಕೆಂದು ಪ್ರಕಟಿಸಲು ಸಂತೋಷವೆನಿಸುತ್ತದೆ. ಶ್ರೀಗಳವರ ಈ ಪೂರ್ವದ ಕನ್ನಡ ಗ್ರಂಥಗಳ ಮಾದರಿಯಲ್ಲಿಯೇ ಪ್ರಕೃತ ಗ್ರಂಥವನ್ನು ಯೋಜನೆಗೊಳಿಸಲಾಗಿದೆ. ಇದರಲ್ಲಿ ಸಮಾವೇಶಗೊಳಿಸಿದ 'ಪಲ್ಲಟ'ದಿಂದ 'ಪ್ರಾರ್ಥನಾಯೋಗ'ದ ವರೆಗಿನ ವಿಷಯ ವಿವೇಚನೆಯಲ್ಲಿ ಜೀವನದ ಸಾರ್ಥಕ್ಯವನ್ನು ಕುರಿತ ಹಲವಾರು ಅಮೌಲ್ಯವಾದ ವಿಚಾರಗಳು ಬಂದಿರುತ್ತವೆ. ಮನುಷ್ಯನು ಜೀವನದ ಉತ್ತಮಿಕೆಗಾಗಿ ನಿತ್ಯವೂ ಯತ್ನಿಸುತ್ತಿರಬೇಕು; ಇದ್ದ ಸ್ಥಿತಿಯಲ್ಲಿಯೇ ಉಳಿಯದೆ ಪ್ರಗತಿಪರ ದೃಷ್ಟಿಯುಳ್ಳವನಾಗಿ ಅವನು ಸತ್ಪ್ರವರ್ತನೆ ಪಡೆಯುತ್ತ ಸಾಗಬೇಕು; ಅದಕ್ಕಾಗಿ ತನಗೆ ಅನುಕೂಲಿಸುವ ಬಗೆಬಗೆಯ ಸಾಧನೆಗಳನ್ನೂ ಅವನು ಕೈಕೊಳ್ಳಬೇಕು ಎಂಬ ಬಹು ಬೆಲೆಯುಳ್ಳ ಮಾತುಗಳು ಈ ಪುಸ್ತಕದ ಪುಟ ಪುಟಗಳಲ್ಲಿ ಒಡಮೂಡಿರುತ್ತವೆ. ಇದನ್ನೋದಿಕೊಳ್ಳುವದರಿಂದ ಜನತೆಗೆ ತುಸುವಾದರೂ ಕಲ್ಯಾಣವಾದೀತೆಂದು ಹಾರೈಸಲಾಗಿದೆ.

ಈ ಗ್ರಂಥವನ್ನು ಸಿದ್ಧಗೊಳಿಸುವ ಕಾಲಕ್ಕೆ ಅನೇಕ ಗ್ರಂಥಗಳ ನೆರವನ್ನು ಪಡೆದುಕೊಳ್ಳುವದು ಅನಿವಾರ್ಯವಾಗಿದೆ. ಅವುಗಳ ಕರ್ತೃಗಳಿಗೂ ಪ್ರಕಾಶಕರಿಗೂ ಉಪಕೃತರಾಗಿದ್ದೇವೆ.

ನವಕಲ್ಯಾಣಮಠ,
ಧಾರವಾಡ
೮–೨–೧೯೫೯

**ಪ್ರಕಾಶಕರು**

# ಪ ರಿ ವಿ ಡಿ


| | ವಿಷಯ | ಪುಟ |
|---|---|---|
| ೧. | ಪಲ್ಲಟ | ೧ |
| ೨. | ಅನುಭಾವದ ಬೆಡಗು | ೧೮ |
| ೩. | ಧರ್ಮ ಚಕ್ರ | ೪೧ |
| ೪. | ‘ ನ್ಯೂ – ಫಾ ’ | ೬೪ |
| ೫. | ನೀತಿಧರ್ಮ | ೮೨ |
| ೬. | ಮಾಟಗಾತಿ | ೧೦೩ |
| ೭. | ಪ್ರಾರ್ಥನಾಯೋಗ | ೧೧೮ |







# ಪಲ್ಲಟ

ಕಳೆದ ಶತಮಾನದಲ್ಲಿ ಉಗಮುಗೊಂಡು ಜೀವನದ ನಾನಾ ಮುಖಗಳಲ್ಲಿಯು ವಿಚಾರಧಾರೆಯ ಹಲವಾರು ಸ್ವರೂಪಗಳಿಂದ ಅತ್ಯದ್ಭುತವಾದ ಪರಿಣಾಮ- ವನ್ನುಂಟುಮಾಡಿದ ವಿಕಾಸವಾದವು ಐತಿಹಾಸಿಕ ದೃಷ್ಟಿಯಿಂದ ಕಾರ್ಯ– ಕಾರಣವನ್ನು ಅನುಸರಿಸಿ, ಸಕಲ ಶಾಸ್ತ್ರಗಳ ಹಾಗು ಮತಗಳ ಉತ್ಪತ್ತಿಯನ್ನು ವಿವರಿಸುತ್ತದೆ. ಹಾಗೆಯೇ ಅದು ಸೃಷ್ಟಿಯ ರಚನೆಯನ್ನು ಸಹ ಸೋಪಪತ್ತಿಕ- ವಾಗಿ ತಿಳಿಸಲೆತ್ನಿಸುತ್ತದೆ. ಅದರ ಮುಖ್ಯ ಸಿದ್ಧಾಂತವು ಹೀಗೆ: 'ಈ ಜಗತ್ತಿನಲ್ಲಿ ಹೊಸದಾಗಿ ಏನೂ ಹುಟ್ಟುವದಿಲ್ಲ. ಕಾರ್ಯದಲ್ಲಿ ಕಾಣುವ ಗುಣಗಳು ಕಾರಣದಲ್ಲಿ ಸೂಕ್ಷ್ಮರೂಪದಿಂದ ಇರಲಿಕ್ಕೆ ಬೇಕು— ಬೀಜದಲ್ಲಿ ವೃಕ್ಷವು ಅಡಗಿಕೊಂಡಂತೆ, ವೃಕ್ಷದಲ್ಲಿ ಮುಂದಿನ ಗಿಡಗಳಿಗೆ ಬೇಕಾದ ಬೀಜಗಳೂ ಅಡಗಿರುವಂತೆ!' ಸೃಷ್ಟಿಯೊಳಗಿನ ಜಡದ್ರವ್ಯಗಳಲ್ಲಿ ಹುದುಗಿದ ಕರ್ಮಶಕ್ತಿಯು ನಿತ್ಯವಾಗಿರುವುದೆಂದೂ ಆ ದ್ರವ್ಯಗಳು ಎಷ್ಟೇ ರೂಪಾಂತರಗಳಾದರೂ ಕೊನೆಗೆ ಆ ಕರ್ಮಶಕ್ತಿಯು ಯಾವಾಗಲೂ ಅಷ್ಟೇ ಇರುವುದೆಂದೂ ನಮಗೆ ವ್ಯಕ್ತವಾಗು- ತ್ತದೆ. ಈ ಸಿದ್ಧಾಂತಕ್ಕೆ ಈಗಿನವರು 'ವಿಕಾಸವಾದ'ವೆಂದು ಕರೆದರೆ ಸಾಂಖ್ಯರು ಇದಕ್ಕೆ 'ಸತ್ಕಾರ್ಯವಾದ'ವೆಂದು ಹೆಸರಿಟ್ಟಿದ್ದರು. ಪಾಶ್ಚಿಮಾತ್ಯ ಗ್ರಂಥಕಾರರು ವಿಕಾಸವಾದವನ್ನು ಇಂದು ಎಲ್ಲ ಕಡೆಯಲ್ಲಿಯೂ ಹೇಗೆ ಬಳಕೆಯಲ್ಲಿ ತಂದಿದ್ದಾ- ರೆಯೋ ಹಾಗೆಯೇ ಪ್ರಾಚೀನ ಸಾಂಖ್ಯಶಾಸ್ತ್ರವನ್ನು ಭಾರತದಲ್ಲಿ ಹೆಚ್ಚು ಕಡಿಮೆ ಪ್ರಮಾಣದಿಂದ ಎಲ್ಲ ದಾರ್ಶನಿಕರೂ ಸ್ವೀಕರಿಸಿದ್ದರು. ಒಳಗೆ ಅಡಗಿದುದೇ ಹೊರಗೆ ಒಡಮೂಡುವುದು; ಪ್ರಾದುರ್ಭವಿಸುವದು. ಒಳಗಿದ್ದುದೇ ಹೊರ ಹೊಮ್ಮುವದು ಎಂದ ಮೇಲೆ ಕಾರ್ಯರೂಪದಲ್ಲಿ ಕಾಣುವ ಈ ಸೃಷ್ಟಿಯ ವಿವಿಧ ವಿಕಾರಗಳು ಅಥವಾ ವಿಕೃತಿಗಳು ಅದರ ಕಾರಣರೂಪವಾದ ಪ್ರಕೃತಿಯಲ್ಲಿಯೂ ಇರಬೇಕೆಂಬುದು ಸ್ಪಷ್ಟವು.

ಈ ಪ್ರಕೃತಿಯು ಅವ್ಯಕ್ತವಾಗಿರುವುದು, ಎಂತಲೇ ಅತ್ಯಂತ ಸೂಕ್ಷ್ಮ- ವಾಗಿರುವದು; ಆದರೂ ಇದು ಜಡವಾಗಿರುವದು ಎಂದು ಸಾಂಖ್ಯರು ತಿಳಿಯು ತ್ತಾರೆ; ಅದರಂತೆ ಈಗಿನ ವಿಕಾಸವಾದಿಗಳೆಲ್ಲ ಒಪ್ಪುತ್ತಾರೆ. ಆದರೆ ಸಾಂಖ್ಯರು ಪ್ರಕೃತಿಗಿಂತ ಭಿನ್ನವಾದ ಪುರುಷರನ್ನು ಒಪ್ಪುತ್ತಾರೆ; ವಿಕಾಸವಾದಿಗಳು

ಇದನ್ನು ಮನ್ನಿಸುವದಿಲ್ಲ. ಪ್ರಕೃತಿಯು ವಿಕೃತಿಯನ್ನು ಹೊಂದುವಾಗ ಅರ್ಥಾತ್ ಪ್ರಕೃತಿಯಿಂದ ಗುಣೋತ್ಕರ್ಷವು ಪ್ರಾದುರ್ಭವಿಸುವಾಗ ಒಂದು ಕ್ರಮಬದ್ಧವಾದ ತರಗತಿಯು ಏರ್ಪಡುವದೆಂಬ ಮಾತು ಇಬ್ಬರಿಗೂ ಸಮ್ಮತವಿದೆ. ಈ ಬಗೆಗೆ ಇಂದಿನ ವಿಕಾಸವಾದವು ಹೀಗೆ ಹೇಳುತ್ತದೆ: 'ಸೃಷ್ಟಿಯಲ್ಲಿ ಒಂದು ಕ್ರಮದಿಂದ ಕೂಡಿರುವ ತರಗತಿಯು ಮೂಡಿಕೊಂಡಿರುತ್ತದೆ. ಮೊದಲು ಪ್ರಕೃತಿಯಿಂದ ಜಡಪದಾರ್ಥಗಳು ಹುಟ್ಟಿದವು. ಆಮೇಲೆ ಸೂಕ್ಷ್ಮವಾದ ಪ್ರಾಣವನ್ನು ಅದರಲ್ಲಿ ಇರಿಸಿ ಸಸ್ಯವರ್ಗದಲ್ಲಿ ಪ್ರಕೃತಿಯು ತನ್ನ ಕರ್ತೃತ್ವಕೌಶಲವನ್ನು ತೋರಿಸಿತು. ಇಷ್ಟರಿಂದಲೇ ಅದು ತೃಪ್ತಿಯನ್ನು ಪಡೆಯಲಿಲ್ಲ; ಪ್ರಾಣಕ್ಕಿಂತ ಸೂಕ್ಷ್ಮವಾದ ಮನಸ್ಸನ್ನು ಮಾನವನಲ್ಲಿ ಇಟ್ಟು ಅದು ತನ್ನ ಅಗಾಧ ಶಕ್ತಿಯನ್ನು ವ್ಯಕ್ತಗೊಳಿಸಿತು. ಈ ಪ್ರಾಣಿವರ್ಗದಲ್ಲಿ ಸಹ ಮೊದಲು ಪಶುಗಳನ್ನೂ ಪಕ್ಷಿಗಳನ್ನೂ ನಿರ್ಮಿಸಿ, ಮನುಷ್ಯನ ಆಕಾರಕ್ಕೆ ಸಮೀಪವಾಗಿರುವ ಮಂಗನನ್ನು ರೂಪಿಸಿತು. ಈ ವಿಕಾಸಕ್ರಮದಲ್ಲಿ ಮಂಗನು ಮನುಷ್ಯನಿಗೂ ಇತರ ಪ್ರಾಣಿವರ್ಗಕ್ಕೂ ಮಧ್ಯವರ್ತಿಯಾದ ಪ್ರಗತಿಯ ಗೊಣಸಿನಂತೆ ಮಾರ್ಪಟ್ಟ ತರುವಾಯ ಕೊನೆಗೆ ಪ್ರಕೃತಿಯು ಮಾನವನನ್ನು ನಿರ್ಮಾಣಗೊಳಿಸಿ ತನ್ನ ಗುಡಿಗೆ ಕಳಸವನ್ನಿಟ್ಟಿತು. ಇವೆರಡು ವಿಚಾರಸರಣಿಗಳಲ್ಲಿಯ ಒಂದು ಸೂಕ್ಷ್ಮವಾದ ಭೇದವನ್ನು ನಾವು ಚೆನ್ನಾಗಿ ಲಕ್ಷ್ಯದಲ್ಲಿಡಬೇಕು. ಇಂದಿನ ವಿಕಾಸವಾದವು ಸ್ಥೂಲದಿಂದ ಸೂಕ್ಷ್ಮವು ಹುಟ್ಟುತ್ತದೆಂದು ಹೇಳುತ್ತದೆ; ಆದರೆ ಹಿಂದಿನ ಸತ್ಕಾರ್ಯವಾದವು ಸೂಕ್ಷ್ಮದಿಂದ ಸ್ಥೂಲವು ವ್ಯಕ್ತವಾಗುವದೆಂದು ತಿಳಿಸುತ್ತದೆ. ಸೂಕ್ಷ್ಮಾತ್-ಸೂಕ್ಷ್ಮತರವಾದ ಪ್ರಕೃತಿಯಿಂದ ಮಹತ್, ಮಹತ್ತಿನಿಂದ ಮನ, ಮನದಿಂದ ಪ್ರಾಣ ಅಥವಾ ಪಂಚತನ್ಮಾತ್ರಗಳು, ಅವುಗಳಿಂದ ಪಂಚಮಹಾಭೂತಗಳು ಹೊರಹೊಮ್ಮುವವೆಂದು ಸತ್ಕಾರ್ಯವಾದವು ಸಾರುತ್ತದೆ. ಅದು ಏನೇ ಇರಲಿ, ಇಂದಿನ ವಿಕಾಸವಾದಿಗಳು ಈ ಜಗತ್ತಿನೊಳಗಿನ ಎಲ್ಲ ಪದಾರ್ಥಗಳನ್ನು ಪೃಥಕ್ಕರಿಸಿ, ಮೂಲ ಕಾರಣಗಳವರೆಗೆ ಅದನ್ನು ಶೋಧಿಸಿ ಭೂತ ಪ್ರಾಣ ಮನಸ್ಸು ಎಂಬ ಮೂರು ತತ್ವಗಳನ್ನು ಕಂಡುಹಿಡಿದಿದ್ದಾರೆ. ಆದರೆ ಆಧುನಿಕ ಮನಃಶಾಸ್ತ್ರದ ಪ್ರಗತಿಯಿಂದಲೂ ಮಾನವನ ಅನುಭವದಿಂದಲೂ ಇತರ ಶಾಸ್ತ್ರಗಳ ಅನುಮಾನಗಳಿಂದಲೂ ಜಗತ್ತಿನ ಉತ್ಪತ್ತಿಗೆ ಈ ಮೂರು ತತ್ವಗಳಲ್ಲದೆ ಆತ್ಮತತ್ವವು ಒಂದು ಅವಶ್ಯವಾಗಿ ಬೇಕೆಂಬ ಸಿದ್ಧಾಂತವನ್ನು ಪಾಶ್ಚಿಮಾತ್ಯರು ಇತ್ತೀಚೆಗೆ ಒಪ್ಪಿಕೊಳ್ಳಹತ್ತಿದ್ದಾರೆ.

ಈ ವರೆಗಿನ ವಿವೇಚನೆಯಿಂದ ಪ್ರಕೃತಿ ಮತ್ತು ಆತ್ಮ ಎಂಬ ಎರಡು ತತ್ವಗಳು ನಿಷ್ಪನ್ನವಾದವಷ್ಟೇ! ಇವುಗಳಲ್ಲಿ ಪ್ರಕೃತಿಗೆ ಗತಿಯಿದೆ ಮತಿ-ಯಿಲ್ಲವೆಂದೂ, ಆತ್ಮ ಇಲ್ಲವೆ ಪುರುಷನಿಗೆ ಗತಿಮತಿಗಳೆರಡೂ ಇವೆಯೆಂದೂ ಸೂಕ್ಷ್ಮವಾದ ಆಲೋಚನೆಯಿಂದ ವಿದಿತವಾಗುತ್ತದೆ. ಪ್ರಕೃತಿಯೊಂದನ್ನೇ ನಂಬಿ ಬಗೆಬಗೆಯ ನಾಮರೂಪಾತ್ಮಕವಾದ ಈ ಸೃಷ್ಟಿಯು ಪ್ರಕೃತಿಯ ವಿಕೃತಿ-ಯೆಂದು ವಾದಿಸುವದು 'ಭೌತಿಕವಾದ'ವೆನಿಸಿತು. ಆತ್ಮ ಒಂದನ್ನೇ ನಚ್ಚಿ ತೋರುವ ತೋರಿಕೆಯೆಲ್ಲವೂ ಆತ್ಮನ ಆವಿರ್ಭಾವವಲ್ಲದೆ ಇನ್ನೇನೂ ಅಲ್ಲ, ಎಂದು ವಾದಿಸುವದು 'ಆಧ್ಯಾತ್ಮವಾದ' ಎನಿಸಿಕೊಂಡಿತು. ಒಂದು ವಾದವು ಭೌತಿಕ ದೃಷ್ಟಿಯನ್ನೇ ಬೆಳೆಸಿಕೊಂಡು ಎಲ್ಲಕ್ಕೂ ಜಡವಸ್ತುವೇ ಕಾರಣವೆಂದು ಹೇಳುವದು; ಇನ್ನೊಂದು ವಾದವು ಆತ್ಮವಸ್ತುವನ್ನೇ ಆಧಾರವಾಗಿಟ್ಟುಕೊಂಡು ಎಲ್ಲವೂ ಚಿತ್‌ಸ್ವರೂಪವೆಂದು ನಿರೂಪಿಸುವದು. ಹೀಗೆ ಇವೆರಡು ವಾದಗಳಲ್ಲಿ ಭೇದವು ಎದ್ದು ಕಾಣುತ್ತದೆ. ಈಚೆಗೆ ಈ ವಿಂಗಡಿಕೆಯನ್ನು ತಪ್ಪಿಸಲು ಎರಡು ವಿಧಾನಗಳು ಅಸ್ತಿತ್ವದಲ್ಲಿ ಬಂದಿರುತ್ತವೆ: ಒಂದು ಸಾಪೇಕ್ಷ ವಿಧಾನ (Eclectic Method), ಇನ್ನೊಂದು ಸಮನ್ವಯ ವಿಧಾನ (Dialectic Method). ಭೌತಿಕ ದೃಷ್ಟಿಯಿಂದ ಜಗತ್ತು ಜಡವಾಗಿ ತೋರಿದರೆ ಆಧ್ಯಾತ್ಮಿಕ ದೃಷ್ಟಿಯಿಂದ ಅದು ಚೈತನ್ಯಯುತವಾಗಿ ಕಾಣುವದು. ಒಂದು ವಿಧದಿಂದ ಹೀಗೆ ಇದೆ, ಇನ್ನೊಂದು ವಿಧದಿಂದ ಹಾಗೆ ಇದೆ ಎಂದು ಹೇಳಿ ಎಲ್ಲರ ಅವಗಾಹನೆಗೆ ಅವಕಾಶವನ್ನು ಕಲ್ಪಿಸಿಕೊಡುವದು ಸಾಪೇಕ್ಷ ವಿಧಾನದ ಲಕ್ಷಣವಾಗಿದೆ. ಜೈನರ 'ಸ್ಯಾದ್ವಾದ' ದರ್ಶನದಲ್ಲಿ, ಪಾಶ್ಚಿಮಾತ್ಯರ ಉಪಯುಕ್ತತಾವಾದದಲ್ಲಿ (Pragmatism) ವಿಜ್ಞಾನ ಕ್ಷೇತ್ರದ ಸಂಬಂಧ ಸಿದ್ಧಾಂತದಲ್ಲಿ (Theory of Relativity) ನಾವಿದನ್ನು ಕಾಣಬಹುದು. ಒಂದು ಪಕ್ಷದ ಪರವಾಗಿ ವಾದ ಮಾಡುತ್ತ ಹೋಗಿ ಕೊನೆಗೆ ಆ ವಾದವು ಸಿದ್ಧವಾಯಿತು ಎನ್ನುವಷ್ಟರಲ್ಲಿ ಅದು ಪ್ರತಿಪಕ್ಷದವರ ಸಿದ್ಧಾಂತದಲ್ಲಿ ಪರಿಸಮಾಪ್ತಿಯನ್ನು ಹೊಂದುವಂತೆ ಮಾಡುವದು ಸಮನ್ವಯ ವಿಧಾನದ ತಿರುಳು. ಉದಾಹರಣೆಗಾಗಿ: ಭೌತಿಕ ವಾದವನ್ನೇ ಸಮರ್ಥನೆ ಮಾಡುತ್ತ ಹೋಗಿ ಕೊನೆಗೆ ಅದರ ಸಮರ್ಥನೆಯಲ್ಲಿ ವಾದ ಮಾಡುವವನು ಆತ್ಮವು ಸತ್ಯವೆಂದು ಒಪ್ಪಬೇಕಾಗುವದೆಂದು ತೋರಿಸು-ವದೂ, ಅದರಂತೆಯೇ ಚೈತನ್ಯವಾದದ ಪಕ್ಷ ಹಿಡಿದು ವಾದಿಸುತ್ತ ಜ್ಞಾತೃವಾದ ಆತ್ಮನು ಇರುವನೆಂದು ಸಾಧಿಸಬೇಕಾದರೆ ಅದು ತಿಳಿಯುವ ಮತ್ತು ಅದರಿಂದ

ಭಿನ್ನವಾದ ಜ್ಞೇಯ ವಸ್ತುವು ಇದೆ ಎಂದು ಒಪ್ಪಬೇಕಾಗುವದಲ್ಲ ಎಂದು ತೋರಿಸುವದೂ, ಅಂತ್ಯದಲ್ಲಿ ಏಕಪಕ್ಷವಾದದ ಸಲುವಾಗಿ ಪರಸ್ಪರ ವಿರೋಧಿಗಳಾಗಿ ಪರಿಣಮಿಸಿದ ಸಿದ್ಧಾಂತಗಳನ್ನು ಸಮನ್ವಯ ದೃಷ್ಟಿಯಿಂದ ನೋಡಿದಾಗ ಅವು ಅನ್ಯೋನ್ಯಾಶ್ರಯಿಗಳೆಂದು ಸ್ಥಾಪಿಸುವದೂ ಸಮನ್ವಯ ವಿಧಾನದ ಲಕ್ಷಣಗಳಲ್ಲಿ ಸಮಾವೇಶವಾಗುತ್ತವೆ. ಪ್ಲೇಟೋನ ಸಂವಾದಗಳಲ್ಲಿ, ಉಪನಿಷತ್ತಿನ ಕೆಲವೆಡೆಗಳಲ್ಲಿ, ವೀರಶೈವರ ಪ್ರಕ್ರಿಯೆಯಲ್ಲಿ, ಎಲ್ಲಕ್ಕಿಂತಲೂ ಮಿಗಿಲಾಗಿ ಇತ್ತೀಚೆಗಿನ ಪಂಡಿತರಾದ ಡಾಕ್ಟರ ಭಗವಾನದಾಸ, ಶ್ರೀ ಅರವಿಂದ ಘೋಷ ಮೊದಲಾದವರಿಂದ ಪ್ರಚಲಿತವಾದ ಸಮ್ಯಗದ್ವೈತದಲ್ಲಿ ಈ ಸಮನ್ವಯ ವಿಧಾನವನ್ನು ಗುರುತಿಸಬಹುದು.

ವಿಜ್ಞಾನವು (ವಿಕಾಸ ವಾದವೂ ಸಹ) ವಿಶೇಷತಃ ಪ್ರಕೃತಿಯನ್ನು ನಂಬಿ ಜಡವಾದವನ್ನು ಎತ್ತಿ ಹಿಡಿಯಲು ಭೌತಿಕ ದೃಷ್ಟಿಯನ್ನೇ ಆಧಾರವಾಗಿಟ್ಟುಕೊಂಡಿದ್ದರೆ, ತತ್ವಜ್ಞಾನವು (ಭಾರತೀಯರು ತಿಳಿದುಕೊಂಡಂತೆ ಈ ತತ್ವ ಜ್ಞಾನವು) ಮುಖ್ಯವಾಗಿ ಆಧ್ಯಾತ್ಮಿಕ ದೃಷ್ಟಿಯನ್ನು ಆಶ್ರಯಿಸಿಕೊಂಡಿದೆ. ವಿಜ್ಞಾನವು ನಮ್ಮ ವಿಶ್ವದ ಒಂದೊಂದು ಪಾರ್ಶ್ವವನ್ನು ಜ್ಞಾನಕ್ಕಾಗಿ ಬೇರೆ ಬೇರೆ ವಿಭಾಗಗಳನ್ನಾಗಿ ವಿಂಗಡಿಸಿ, ಅವುಗಳ ವೈಶಿಷ್ಟ್ಯವನ್ನು ಪ್ರತ್ಯಕ್ಷ ಮತ್ತು ಪ್ರಯೋಗಗಳ ಸಹಾಯದಿಂದ ಪೃಥಕ್ಕರಿಸಿ ತಿಳಿಯಲೆತ್ನಿಸುತ್ತದೆ. ಇವನ್ನೆಲ್ಲ ಒಟ್ಟಾಗಿ ನೋಡಿದಾಗ ಇವು ಹೇಗೆ ತೋರುವವು ಎಂಬ ಗೊಡವೆಗೆ ವಿಜ್ಞಾನವು ಹೋಗುವದಿಲ್ಲ. ವಿಶ್ವದ ಬಿಡಿಬಿಡಿಯಾದ ಪಾರ್ಶ್ವಗಳಲ್ಲಿ ಇಡಿಯಾಗಿ ಪುರುಷನನ್ನು ಗುರುತಿಸುವುದೇ ತತ್ವಜ್ಞಾನದ ಉದ್ದೇಶವಾಗಿರುತ್ತದೆ.

ಮಣಿಗಳ ಸೂತ್ರದಂತೆ ತ್ರಿಣಯನ, ನೀನಿಪ್ಪೆಯಯ್ಯಾ !
ಅಣುರೇಣು ಗುಣಭರಿತನೆಂದು ಮಣಿವುತಿಪ್ಪೆನಯ್ಯಾ, ರಾಮನಾಥಾ !

ದೇವರ ದಾಸಿಮಯ್ಯನ ಈ ವಚನದಲ್ಲಿ ವಿಜ್ಞಾನಿ ಮತ್ತು ತತ್ವಜ್ಞಾನಿ ಇವರೀರ್ವರ ದೃಷ್ಟಿಕೋನವನ್ನು ಕಾಣಬಹುದು. ಬಿಡಿ ಬಿಡಿಯಾದ ಮಣಿಗಳ ಕಡೆಗೆ ವಿಜ್ಞಾನದ ದೃಷ್ಟಿ. ಅದು ಬೇರೆ ಬೇರೆಯಾಗಿರುವ ಮಣಿಗಳ ಗಾತ್ರವನ್ನು ಮಾತ್ರ ಗಣಿಸುವದು. ಅವುಗಳನ್ನು ಒಂದುಗೂಡಿಸುವ ಸೂತ್ರದ ಕಡೆಗೆ ಅದರ ಲಕ್ಷವಿಲ್ಲ. ಆದರೆ ಅವುಗಳನ್ನೆಲ್ಲ ಒಂದುಗೂಡಿಸುವ ಸೂತ್ರವನ್ನು ಅರಿಯುವದು ತತ್ವಜ್ಞಾನದ ಕಾರ್ಯ. ವಿಜ್ಞಾನವು ಸೂತ್ರವನ್ನು ಮರೆತು ಕೇವಲ ಗಾತ್ರ.

ವನ್ನಷ್ಟೆ ಗಣಿಸಿದ್ದರಿಂದ ಪಾತ್ರವು ಎಲ್ಲಿಯೋ ಕಳಚಿಹೋಯಿತು. ಹಾಗು ತತ್ವಜ್ಞಾನವು ಸೂತ್ರವನ್ನಷ್ಟೇ ಅರಿತು ಗಾತ್ರವನ್ನು ಕಡೆಗಣಿಸಿದ್ದರಿಂದ ಪಾತ್ರವು ಅಯಥಾರ್ಥವಾಯಿತು. ನಮಗೆ ಬೇಕಾದುದು ಸೂತ್ರವನ್ನು ಮರೆತ ವಿಜ್ಞಾನವಲ್ಲ, ಇಲ್ಲವೆ ಗಾತ್ರವನ್ನು ಲಕ್ಷಿಸದ ತತ್ವಜ್ಞಾನವಲ್ಲ. ಸೂತ್ರ ಗಾತ್ರಗಳೆರಡನ್ನು ಸಮನ್ವಯಗೊಳಿಸುವ ಆತ್ಮಜ್ಞಾನವು ನಮಗೆ ಬೇಕು. ವಿಜ್ಞಾನ ತತ್ವಜ್ಞಾನಗಳ ಮಧುರ ಮಿಲನವೇ ಆತ್ಮಜ್ಞಾನದ ಇಲ್ಲವೆ ಅನುಭಾವದ ಅಡಿಗಲ್ಲು.

ಸೂತ್ರಧಾರಿಯು ನೀನು ಪಾತ್ರಧಾರಿಯು ನಾನು
ಆವ ಪಾತ್ರವನಿತ್ತಡೇನು ನೀನೆನಗೆ-

ಪರಮಾತ್ಮನನ್ನು ಕುರಿತಾದ ಈ ಬಿನ್ನಹದಲ್ಲಿ ಸೂತ್ರ—ಪಾತ್ರಗಳ ಸೂಕ್ಷ್ಮ ತಿಳಿವಳಿಕೆಯೊಡನೆ ಅನುಭಾವದ ಹೊಂದುಗೆಯಲ್ಲಿ ಅವೆರಡರ ಸುಮಧುರವಾದ ಸಮನ್ವಯವುಂಟಾಗುತ್ತದೆ ಎಂಬ ಭಾವವು ವ್ಯಕ್ತವಾಗುತ್ತದೆ. ತತ್ವಜ್ಞಾನಕ್ಕೆ ವಿಜ್ಞಾನದ ಸಂಪರ್ಕವಿಲ್ಲದಿದ್ದರೆ ಅದು ಬರಿಯ ಮೂಢ ನಂಬಿಗೆಗಳ ಬೀಡಾಗುವದು. ವಿಜ್ಞಾನಕ್ಕೆ ತತ್ವಜ್ಞಾನದ ಸಂಬಂಧವೂ ತಪ್ಪಿದರೆ ಆಗ ಅವರ ಬೆಳವಣಿಗೆಯೇ ನಿಂತುಹೋಗುವದು. ಯುರೋಪದಲ್ಲಿ ತತ್ವಶಾಸ್ತ್ರವು ಸುಮಾರು ಸಾವಿರ ವರುಷ ವಿಜ್ಞಾನವನ್ನು ಬಿಟ್ಟು ಬಾಳಲಿಕ್ಕೆ ಪ್ರಯತ್ನ ಮಾಡಿತು. ಅದರ ಫಲವಾಗಿ ತತ್ವಜ್ಞಾನವು ಮೂಲೆಗೆ ಬಿದ್ದುಬಿಟ್ಟಿತು. ಹಾಗೆಯೇ ಭಾರತದಲ್ಲಿ ತತ್ವಜ್ಞಾನವು ವೈಜ್ಞಾನಿಕ ವಿಚಾರದಲ್ಲಿ ಔದಾಸೀನ್ಯವನ್ನು ತೋರಿಸಿದುದರ ಫಲವಾಗಿ ಅದರ ಬೆಳವಣಿಗೆಯೇ ನಿಂತುಹೋಯಿತು. ತತ್ವಶಾಸ್ತ್ರದಲ್ಲಿ ಒಂದು ಹೊಸ ಜಾಗ್ರತಿಯುಂಟಾದರೆ ಅದರ ಫಲವಾಗಿ ವಿಜ್ಞಾನ ಕ್ಷೇತ್ರದಲ್ಲಿ ಕಾರ್ಯವು ಬಹಳ ಚುರುಕಾಗಿ ನಡೆಯುವದು.

ಕೆಲವರು ತಿಳಿಯುವಂತೆ ತತ್ವಶಾಸ್ತ್ರವು (Philosophy) ಬರಿಯ ಜಿಜ್ಞಾಸು ಮಾತ್ರವೆ? ಅದಕ್ಕೂ ಜೀವನಕ್ಕೂ ಏನೂ ಸಂಬಂಧವಿಲ್ಲವೆ? ಮುಕ್ತಿಗೋಸುಗವಲ್ಲವೆ ಸತ್ಯಾನ್ವೇಷಣೆಗೆ ನಿಲ್ಲುವದು ?— ಎಂಬೀ ಪ್ರಶ್ನೆಗಳಿಗೆ ಸಮಾಧಾನಕರವಾದ ಉತ್ತರಗಳನ್ನು ಕಂಡುಕೊಳ್ಳಬೇಕು. ಬರಿಯ ಸತ್ಯಾನ್ವೇಷಣೆಯೇ ತತ್ವಶಾಸ್ತ್ರದ ಉದ್ದೇಶ, ಮೋಕ್ಷದ ವಿಚಾರವೇನಿದ್ದರೂ ಅದು ಅನುಭವ ಮಾರ್ಗಕ್ಕೆ (Mysticism) ಸಂಬಂಧಪಟ್ಟುದು— ಎಂಬುದು ಸಾಮಾನ್ಯವಾಗಿ ಪಾಶ್ಚಿಮಾತ್ಯರ ಅಭಿಪ್ರಾಯ. ಆದರೆ ಇದಕ್ಕೆ ಅಪವಾದಗಳೂ ಇವೆ. ಸಾಕ್ರೆಟೀಸ,

ಪ್ಲೇಟೊ, ಪ್ಲೋಟಿನಸ್, ಸ್ಪಿನೋಝಾ ಮುಂತಾದ ತಾತ್ವಿಕರ ಗ್ರಂಥಗಳಿಂದ ಸತ್ಯಶೋಧನೆಗೂ ಮುಕ್ತಿಸಾಧನೆಗೂ ನಿಕಟವಾದ ಸಂಬಂಧವಿದೆ ಎಂಬುದು ಸ್ಪಷ್ಟವಾಗುವದು. ಹಾಗೆಯೇ ತತ್ವಜ್ಞಾನವು ಬರಿಯ ಸತ್ಯಶೋಧನೆಯಲ್ಲ, ಅದು ಜೀವನ್ಮುಕ್ತಿಯ ಸಾಧನೆಯೂ ಅಹುದು ಎಂಬುದು ಭಾರತೀಯ ತಾತ್ವಿಕರ ಅಭಿಮತ. ತತ್ವಚಿಂತನೆಗೆ ಅಸಾಧಾರಣವಾದ ಯಾವುದಾದರೊಂದು ಶಕ್ತಿ-ವಿಶೇಷವು ಅವಶ್ಯವೆಂದು ಪಾಶ್ಚಾತ್ಯರು ಒಪ್ಪುವದಿಲ್ಲ. ಶಾಸ್ತ್ರಾಧ್ಯಯನಕ್ಕೆ ಹೇಗೋ ಹಾಗೆಯೇ ಇನ್ನುಳಿದ ಕ್ಷೇತ್ರಗಳಲ್ಲಿಯೂ ಹರಿತವಾದ ಬುದ್ಧಿ ಇರ-ಬೇಕೆಂದು ಅವರು ಹೇಳುತ್ತಾರೆ. ಬುದ್ಧಿಯ ಕಾರ್ಯವು ಚುರುಕಾಗಿದ್ದರೆ ಸಾಕು ಎಂದು ಅವರ ಅಭಿಪ್ರಾಯ. ಆದ್ದರಿಂದ ಅವರ ವಿಚಾರಸರಣಿಯು ತರ್ಕಪ್ರಧಾನವಾಗಿದೆ. ಅವರ ಅಭಿಮತದಂತೆ ತತ್ವಶಾಸ್ತ್ರದ ಪ್ರಯೋಜನವಿರುವದು ಅದು ಪ್ರತಿಪಾದಿಸುವ ಸಿದ್ಧಾಂತಗಳಲ್ಲಿ ಅಲ್ಲ, ಆದರೆ ಆ ಸಿದ್ಧಾಂತಗಳನ್ನು ಮುಟ್ಟಲು ಬೇಕಾಗುವ ಪಕ್ಷಪಾತ ರಹಿತವಾದ ನಿರ್ವಿಕಾರ ವಿಚಾರಸರಣಿಯಲ್ಲಿ! ಇದರಿಂದ ತತ್ವಜ್ಞಾನಕ್ಕಿಂತ ತತ್ವಾನ್ವೇಷಣ ದೃಷ್ಟಿಗೇ ಹೆಚ್ಚು ಪ್ರಾಶಸ್ತ್ಯ ಉಂಟಾಗುವದು. ಭಾರತದಲ್ಲಿ ತತ್ವಶಾಸ್ತ್ರವನ್ನು ಈ ರೀತಿಯಲ್ಲಿ ಅರ್ಥೈಸುವದಿಲ್ಲ. ಆತ್ಮತತ್ವದ ಸಮ್ಯಕ್‌ಬೋಧ ಇಲ್ಲವೆ ಸರ್ವವಸ್ತುಗಳ ಜೀವಾಳದ ಸಾಕ್ಷಾತ್ಕಾರ, ಇದುವೆ ತತ್ವವಿವೇಚನೆಯ ಗುರಿಯೆಂದು ಇಲ್ಲಿ ತಿಳಿಯಲ್ಪಡುತ್ತದೆ. ಭಾರತೀಯರ ಈ ವಿಚಾರಸರಣಿಯು ತರ್ಕಪ್ರಧಾನವಾದುದಲ್ಲ; ಅದು ಸ್ವಾನುಭಾವ ಪ್ರಧಾನವಾದುದು. ಅವರ ಅನುಭಾವದಲ್ಲಿ ತರ್ಕಕ್ಕೆ ಪ್ರಾಧಾನ್ಯವಿಲ್ಲ, ಅದು ತತ್ವಾ-ನ್ವೇಷಣೆಗೆ ಸಾಧಕವಾದ ಅಂಗವಾಗಿ ಮಾತ್ರ ಉಳಿಯುವದು. ವೀರಶೈವದ ಪರಿವಿಡಿಯಲ್ಲಿ ಅರಿವೇ ಗುರು, ಆಚಾರವೇ ಲಿಂಗ ಅನುಭಾವವೇ ಜಂಗಮವೆನಿಸುತ್ತದೆ. ಜಂಗಮಕ್ಕೆ ತ್ವರಿತಜ್ಞಾನವೆಂದೂ ಹೆಸರು. ಸ್ಫುರಣಜ್ಞಾನ, ಸಮ್ಯಕ್-ಜ್ಞಾನ ದೃಷ್ಟಿಗಳೇ ಅನುಭಾವದ ಮುಖ್ಯ ಲಕ್ಷಣವು.

ಸಮ್ಯಕ್‌ಜ್ಞಾನ ಮತ್ತು ಅನುಭಾವಗಳಲ್ಲಿ ಅವಿರಳವಾದ ಹೊಂದಾಣಿಕೆಯಿದೆ. ಇಂಥ ಸಾಕ್ಷಾತ್ ಅನುಭಾವವೇ ಜ್ಞಾನದ ಸತ್ಯತೆಯನ್ನು ಸಂಶಯ ಸಂಕಲ್ಪಗಳಿಂದ ಮುಕ್ತಗೊಳಿಸುವ ಒರೆಗಲ್ಲಾಗಿರುವುದರಿಂದ ತತ್ವಶಾಸ್ತ್ರದಲ್ಲಿ ಅಪರೋಕ್ಷಾನುಭೂತಿಗೆ ತರ್ಕಕ್ಕಿಂತಲೂ ಹೆಚ್ಚಿನ ಮಹತ್ವವುಂಟಾಗಿರುತ್ತದೆ. ಆತ್ಮವಸ್ತುವು ನಮ್ಮ ಅಳವಿಗೆ ಮೀರಿದ ಯಾವುದೋ ಒಂದು ವಿಚಿತ್ರ ರಹಸ್ಯ-ವಲ್ಲ. ಅದು ಉಳಿದೆಲ್ಲ ಬಾಹ್ಯವಸ್ತುಗಳಿಗಿಂತಲೂ ಅತ್ಯಂತ ಸನ್ನಿಹಿತವಾಗಿ

ನಮ್ಮೊಡನೆಯೇ ನಮ್ಮಲ್ಲಿಯೇ ನೆಲಸಿರುವದು. ಆತ್ಮವು ಸ್ವಯಂಪ್ರಕಾಶಕ-ವಾಗಿರುವುದರಿಂದ ಅದರ ಪ್ರಕಾಶದಿಂದಲೇ ಹೊರಗಿನ ಜಗತ್ತೆಲ್ಲ ನಮಗೆ ಗೋಚರವಾಗುವದು. ಆತ್ಮಜ್ಯೋತಿಯ ಅನುಭೂತಿಯುಳ್ಳವನೇ, ಅಪರೋ-ಕ್ಷಾನುಭೂತಿಯೇ ಅನುಭಾವಿ, ತತ್ವಜ್ಞಾನಿ. ಅನುಭಾವಿಗೆ ಆತ್ಮಸಾಕ್ಷಾತ್ಕಾರವೆ ಮುಖ್ಯ ಧ್ಯೇಯ; ಅದಕ್ಕೆ ಜ್ಞಾನ ಶ್ರದ್ಧಾ ಕರ್ಮ ಶಕ್ತಿಗಳು ಅಂಗಗಳು ಎಂಬು-ದನ್ನು ಲಕ್ಷಿಸಿದರೆ ವಿಜ್ಞಾನ ತತ್ವಜ್ಞಾನ ಅನುಭಾವಗಳಲ್ಲಿ ವಿರೋಧವೇ ಉಂಟಾ-ಗುವದಿಲ್ಲ. ಅವು ಒಂದಕ್ಕೊಂದು ಪೂರಕವಾಗಿರುವವು, ಪೋಷಕವಾಗಿರುವವು. ಆದರೆ ಇವೆಲ್ಲವನ್ನು ಸಮನ್ವಯಗೊಳಿಸುವುದು ಸುಲಭಸಾಧ್ಯವೇ ?

ಮಾನವ ಮಾನವರಲ್ಲಿ ಸಂಕುಚಿತದೃಷ್ಟಿ ವ್ಯಾಪಿಸಿಕೊಂಡಿರುವವರೆಗೆ ಸಮನ್ವಯ ಪರವಾದ ಪ್ರಗತಿಯನ್ನು ಕಾಣುವದು ಶಕ್ಯವಿಲ್ಲ. ಮತಾಭಿಮಾನವು ಸಂಕುಚಿತ ದೃಷ್ಟಿದ್ಯೋತಕವಾಗಿರುತ್ತದೆ. ಈ ಮತಾಭಿಮಾನವು ಸಮನ್ವಯ ದೃಷ್ಟಿಯನ್ನು ಕಲುಷಿತಗೊಳಿಸಿತು. ಮತಮತಾಂತರಗಳಲ್ಲಿಯ ದೋಷಗಳು ಮತಿದೃಷ್ಟಿಯನ್ನು ಮುಸುಕಿ ಅಪರಿಮಿತವಾದ ಅನರ್ಥಗಳನ್ನುಂಟುಮಾಡಿದು-ವೆಂಬುದನ್ನು ಇತಿಹಾಸವು ಎತ್ತಿ ತೋರಿಸುತ್ತದೆ. ಯುರೋಪದಲ್ಲಿ ಧರ್ಮ-ಯುದ್ಧದ (Crusade) ನೆವದಿಂದ ಎಷ್ಟು ಸಾರೆ ಅನರ್ಥ ಸಂಭವಿಸಲಿಲ್ಲ! ಪ್ರೊಟೆಸ್ಟಂಟ ಮತ್ತು ಕ್ಯಾಥೊಲಿಕ್ ಪಂಗಡಗಳ ಸಂಕುಚಿತ ಮತದೃಷ್ಟಿಯಿಂದ ಅದೆಂಥ ದುಃಖ ದುಮ್ಮಾನಗಳು ಕಾಣಿಸಿಕೊಳ್ಳಲಿಲ್ಲ! ಖಡ್ಗದ ಬಲದ ಮೇಲೆ ಮಹಮ್ಮದೀಯ ದಾಳಿಗಾರರಿಂದ, ಧರ್ಮಪ್ರಸಾರಕರಿಂದ ಯುರೋಪ ಏಶಿಯಾ ಖಂಡಗಳಲ್ಲಿ ಅದೆಂಥ ವಿಪತ್ಪರಂಪರೆ ಹುಟ್ಟಿಕೊಳ್ಳಲಿಲ್ಲ! ನಮ್ಮೀ ಭಾರತದಲ್ಲಿಯೂ ಅನೇಕ ಮತಪಂಗಡಗಳಲ್ಲಿಯ ಪರಸ್ಪರ ವೈಷಮ್ಯದಿಂದ ಅದೆಂಥ ಗಂಡಾಂತರ ಪರಿಸ್ಥಿತಿಯುಂಟಾಗಲಿಲ್ಲ, ಹಿಂಸಾಚಾರಗಳು ನಡೆಯಲಿಲ್ಲ! ಮಾನವನಲ್ಲಿರುವ ಸಂಕುಚಿತವೃತ್ತಿ ಮತ್ತು ವ್ಯಾವರ್ತಕ ದೃಷ್ಟಿ ಇವೆರಡೂ ಮತದೃಷ್ಟಿಯ ಸಾಮಾನ್ಯವಾದ ದೋಷಗಳು, ಮಾನವ ಕುಲಘಾತಕವಾದವುಗಳು. ಮಾನವನಲ್ಲಿ ಸಾಮೂಹಿಕವೃತ್ತಿ ಇದೆ ಎನ್ನೋಣ; ಆದರೆ ಅದು ಇರುವು-ದಾದರೆ ತಮ್ಮ ತಮ್ಮ ಮತದವರ ವಿಷಯದಲ್ಲಿ ಮಾತ್ರ ವ್ಯಕ್ತವಾಗುತ್ತದೆ. ಅದರಂತೆ ವ್ಯಾಪಕದೃಷ್ಟಿಯೂ ಒಂದಿಷ್ಟು ಇದೆ ಎನ್ನೋಣ, ಅದೂ ಸಹ ತಮಗೆ ಅನುಕೂಲವಾದವರ ವಿಷಯದಲ್ಲಿ ಮಾತ್ರ ಕಂಡುಬರುತ್ತಿದೆ.

ಸಾರ್ವತ್ರಿಕವಾಗಿ ಈ ಸಾಮೂಹಿಕಸ್ವತ್ತ್ರಿ ವ್ಯಾಪಕದೃಷ್ಟಿಗಳು ಬೆಳೆದು ಬರಲಿಲ್ಲ. ಆದುದರಿಂದ ಮಾನವ ಸಂಸ್ಕೃತಿಯ ಮೇಲೆ ಅವುಗಳ ಪ್ರಭಾವ ಪರಿಣಾಮವು ಅಷ್ಟೊಂದು ತೋರಿಬರಲಿಲ್ಲ. ಒಂದು ವೇಳೆ ಮಾನವ ಸಂಸ್ಕೃತಿಯು ಅವುಗಳಿಂದ ಪ್ರಭಾವವನ್ನು ಪಡೆದಿದೆ ಎಂದು ಹೇಳುವುದಾದರೆ ಅದು ಆಯಾ ದೇಶ ಕಾಲ ಪರಿಸ್ಥಿತಿಗಳಿಗನುಸಾರವಾಗಿ ಪಡೆದ ಪ್ರಭಾವ ಅಷ್ಟೇ. ಅಖಂಡ ಮಾನವ ಕುಲಕ್ಕೆ ಅದರಿಂದ ಉಂಟಾದ ಪರಿಣಾಮ ಪರಿಮಿತವಾದುದು, ಹೇಳಿಕೊಳ್ಳುವಷ್ಟು ಇಲ್ಲವೆಂದೇ ಬಗೆಯಬೇಕು. ಮತಮತಾಂತರಗಳು ಇಡಿ–ಬಿಡಿಗಳ ಕಾರ್ಯಕ್ಷೇತ್ರವನ್ನು ಬೇರ್ಪಡಿಸಿ ಇಡಿಗಾಗಿ ಗೊತ್ತಿನ ಗುರಿಯನ್ನು, ಆದರ್ಶದ ಸೀಮೆಯನ್ನು ಬಹು ಎತ್ತರದಲ್ಲಿ ನೆಟ್ಟು, ಅದನ್ನು ಕಾರ್ಯಕ್ಷೇತ್ರದಲ್ಲಿ ಬಹಳ ಆಕುಂಚನಗೊಳಿಸಿದವು. ಸಹನಶೀಲತೆಯು ತಮ್ಮ ತಮ್ಮ ಮತ ಸಂಸ್ಥೆಗಳಿಗಾಗಿ ಮಾತ್ರ; ಅದೇ ತಮ್ಮ ತಮ್ಮ ಮತಪ್ರಸಾರದ ದೆಸೆಯಿಂದ ಸಹನೆಯನ್ನು ಮೀರುವ ಪರಿಸ್ಥಿತಿಯನ್ನು ನಿರ್ಮಿಸಿದುದನ್ನು ಜ್ಞಾಪಿಸಿಕೊಳ್ಳಬೇಕು.

ಮತದೃಷ್ಟಿಯು ವ್ಯಕ್ತಿಯ ಬೆಳವಣಿಗೆಗೆ ಅವಶ್ಯವಾದುದನ್ನು ಒತ್ತಿ ಸೂಕಿತು, ಪರಿಮಿತವಾದ ಸಾಮಾಜಿಕ ರಚನೆಯಲ್ಲಿ ಅದನ್ನೇ ಎತ್ತಿಹಿಡಿಯಿತು. ವ್ಯಕ್ತಿ–ಸಮಾಜದಲ್ಲಿ ಇರಬೇಕಾದ ವ್ಯಾಪಕವಾದ ಮಧುರ ಬಾಂಧವ್ಯಕ್ಕೆ ಅಲ್ಲಿ ಅವಕಾಶವಾಗಲಿಲ್ಲ, ಅಲ್ಲಿ ಬುದ್ಧಿಪ್ರಸನ್ನತೆಯೂ ಬೆಳೆದು ಬರಲಿಲ್ಲ. ಸಾಮೂಹಿಕ ಸಮಾಜವ್ಯವಸ್ಥೆಯಲ್ಲಿ ಪುರುಷ ಪ್ರಯತ್ನಕ್ಕೆ ಒಂದು ಉನ್ನತ ಸ್ಥಾನವಿದೆ ಎಂಬುದರ ಅರಿವು ಮತದೃಷ್ಟಿಗೆ ಉಳಿಯಲಿಲ್ಲ. ಮತದ ಬಗೆಗಿನ ಮೂಢ ಭಕ್ತಿಗೆ ಕುರುಡು ನಂಬಿಗೆ (Blind faith) ಮುಂಧೋರಣೆ ಹರಿಯದೆ ಹೋಯಿತು. ಆಳವೂ ಉತ್ಸಾಹಪೂರ್ಣವೂ ಆದ ಭಕ್ತಿಭಾವನೆಯೊಂದಿಗೆ ಬೌದ್ಧಿಕ ಪ್ರಸನ್ನತೆಯು (Englightened faith) ಬೆಳೆಯಲಿಲ್ಲ, ಬೆಳೆಯಲಿಕ್ಕೆ ಅವಕಾಶವೂ ದೊರೆಯಲಿಲ್ಲ. ಆದುದರಿಂದ ಸಾರ್ವತ್ರಿಕವಾದ ಆತ್ಮೋನ್ನತಿಯ ಕಾರ್ಯವು ಕುಂಠಿತಗೊಂಡಿತು. ಆತ್ಮೋನ್ನತಿಗೆ ತೊಡಗಿದ ವ್ಯಕ್ತಿಗೆ 'ಗುರುವಿನಲ್ಲಿ ಗುಣವನರಸಬೇಡ' ಎಂದು ಹೇಳುವ ಪರಿಪಾಠವೊಂದು ನಮ್ಮ ನಾಡಿನಲ್ಲಿ ರೂಢವಾಗುತ್ತ ಬಂದಿದೆ. ಆದರೆ ಭವಸಾಗರವನ್ನು ದಾಂಟಲಿಕ್ಕೆಂದು ಸಹಾಯಕ್ಕೆ ತೆಗೆದುಕೊಂಡಿದ್ದ ಸೋರೆಕಾಯಿಗೆ ತೂತು ಬಿದ್ದಿರಬೇಕೆ? 'ಗುರುವಿನಲ್ಲಿ ಗುಣವನರಸುವೆ' ಎಂದು ಉದ್ಘೋಷಿಸಿದ ಶರಣವಾಣಿಯಲ್ಲಿ ಆತ್ಮೋನ್ನತಿಗೆ ತೊಡಕಾಗಿ ಬರುವ ಸಂಗತಿಗಳನ್ನು ದೃಢತರವಾಗಿ ಎದುರಿಸುವ ಎದೆಗಾರಿಕೆ

ವ್ಯಕ್ತವಾಗುತ್ತದೆ; ಮಾತ್ರವಲ್ಲ, ಜೊತೆಗೆ ಬೌದ್ಧಿಕ ಪ್ರಸನ್ನತೆಯೂ ಕಂಡು ಬರುತ್ತಿದೆ. ಇತಿಹಾಸದಲ್ಲಿ ಈ ಪ್ರಸಂಗವನ್ನೊಂದನ್ನು ಅಪವಾದಾತ್ಮಕವಾಗಿ ಗಣಿಸಬೇಕು.

ಮತೀಯ ದೃಷ್ಟಿಯಿಂದೊದಗಿದ ಇಹಪರಗಳ ಕಲ್ಪನೆಯಿಂದ ಸಾಮಾಜಿಕ ಪ್ರಗತಿಗೆ ಉಂಟಾದ ಆಘಾತವು ಅಸಾಮಾನ್ಯವಾದುದು. ಇಹಲೋಕವು ಪರವನ್ನು ಸಾಧಿಸುವ ಒಂದು ರಂಗಸ್ಥಲ ಎಂದು ಬಗೆಯದೆ, ಇಹದ ಬಗೆಗೆ ಬರಿಯ ಶುಷ್ಕ ವೈರಾಗ್ಯ ಬೋಧನೆಯು ಪ್ರಸಾರವಾಗಿ ಈ ಪ್ರಪಂಚವು ಅಸ್ಥಿರ, ಇಹದ ಬಾಳುವೆಯು ಮೂರು ದಿನಗಳ ಸಂತೆ ಮಾತ್ರ— ಎಂಬ ತಿಳಿವಳಿಕೆಯು ಬೆಳೆಯಿತು. ಇಹದ ಬಗೆಗಿನ ಕರ್ತವ್ಯಪರಾಙ್ಮುಖತೆ ಹೆಚ್ಚಾಗಿ ರೂಢವಾಗಿ ಬಿಟ್ಟಿತು. ಸ್ವರ್ಗವನ್ನು ಸತ್ಯಯುಗದಲ್ಲಿ ಕಾಣಬೇಕು ಎಂಬ ವಾದದ ಪರಿಣಾಮ ದಿಂದ ಲೌಕಿಕ ಭೋಗದಲ್ಲಿ ವಿಪರೀತವಾದ ಅನಾಸಕ್ತಿಯು ಬೆಳೆಯಿತು; ಐಹಿಕ ಸುಖವೂ ಎರವಾಯಿತು; ಅದರಂತೆ ಪರದ ಕಲ್ಪನೆಯು ಕನಸಿನಲ್ಲಿಯ ಆದರ್ಶ-ವಾಯಿತು. ಪೂರ್ಣತೆಯೂ, ನೈತಿಕ ಬೆಳವಣಿಗೆಯೂ, ಮೋಕ್ಷಸಾಧನೆಯೂ ಕೇವಲ ವೈಯಕ್ತಿಕ ಧ್ಯೇಯಗಳಾಗಿ ಪರಿಣಮಿಸಿದವು. ಬುದ್ಧಿಶಕ್ತಿಯಲ್ಲಿಯ ಅಪನಂಬಿಕೆ ವಿಪರೀತವಾಗಿ ಹೆಚ್ಚಾಯಿತು. ಪಾರಲೌಕಿಕ ವಿಶೇಷ ವೃತ್ತಿಯೂ ಅಧಿಕವಾಯಿತು; ಇವೆಲ್ಲವುಗಳಿಂದ ಸಾಮಾಜಿಕ ಪ್ರಗತಿಗೆ ಅತುಲವಾದ ಅಡೆತಡೆಯುಂಟಾಯಿತು.

ಕೇಡಿನ ಬಸಿರೊಳಗಿಂದ ಒಳಿತು ಬರುವುದೆಂದು ಹೇಳುತ್ತಾರಷ್ಟೆ ! ಮತಾಭಿಮಾನದಿಂದೊದಗಿದ ಅನಾಹುತವು ವ್ಯರ್ಥವಾಗಲಿಲ್ಲ. ಅದು ವೈಜ್ಞಾನಿಕ ದೃಷ್ಟಿಯ ಬೆಳವಣಿಗೆಗೆ ಕಾರಣವಾಯಿತು. ಈ ವಿಜ್ಞಾನವೇ ಪೌರುಷವಾದ ವನ್ನು ಸಾರಿತು. ಈ ವೈಜ್ಞಾನಿಕ ದೃಷ್ಟಿಯು ಮಾನವ ಸಂತತಿಯ ಜ್ಞಾನವನ್ನು ವಿಸ್ತೃತಗೊಳಿಸುವುದಲ್ಲದೆ ವಿಶಿಷ್ಟವನ್ನಾಗಿಯೂ ಮಾಡಿತು. ಸಂಶೋಧಕ ವಾದ, ಸುವ್ಯವಸ್ಥಿತವಾದ, ಅಚ್ಚುಕಟ್ಟಾದ ತಾಳ್ಮೆಗೆ ಈ ದೃಷ್ಟಿಯು ವಿಶಾಲವಾದ ಹಾಗು ವಿಶಿಷ್ಟವಾದ ಆ ಜ್ಞಾನವನ್ನು ಅಣಿಮಾಡಿತು. ಜಡದೃಷ್ಟಿಯ ಸಂಶೋಧನೆಯ ಕಾರ್ಯದಲ್ಲಿ ಅಷ್ಟೇ ಅಲ್ಲ, ಇನ್ನುಳಿದ ಸೃಷ್ಟಿಗಳನ್ನರಸುವ ಕಾರ್ಯದಲ್ಲಿ ಸಹ ಇದೇ ಬಗೆಯ ಕುತೂಹಲವನ್ನೂ ಬೌದ್ಧಿಕ ಸರಳತೆಯನ್ನೂ ಜ್ಞಾನಲಾಲಸೆಯನ್ನೂ ಹುಟ್ಟಿಸಿತು. ಅನೇಕ ಶೋಧಗಳನ್ನು ಬಗೆಬಗೆಯ ಉಪಕರಣಗಳನ್ನು ವ್ಯಾವಹಾರಿಕ ಶಕ್ತಿಗಳನ್ನು ಅದೆಷ್ಟೊ ಸವಲತ್ತುಗಳನ್ನು,

ಹಿತಕ್ಕಾಗಲಿ ಇಲ್ಲವೆ ಅಹಿತಕ್ಕಾಗಲಿ, ಆ ವೈಜ್ಞಾನಿಕ ದೃಷ್ಟಿಯು ತನ್ನ ಅನುಪಮವಾದ ಸಾಮರ್ಥ್ಯದಿಂದ ಅಸಾಧಾರಣವಾದ ಸಾಹಸದಿಂದ ಎಲ್ಲರ ಕೈವಶ ಮಾಡಿತು; ಮಾನವಕೋಟಿಯ ಧ್ಯೇಯಾತ್ಮಶಕ್ತಿಯನ್ನು ವಿಕಾಸಗೊಳಿಸಿತು. ಈ ಮಾತು ತೋರಿಕೆಗೆ ಸಟಿಯಾದರೂ ಆಳವಾದ ವಿಚಾರಾಂತ್ಯದಲ್ಲಿ ದಿಟವಾಗಿ ಕಾಣುವದು. ಒಟ್ಟಾರೆ, ಮಾನವನಿಗೆ ಹಿತಕರವಾದ ಆಶಾವಾದವನ್ನು ನೀಡಿ ಅದು ಅವನ ಸ್ವಭಾವದಲ್ಲಿ ಮಾರ್ದವವನ್ನುಂಟುಮಾಡಿತು; ಸಹನಶೀಲತೆಯನ್ನು ಹೆಚ್ಚಿಸಿತು; ಬಿಡುಗಡೆಯ ಬಯಕೆಯನ್ನು ಬೆಳೆಯಿಸಿತು. ಆದರೆ ವೈಜ್ಞಾನಿಕ ದೃಷ್ಟಿಯೇ ಸಾರಸರ್ವಸ್ವವಲ್ಲ; ವಿಜ್ಞಾನವು ಆತ್ಮಜ್ಞಾನದ ಒಂದು ಅಂಗ ಮಾತ್ರ. ಆದರೂ ನಾವು ಗಳಿಸಿದ ಜ್ಞಾನವು ಸರ್ವಾಂಗೀಣವಾಗಬೇಕಾದರೆ ಬೇರೆ ಬೇರೆ ಅಂಗಗಗಳನ್ನು ಅಲ್ಲಗಳೆಯಬಾರದು. ವಿವಿಧ ಅಂಗಗಳ ಯಥಾರ್ಥವಾದ ತಿಳಿವಳಿಕೆಯಿಂದಲೇ ನಿಜಲಿಂಗವೆನಿಸುವ ಪರಾತ್ಪರ ವಸ್ತುವಿನ ಜ್ಞಾನವು ಪರಿಪೂರ್ಣವೆನಿಸುವದು. ಈಗಿನ ವಿಜ್ಞಾನವು ಜಡದೃಷ್ಟಿಯನ್ನಷ್ಟೇ ತನ್ನ ಸಂಶೋಧಕ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿದ್ದರೆ ನಾವು ಅಚ್ಚರಿಪಡುವ ಕಾರಣವಿಲ್ಲ. ಏಕೆಂದರೆ ಇಂತಹ ಸಂಶೋಧಕ ವೃತ್ತಿಗೆ ಜಡದೃಷ್ಟಿಯ ಹೊರತು ಇನ್ನಾವ ಸೃಷ್ಟಿಯೂ ಆರಂಭದಲ್ಲಿ ಸಾಧ್ಯವಾಗಿ ಅನುಕೂಲಿಸುವದಿಲ್ಲ. ಸ್ಥೂಲ ಸೃಷ್ಟಿಯ ಜ್ಞಾನವನ್ನು ಚನ್ನಾಗಿ ಪಡೆದುಕೊಂಡ ಮೇಲೆಯೇ ಇನ್ನುಳಿದ ಸೃಷ್ಟಿಗಳ ಜ್ಞಾನವು ಸುಲಭವಾಗುವದು.

ಅನ್ನಮಯಕೋಶದ (ಪ್ರಕೃತಿಯ) ಆವಿರ್ಭಾವವೇ ವೈಜ್ಞಾನಿಕ ದೃಷ್ಟಿಯ ಅಂತಿಮ ಗುರಿಯಾಗಿದೆ. ಅಂದರೆ ಪಂಚಮಹಾಭೂತಗಳಲ್ಲಿ ಹುದುಗಿದ ಸಾಮರ್ಥ್ಯವನ್ನು ಬಹಿಷ್ಕರಿಸಿ ಆತ್ಮನ ಆನಂದಕ್ಕೆ ಅದನ್ನು ಅಣಿಮಾಡುವದು ಆ ವೈಜ್ಞಾನಿಕ ದೃಷ್ಟಿಗೆ ಲಕ್ಷ್ಯವಾಗಿದೆ. ಅನ್ನಮಯಕೋಶದ ಅವಿರ್ಭಾವವಿಲ್ಲದೆ ಆತ್ಮನ ಆನಂದವು ಅನಂತವೂ ಅಪರಿಮಿತವೂ ಆಗದು. ಹೀಗೆ ಆಲೋಚಿಸಿ ಆ ದೃಷ್ಟಿಯು ಪ್ರಕೃತಿಯ ಪ್ರತಿಮೆಗಳಾದ ವಿಚಾರ, ಪ್ರಗತಿ, ಸ್ವಾತಂತ್ರ್ಯ, ಮಾನವಸೇವೆ ಈ ಮುಂತಾದವುಗಳನ್ನು ತನ್ನ ಪೂಜ್ಯವಸ್ತುಗಳನ್ನಾಗಿಟ್ಟುಕೊಂಡಿತು. ವಿಚಾರಶಕ್ತಿಯೇ ಎಲ್ಲಕ್ಕೂ ಹೆಚ್ಚಿನ ಶಕ್ತಿಯಲ್ಲ; ವಿಚಾರಶಕ್ತಿಯನ್ನು ಮೀರಿ ವಿಮರ್ಶಕ ಶಕ್ತಿಯೊಂದಿದೆ. ಸ್ವಾತ್ಮನ ಅರಿವೇ ಆ ವಿಮರ್ಶಶಕ್ತಿಯು. ಆ ವಿಮರ್ಶಶಕ್ತಿಯ ಪ್ರಕಾಶಕ್ಕೆ ಅಡ್ಡಿ ಆತಂಕಗಳಾದ ಚಿತ್ತ-ಮನ-ಪ್ರಾಣಗಳ ದೋಷಗಳನ್ನು ದೂರಮಾಡಲಿಕ್ಕೆ ಮಾತ್ರ ವಿಚಾರಶಕ್ತಿಯು ಬೇಕಾಗುವದು. ಬೌದ್ಧಿಕ

ಪ್ರಸನ್ನತೆಯೇ ವಿಚಾರಶಕ್ತಿ. ಇಂತಹ ಬೌದ್ಧಿಕ ಪ್ರಸನ್ನತೆಯಿಲ್ಲದಿದ್ದರೆ ವಿಮರ್ಶ ಶಕ್ತಿಯ ಪ್ರಕಾಶವು ಪ್ರಾದುರ್ಭವಿಸದು; ಒಂದು ವೇಳೆ ಪ್ರಾದುರ್ಭವಿಸಿದರೂ ಅದು ಪೂರ್ಣವಾಗದು.

ಪ್ರಗತಿಯು ಮಾನವ ಜೀವನದ ಜೀವಾಳವಾಗಿದೆ. ಪ್ರಗತಿಯಿಲ್ಲದೆ ಆ ಜೀವನವು ಪೂರ್ಣತೆಯತ್ತ ಸಾಗದು. ಈ ಪ್ರಗತಿಯು ಕೇವಲ ಪಾರಲೌಕಿಕ ದೃಷ್ಟಿಯನ್ನು ಸಡಿಲಿಸಿ ಐಹಿಕ ಜೀವನದ ಉತ್ತಮಿಕೆಗಾಗಿ ಮಾತ್ರ ಎತ್ತುಗಡೆಮಾಡಲು ಕಲಿಸಿತು. ಆದರೆ ಗತಿ–ಪ್ರಗತಿಗಳು ಆತ್ಮನಲ್ಲಿ ಇಲ್ಲ, ಅಲ್ಲಿರುವದು ಕೂಟಸ್ಥ ಸ್ಥಿತಿಯೊಂದೇ! ಗತಿ–ಪ್ರಗತಿಗಳು ಆತ್ಮಚೈತನ್ಯದ; ಒಂದಂಶವಾದ ಪ್ರಗತಿಗೆ ಸಂಬಂಧಪಟ್ಟಿರುವವು. ಪ್ರಗತಿಯು ಆತ್ಮನಿಗೆ ಹೊದಿಕೆ-ಯಾಗಿದೆ. ಆ ಹೊದಿಕೆಯು ಹಗುರಾಗಿಯೂ ಹಸನಾಗಿಯೂ ಆದಂತೆ ಆತ್ಮನ ಪ್ರಕಾಶ ಸ್ವಾತಂತ್ರ್ಯಗಳು ಪ್ರತಿಫಲಿಸುವವು. ಸ್ವಾತಂತ್ರ್ಯವು ಎಲ್ಲ ಜೀವರಿಗೂ ಪ್ರಿಯವಾಗಿರುವದು. 'ಸರ್ವಂ ಪರವಶಂ ದುಃಖಂ ಸರ್ವಮಾತ್ಮವಶಂ ಸುಖಂ' ಎಂದು ಹೇಳಿರುವರು. ಆ ಸ್ವಾತಂತ್ರ್ಯವು ರಾಜಕೀಯ ಸಾಮಾಜಿಕ ಆರ್ಥಿಕ ಆಧ್ಯಾತ್ಮಿಕ ಯಾವುದೇ ಕ್ಷೇತ್ರಕ್ಕೆ ಸಂಬಂಧಪಟ್ಟಿದಿರಲಿ, ಪ್ರಕೃತಿಯ ಹೊದಕೆಯು ದಟ್ಟವಾಗುತ್ತ ಹೋಗಿ ಆತ್ಮನ ಆನಂದ ಶಾಂತಿ ಪ್ರಕಾಶ ಸ್ವಾತಂತ್ರಗಳು ಮುಸುಕಾದರೆ ಅದುವೆ ದುರ್ಗತಿ. ಆ ಹೊದಿಕೆಯು ತೆಳುವಾಗಿ ತಿಳಿನೀರಿನ ಕೊಳದಲ್ಲಿ ತಳವು ಕಾಣಿಸುವಂತೆ ಆತ್ಮನ ಚೈತನ್ಯಸಾಮರ್ಥ್ಯವು ಚಲ್ಲವರಿದು ಪಸರಿಸಿದರೆ, ಅದುವೆ ಪ್ರಗತಿ. ವೈಜ್ಞಾನಿಕ ದೃಷ್ಟಿಗೆ ಮಾನವ ಸೇವೆಯೇ ಅಂತಿಮ ಧ್ಯೇಯವಾಗಿರದಿದ್ದರೂ ಮಾನವನಿಂದ ದೇವನ ಇರವನ್ನು ಅರಿಯಲು ಮಾನವ ಸೇವೆಯನ್ನು ಮಾಡಬೇಕು. ಮಾನವನ ಅಸ್ತಿತ್ವವು ದೇವನ ಅಸ್ತಿತ್ವವನ್ನು ಪ್ರಸ್ಥಾಪಿಸಲು ಸಬಲವಾದ ನಿದರ್ಶನವಾಗಿದೆ. ಅದಕ್ಕಾಗಿ ಮಾನವ ಸೇವೆಯು ದೇವನ ಸಾಕ್ಷಾತ್ಕಾರಕ್ಕೆ ಸಹಾಯವನ್ನು ನೀಡುವದು. ಮಾನವ ಕುಲಕ್ಕಿಂತ ಮಿಗಿಲಾಗಿ ಮಾನವ ಸಂತತಿಗಿಂತ ಶ್ರೇಷ್ಠವಾಗಿ ದೇವನೊಬ್ಬನು ಇಲ್ಲವೇ ಇಲ್ಲ; ಮಾನವನು ಹೇಗಿದ್ದರೂ ಸರಿ, ಅವನ ಸೇವೆಯೇ ಸಾರಸರ್ವಸ್ವ, —ಎಂದು ವಾದಿಸುವದು ಮಾನವತಾವಾದದ (Humanitarianism) ಅತಿರೇಕವಾಗಿದೆ. ಮಾನವತಾವಾದವು 'ದಯೆ–ದಾನ ಸಹಾಯ–ಸಹಕಾರ ಕರುಣೆ–ಕನಿಕರ ಇವನ್ನು ಮಾನವ–ಮಾನವರಲ್ಲಿ ಬಳಸಿರಿ; ಹಾಗೆಯೇ ಇವನ್ನು ಬೆಳೆಸಿರಿ' ಎಂದು ಹೇಳುವದು. ಸರಿ, ಈ ಉದಾತ್ತ ಗುಣಗಳು ಆತ್ಮಸಾಕ್ಷಾ-

ತ್ಕಾರಕ್ಕೆ ಬೇಡವೆಂದು ಹೇಳುವವರಾದರೂ ಯಾರು? ಈ ಗುಣೋತ್ಕರ್ಷವು ಮುಕ್ತಿಗೆ ಮುಕುರವಿದ್ದಂತೆ ಇದೆಯೇ ಹೊರತು ಇದುವೆ ಮುಕ್ತಿಯಲ್ಲ.

ವೈಜ್ಞಾನಿಕ ದೃಷ್ಟಿಯು ಕರ್ಮಭೂಮಿಯ ಸತ್ಯತೆಯನ್ನು ಹಾಗು ಅದರ ಮಹತಿಯನ್ನು ಎತ್ತಿ ಹೇಳುವದು. ಕರ್ಮಭೂಮಿಯ ಮೇಲಿನ ಬಾಳುವೆ-ಯಾಗಲಿ ಇಲ್ಲವೆ ಇಲ್ಲಿ ಸಾಧಿಸಬೇಕೆಂದುದಾಗಲಿ ಕಾಲ್ಪನಿಕವಲ್ಲ, ತ್ಯಾಜ್ಯವೂ ಅಲ್ಲ. ಇದಕ್ಕೆ ಒಂದು ಸತ್ಯನಿಷ್ಠುರವಾದ ಮಹತ್ವದ ಸ್ಥಾನವಿದೆ. ದೇವತೆಗಳೂ ದೇಹಧರಿಸಿ ಈ ಕರ್ಮಭೂಮಿಗೆ ಬಂದು ಮುಕ್ತಿ ಸಂಪಾದಿಸಬೇಕಾಗುವದು ಎಂದು ಹೇಳುವಲ್ಲಿ ಇದಕ್ಕಿರುವ ಮಹತಿಯನ್ನು ಅಳೆಯಬೇಕು. ಜ್ಞಾನೋಪಲಬ್ಧಿಗೆ ಕ್ರಮಬದ್ಧವಾದ ಪದ್ಧತಿಯು ಅವಶ್ಯಕತೆಯಿದೆ. ಜ್ಞಾನವು ಕ್ರಮಿಕವಾದ ತರಗತಿಗಳಿಂದ ಸಾಗಬೇಕು; ಮೆಟ್ಟಲು ಮೆಟ್ಟಲುಗಳಾಗಿರದ ಜ್ಞಾನಾರ್ಜನೆಯು ದೃಢವಾಗಿರದು— ಎಂದು ವೈಜ್ಞಾನಿಕ ದೃಷ್ಟಿಯು ತಿಳಿಸುವದು. ಸೃಷ್ಟಿಯ ಸಹಜವಾದ ವಿಕಾಸಕ್ರಮದಲ್ಲಿ ಪದಾರ್ಥಗಳ ಬೆಳವಣಿಗೆಯನ್ನೂ ಅವುಗಳ ಪರಸ್ಪರ ಸಂಬಂಧವನ್ನೂ ಅರಿಯಬೇಕೇ ಹೊರತು ಅವುಗಳ ಮೇಲೆ ಮಿಥ್ಯಾರೋಪದ ಕಲ್ಪನೆಗಳನ್ನು ಹೇರಬಾರದು. ಈ ಪ್ರಪಂಚದಲ್ಲಿ ಪುರುಷ ಪ್ರಯತ್ನಕ್ಕೆ ಒಂದು ಉನ್ನತವಾದ ಸ್ಥಾನವಿದೆಯೆಂದೂ ಹಾಗು ಆ ಸ್ಥಾನದ ಮಾನವನ್ನು ಕಾಯಬೇಕೆಂದೂ ವೈಜ್ಞಾನಿಕ ದೃಷ್ಟಿಯು ಬೋಧಿಸುವದು. ವೈಜ್ಞಾನಿಕ ದೃಷ್ಟಿಯು ವ್ಯಕ್ತಗೊಳಿಸುವ ಈ ತತ್ವವೇ ದರ್ಶನ. ವಸ್ತುಗಳ ಮೂಲಭೂತ ಸತ್ಯವನ್ನು ಸಮಗ್ರವಾಗಿ ನಿರೀಕ್ಷಿಸುವುದೇ ತತ್ವಜ್ಞಾನ. ಪ್ರಯತ್ನ-ಪೂರ್ವಕವಾಗಿ ಶೋಧಗೊಳಿಸಿ ಕಂಡುಕೊಳ್ಳುವ ಸತ್ಯವು ಚೈತ್ಯನ್ಯಾತ್ಮಕವಾಗು-ವಂತೆ ಮಾಡುವ ಶುದ್ಧವಾದ ಸರಳವಾದ ಸಾತ್ವಿಕ ಪ್ರಯತ್ನವೇ ಧರ್ಮ. ದರ್ಶನ ಧರ್ಮಗಳೆರಡೂ ಪರಸ್ಪರ ಅವಲಂಬಿಗಳು. ಅವುಗಳಲ್ಲಿ ಸುಂದರವಾದ ಸಮನ್ವಯ ಮೊಳೆಯಬೇಕು. ದಾರ್ಶನಿಕ ಸತ್ಯವನ್ನು ಪ್ರಕಟಿಸದ ಧರ್ಮವು ಮಬ್ಬು, ಮೂಢತನದ ಬೀಡಾಗುವದು. ಹಾಗೆಯೇ ಧಾರ್ಮಿಕ ಭಾವನೆ-ಯಿಂದ ಚೇತನಗೊಳ್ಳದ ದರ್ಶನವು ಬಂಜರು ನಾಡಾಗುವದು. ದರ್ಶನಧರ್ಮ-ಗಳೆರಡೂ ಒಂದುಗೂಡಿದರೇನೇ ಇಷ್ಟಸಿದ್ಧಿಯು ಕೈಗೂಡುವದು. ಈ ಸಿದ್ಧಿಯು, ಈ ಸಾಕ್ಷಾತ್ಕಾರವು ಶಾಸ್ತ್ರಗಮ್ಯವಲ್ಲ; ಶಬ್ದಜಾಲಕ್ಕೆ ಇದರ ವಿವರಣೆ ನಿಲುಕುವ-ದಿಲ್ಲ. ಆದರೆ ಇದು ಕೇವಲ ಅನುಭವಕ್ಕೆ ವೇದ್ಯವು. ಪ್ರಪಂಚ ಕುರುಬ-ಮರಬ ರಿದ್ದಂತೆ. ಒಬ್ಬರು ಕೇಳುವದೊಂದು, ಇನ್ನೊಬ್ಬರು ಹೇಳುವದೊಂದು. ಸ್ವತಃ

ಅನುಭವವಾಗದೆ ಪಡೆದುಕೊಂಡ ಜ್ಞಾನ ದೃಢವಾಗದು, ಪೂರ್ಣವೂ ಆಗದು. ಜಗತ್ಪ್ರಸಿದ್ಧನಾದ ಲೋಕೋತ್ತರ ವಿಜ್ಞಾನಿ ಇನ್‌ಸ್ಟನ್ನನು ಕಂಡುಹಿಡಿದು ಸಂಬಂಧ ಸಿದ್ಧಾಂತವನ್ನು (Relativity Theory) ವನ್ನು ಕುರಿತು ಒರೆದ ೯೦೦ ಗ್ರಂಥಕರ್ತೃಗಳಲ್ಲಿ ಕೇವಲ ೧೨ ಜನರೇ ತನ್ನ ಸಿದ್ಧಾಂತವನ್ನು ಕಂಡಿ-ದ್ದಾರೆಂದು ಸ್ವತಃ ಆತನೇ ಹೇಳಿದ್ದಾನೆ. ಇದರಿಂದ ಅನುಭವ ಸಿದ್ಧಿಯು ಸಾಕ್ಷಾತ್ಕಾರವು ಸ್ವಾನುಭಾವವಿಲ್ಲದಿದ್ದರೆ ಸುಗಮವಲ್ಲವೆಂದೇ ಅರ್ಥವಾಗುತ್ತದೆ.

ಈ ಇಷ್ಟಸಿದ್ಧಿಯು ವೇದಾಂತಿಗಳ ಆತ್ಮಾನಾತ್ಮ ವಿವೇಕದಿಂದಾಗಲಿ ಇಲ್ಲವೆ ಸಾಂಖ್ಯರ ಪ್ರಕೃತಿ–ಪುರುಷರ ವಿಯೋಗದಿಂದಾಗಲಿ ಕೈಗೂಡದು. ಯಾಕಂದರೆ ವಿವೇಕವಾಗಲಿ ವಿಯೋಗವಾಗಲಿ ಸ್ವಾನುಭಾವ ಸಿದ್ಧಿಯಲ್ಲಿ ಒಂದು ಮೆಟ್ಟಿಲು ಮಾತ್ರ. ಇದರಿಂದ ಸಮನ್ವಯವೂ ಸಾಧಿಸದು. ವೇದಾಂತದ ಸೆಳವಿಗೆ ಬಿದ್ದು ಪುರುಷ ಪ್ರಕೃತಿಗಳನ್ನು ಪ್ರತ್ಯೇಕಿಸಿ ಆತ್ಮನಾದ ಪುರುಷನು ಸತ್ಯವೆಂದೂ ಅನಾತ್ಮವಾದ ಪ್ರಕೃತಿಯು ಮಿಥ್ಯವೆಂದೂ ಬಗೆದು, ಭಾರತೀಯರು ಸಾಮಾನ್ಯತಃ ಆತ್ಮನ ಬೆನ್ನುಹತ್ತಿ ಈ ಪ್ರಪಂಚವನ್ನು ಮೂದಲಿಸಿ ಇಹದಲ್ಲಿಯ ಸುಖ ಜೀವನಕ್ಕೆ ಎರವಾದರು. ಈ ಜಗತ್ತಿನಲ್ಲಿ ಅಡಗಿರುವ ಅಲೌಕಿಕ ಸೌಂದರ್ಯವೂ ಅಪಾರ ಸಂಪತ್ತೂ ಇವರ ಕಣ್ಣಿಗೆ ಮಂಜಿನ ಹೊದಿಕೆಯಾದವು. ಇದರಂತೆಯೇ ಪಾಶ್ಚಿಮಾತ್ಯರು ಆತ್ಮನನ್ನು ಅಲ್ಲಗಳೆದು ಅನಾತ್ಮದ ಎಂದರೆ ಪ್ರಕೃತಿಯ ಸುಖಭೋಗದಲ್ಲಿ ಲೋಲಾಡುತ್ತಿದ್ದರೂ ಆತ್ಮತತ್ವದ ಬೆಂಬಲವಿಲ್ಲ-ದುದರಿಂದ ಅದೆಲ್ಲವೂ ಸ್ಮಶಾನದೊಳಗಿನ ಬೆಳಕಿನಂತೆ ಭಯಾನಕವಾಗಿರುವದು. ಪುರುಷ ಪ್ರಕೃತಿಗಳನ್ನು ಪ್ರತ್ಯೇಕಿಸಿ ಒಬ್ಬೊಬ್ಬರು ಒಂದನ್ನು ತಿರಸ್ಕರಿಸಿ ಇನ್ನೊಂ-ದನ್ನು ಸತ್ಯವೆಂದೂ ಘನವೆಂದೂ ಪುರಸ್ಕರಿಸಿ ಅದ್ಭುತ ಕೃತಿಗಳನ್ನು ಸಾಧಿಸಿದ-ರೆಂಬುದು ನಿಜ. ಆದರೆ ಪೃಥಕ್ಕರಣವು ಒಂದು ಬಗೆಯ ಶಕ್ತಿಯನ್ನು ಕೊಡ-ಬಲ್ಲುದು, ಮಾತ್ರವಲ್ಲದೆ ಶಾಂತಿಯನ್ನು ನೀಡಲಾರದು. ಶಾಂತಿಯು ಪ್ರಾತಿಭ ದೃಷ್ಟಿಯಲ್ಲಿದೆಯೇ ಹೊರತು ಪೃಥಕ್ಕರಣದ ನೋಟದಲ್ಲಿಲ್ಲ. ಪುರುಷ–ಪ್ರಕೃತಿ ಗಳನ್ನು ಸರಿಯಾದ ಸಮನ್ವಯ ಭಾವನೆಯಿಂದ ನೋಡುವುದೇ ಪ್ರಾತಿಭದೃಷ್ಟಿ ! ಇಂತಹ ಸರಿಯಾದ ಸಮನ್ವಯದ ಹಿನ್ನೆಲೆಯಿಂದ ವಿಕಾಸ ಕ್ರಮವನ್ನು ನೋಡಿ ದರೆ ಏನು ಲಭಿಸುವದು ? ಸ್ವಾನುಭಾವಸಿದ್ಧಿಯು !

ವಿಕಾಸವಾಗಲಿ ಗುಣೋತ್ಕರ್ಷವಾಗಲಿ ಪುರುಷ ಅಥವಾ ಆತ್ಮನಲ್ಲಿ ಇಲ್ಲ-ವೆಂಬುದನ್ನು ನಾವು ಆರಂಭದಲ್ಲಿಯೇ ನೆನಪಿಡತಕ್ಕದ್ದು. ಗುಣಪರಿಣಾಮ

ಅಥವಾ ಉತ್ಕ್ರಾಂತಿಯು ಪ್ರಕೃತಿಗೆ ಸಂಬಂಧಪಟ್ಟುದು. ಸತ್ವ—ರಜ—ತಮ-ಯುಕ್ತವಾದ ತ್ರಿಗುಣಾತ್ಮಕ ಪ್ರಕೃತಿಯು ಪುರುಷನಿಂದ ಭಿನ್ನವಲ್ಲ. ಅದು ಪುರುಷನ ಒಂದು ಅಂಶ ಮಾತ್ರ. ಜಾಗರದಲ್ಲಿ ಸತ್ವಗುಣಪ್ರಧಾನವಾಗಿ ಸ್ವಪ್ನ-ದಲ್ಲಿ ರಜೋಗುಣಪ್ರಧಾನವಾಗಿ, ಸುಷುಪ್ತಿಯಲ್ಲಿ ತಮೋಗುಣಪ್ರಧಾನವಾಗಿ ಪುರುಷನು ವ್ಯವಹಾರಮಗ್ನನಾಗುತ್ತಾನೆ. ಸ್ಥೂಲ ಸೂಕ್ಷ್ಮ ಕಾರಣ ಅವಸ್ಥೆ-ಗಳಲ್ಲೆಲ್ಲ ವ್ಯವಹಾರಗೆಯ್ಯುವದು ಪ್ರಕೃತಿ. ಸ್ಥೂಲದಲ್ಲಿ ಭೌತಿಕಮಯವಾಗಿಯೂ, ಸೂಕ್ಷ್ಮದಲ್ಲಿ ಪ್ರಾಣಮಯವಾಗಿಯೂ, ಕಾರಣದಲ್ಲಿ ಮನೋಮಯವಾಗಿಯೂ ಕಾರ್ಯಗೆಯ್ಯುವದು ಆ ಪ್ರಕೃತಿ. ಅವರೆ ಪ್ರಕೃತಿಯ ಸಂಗದಿಂದ ಪುರುಷನೇ ವ್ಯವಹಾರಮಗ್ನನಾದಂತೆ ಗೋಚರಿಸುತ್ತದೆ ಅಷ್ಟೆ! ಪುರುಷನ ನಿಜವಾದ ನಿಲವನ್ನು ಕಾಣಬೇಕಾದುದು ಅವಸ್ಥಾತ್ರಯಗಳನ್ನು ಮೀರಿದ ನಾಲ್ಕನೆಯ ಅವಸ್ಥೆಯಲ್ಲಿ. ಪುರುಷನು ಕೇವಲ ತುರೀಯದಲ್ಲಿ ತೊಳತೊಳಗಿ ಬೆಳಗುವನು; ಚೈತನ್ಯಪ್ರಭಾವಪುಂಜನಾಗಿ ಥಳಥಳಿಸಿ ಹೊಳೆಯುವನು. ಸ್ಥೂಲ ಸೂಕ್ಷ್ಮ ವ್ಯವಹಾರಗಳಿಗೆ ಮನವೇ ಕಾರಣವಾದುದರಿಂದ ಮನೋಜಯವನ್ನು ಪಡೆದ ಯೋಗಿಯು ಸ್ಥೂಲ ಸೂಕ್ಷ್ಮ ಸೃಷ್ಟಿಗಳಲ್ಲಿ ಎಂದರೆ ಜಾಗ್ರ—ಸ್ವಪ್ನಗಳಲ್ಲಿ ಸ್ಥಿತ್ಯಂತರ ಗಳನ್ನು ಎಸಗಬಲ್ಲನು. ಆದರೂ ಇದು ಆತ್ಮನ ಪ್ರಭೆಯಲ್ಲ. ಆತ್ಮ ತತ್ವವು ಸರ್ವಗತವಾಗಿದೆ; ಅದು ಪ್ರಕೃತಿಯನ್ನು ಬಳಸಿ ಬೀಗಿ ಬೆಳೆದಿರುವದು, ಬೆಳಗು-ತ್ತಿರುವದು.

ಆತ್ಮತತ್ವಕ್ಕಾದರೂ ಮೂರು ಅವಸ್ಥೆಗಳುಂಟು: ಪ್ರಕೃತಿಗತ, ಪ್ರಕೃತ್ಯ-ತೀತ, ಪ್ರಕೃತಿಬಾಹ್ಯವೆಂದು. ಪ್ರಕೃತಿಯು ಮೂರು ಅವಸ್ಥೆಗಳನ್ನು ಬಳಸಿದ ಸ್ಥಿತಿಯೇ ಪ್ರಕೃತಿಗತ ಅವಸ್ಥೆ; ಪ್ರಕೃತಿಯನ್ನು ಬಳಸಿ ಬೀಗಿ ಬೆಳೆದ ಸ್ಥಿತಿಯೇ ಪ್ರಕೃತ್ಯತೀತ ಅವಸ್ಥೆ; ಮತ್ತು ಪ್ರಕೃತಿಯ ಪ್ರತಿಕೃತಿಗೆ ಆಧಾರವಾದ ಸ್ಥಿತಿಯೇ ಪ್ರಕೃತಿಬಾಹ್ಯ ಅವಸ್ಥೆ. ಪ್ರಕೃತಿಗೆ ಒಮ್ಮೊಮ್ಮೆ ವಿಶ್ವವೆಂದು ಸಂಬೋಧಿಸುವರು. ಆದುದರಿಂದ ಆತ್ಮನು ವಿಶ್ವಗತ, ವಿಶ್ವಾತೀತ, ವ್ಯಕ್ತಿಗತವೆಂದು ಮೂರು ಅವಸ್ಥೆಗಳನ್ನು ತಳೆಯುವನು. ಆತ್ಮನನ್ನು ಈ ಮೂರು ಅವಸ್ಥೆಗಳಲ್ಲಿ ಗುರುತಿಸಿ ಅನುಸಂಧಾನಗೆಯ್ಯುವ ಅನುಭವವೇ ಆತ್ಯಂತಿಕ ಸತ್ಯ. ಇದೇ ಬಹುಜನ್ಮಗಳ ಕೊನೆಗೆ ದೊರಕಿಸುವ ಮಾನವನ ಮುಕ್ತಿ. ವ್ಯಕ್ತಿಯು ಮುಕ್ತನಾದರೆ ಪೂರ್ಣ-ನಾದರೆ, ಅವನ ಮುಕ್ತಿ ಅವನ ಪೂರ್ಣತೆಗಳು ಪರರ ಮುಕ್ತಿಗೆ ಪೂರ್ಣತೆಗೆ ಕಾರಣವಾಗುವವು. ಏಕೆಂದರೆ ವ್ಯಕ್ತಿಯು ವಿಶ್ವದ ಘಟಕವಾಗಿರುವನು. ವಿಶ್ವದ

ವಿಶಾಲವಾದ ವರ್ತುಲದಲ್ಲಿ ವ್ಯಕ್ತಿಯನ್ನು ಬೇರೆ ಮಾಡಿದರೆ ಅವನ ಘಟಕತ್ವವೂ ಸರೂಪತೆಯೂ ಅಳಿದು ಹೋಗುವವು.

ಪುರುಷ ಪ್ರಕೃತಿಗಳ ಪರಸ್ಪರ ಸಂಬಂಧವನ್ನರಿಯದ, ವ್ಯಕ್ತಿ—ವಿಶ್ವಗಳ ನಡುವಿನ ಸಾಮರಸ್ಯದ ಅರಿವಿಲ್ಲದ ಮಾನವನು ಅಲುಗಾಡದಂತೆ ಅಜ್ಞಾನದಿಂದ ವ್ಯಾಪಿಸಲ್ಪಟ್ಟಿರುತ್ತಾನೆ. ಅವನು ಆ ಅಜ್ಞಾನದ ಬಲದಿಂದ ಎಲ್ಲ ಪದಾರ್ಥಗಳಿಂದ ವಿಭಕ್ತನಾಗಿ, ಆತ್ಮನಿಂದ ದೂರಾಗಿ, ತನ್ನ ಬಾಂಧವರಿಂದ ಬೇರೆಯಾಗಿ ತಾನೇ ತಾನಾಗಿರುತ್ತಾನೆ. ಇದುವೆ ಅಹಂಕಾರದ ಕಗ್ಗಂಟು. ಇಂತಹ ಸಂಕುಚಿತ ಅಹಂಕಾರಾವಸ್ಥೆಯನ್ನು ದಾಟಿ ನಿರಹಂಕಾರದ ಸ್ಥಿತಿಯಲ್ಲಿ ನಿಲುಕಡೆಯನ್ನು ಹೊಂದುವದೇ ಸಾಧನಮಾರ್ಗ. ಸಾಧನದಲ್ಲಿ ಕಾಲಿರಿಸುವದೇ ಪಲ್ಲಟಗೊಳ್ಳು-ವುದರ ಪ್ರಥಮ ಸೋಪಾನ. ಸಾಧನದಿಂದ ನಿರಹಂಕಾರದಲ್ಲಿ ನಿಲುಕಡೆಯನ್ನು ಹೊಂದಿದರೆ ಅಜ್ಞಾನವು ಸುಜ್ಞಾನವಾಗಿ ಪರಿಣಮಿಸುವದು. ಆಗ ಪ್ರೇಮದಿಂದ ದೇವ—ಮಾನವರನ್ನು ಸಮೀಪಿಸುವುದೇ ಧರ್ಮದ ಮರ್ಮವೆಂದೂ, ಸುತ್ತೆಲ್ಲ ವ್ಯಾಪ್ತವಾದ ಸೌಂದರ್ಯವನ್ನು ನೋಡಿ ನುಡಿಯುವುದೇ ಕಲೆಯ ಗೂಢವೆಂದೂ, ಪರೋಪಕಾರವೇ ನೀತಿತತ್ವದ ರಹಸ್ಯವೆಂದೂ ತಿಳಿದುಬರುವದು. ಇಂಥ ಸ್ಥಿತಿಯಲ್ಲಿ ಆತ್ಮನ ವಿಶ್ವವ್ಯಾಪಕತ್ವವು ತಿಳಿಯುವುದಿಷ್ಟೇ ಅಲ್ಲ, ಅದೇ ನಮ್ಮ ಸ್ವರೂಪವೆಂದು ಗೊತ್ತಾಗುವದು. ನಾವು ಪ್ರಯಾಸಪೂರ್ವಕವಾಗಿ ಅಪೂರ್ಣವಾಗಿಯೇ ಆಗಲಿ ಆಚರಣೆಯಲ್ಲಿ ತರಲಿಕ್ಕೆ ಪ್ರಯತ್ನಿಸುವ ತತ್ವಗಳನ್ನು ಇಂತಹ ಅವಸ್ಥೆಯಲ್ಲಿ ಯಾವ ಶ್ರಮವೂ ಇಲ್ಲದೆ ನಮ್ಮ ಕೃತಿಗಳಲ್ಲಿ ತೋರಿಸಬಲ್ಲೆವು. ಈಗ ಅಹಂಕಾರದ ಸಂಕೋಚದಿಂದ ಮುಕ್ತರಾಗಿ, ಪ್ರಾಕೃತ ಸ್ವರೂಪವು ನಮ್ಮದಲ್ಲವೆಂದು ತಿಳಿದು ವಿಶ್ವವ್ಯಾಪಕ ವ್ಯಕ್ತಿಗಳು ನಾವೆಂಬ ಅನುಭವವು ಕೈಸೆರೆಯಾಗುವದು. ಆತ್ಮನ ನಿಜಸ್ವರೂಪವು ತಿಳಿದ ಕೂಡಲೆ ದೇಹ—ಪ್ರಾಣ—ಮನಸ್ಸುಗಳು ಅದರ ಅತುಲ ಆನಂದದ ಕ್ರೀಡಾಭೂಮಿಯಾಗುವವು. ಅಹಂಕಾರವು ತ್ರಿಗುಣಾತ್ಮಕ ಪ್ರಕೃತಿ-ಯಲ್ಲಿ ತೋರಿದ ಒಂದು ವಿಕಾರವು. ಅಹಂಭಾವಕ್ಕೆ ಉಸಿರಿನ ಎಡೆಯಾಟವೇ ಕಾರಣವು. ಗಾಢನಿದ್ರೆಯಲ್ಲಿಯೂ ಅಂತರಂಗದಲ್ಲಿ ಅವಿತುಕೊಂಡಿರುವ ಈ ಅಹಂಕಾರವು ಅಳಿದ ಹೊರತು, ಆತ್ಮನ ಆನಂದದ ವಿಲಾಸವಾದ ನಿರಹಂಕಾರವು ನೆಲೆಗೊಳ್ಳದು. ನಾವು ದೇವನೊಬ್ಬನನ್ನು ಒಪ್ಪಿಕೊಂಡು ಅವನಿಗೆ ಭಕ್ತಿಮಾರ್ಗ-ದಿಂದ ಆತ್ಮಾರ್ಪಣ ಮಾಡುವದರಿಂದ ನಿರಹಂಕಾರವನ್ನು ಸಾಧಿಸಬಹುದು. ಆಗ ನಮ್ಮಲ್ಲಿ

ಎಲ್ಲರೊಳು ನೀನೆ ಇರುವೆ, ಎಲ್ಲವ ನೀ ವ್ಯಾಪಿಸಿರುವೆ
ಎಲ್ಲ ನಿನ್ನ ಸತ್ವದಿಂದ ನುಡಿದು ನಡೆವುದು ||
ಹುಲ್ಲಿಗಿಂತ ಹಸುರು ನಾವು, ಎಲ್ಲ ನೀನೆ ಎಂದು ಅರಿತು
ಎಲ್ಲವ ನಿನ್ನಡಿಯೊಳಿಡಲು ಎನಗೆ ಕಲಿಪುದು ||

ಎಂಬ ಸರ್ವಾರ್ಪಣ ಭಾವವು ಮೊಳೆತು ಅಂಗಾಂಗಗಳನ್ನೆಲ್ಲ ವ್ಯಾಪಿಸುವದು. ಈ ನಿರಹಂಕಾರವನ್ನು ಸರ್ವರಲ್ಲಿ ಆತ್ಮದರ್ಶನವನ್ನು ಪಡೆದು ಜ್ಞಾನಮಾರ್ಗ-ದಿಂದಲೂ ಅಳವಡಿಸಿಕೊಳ್ಳಬಹುದು. ಆಗ ಜ್ಞಾನದಿಂದ ನಿರಹಂಕಾರ-ವನ್ನಂಗವಿಸಿಕೊಂಡ ನಿರಹಂಕಾರಿಗೆ

ನಾನೇ ಜಗವಾಗಿ, ಜಗದೊಳು
ನಾನೇ ನಿಜವಾಗಿ ||
ನಾನೇ ನನ್ನನು ನೋಡುತ ಕೂಡುತ
ನೀನೆಂಬುದ ನೀಗಿ || ಕೂಡಿವೆ ಪರಪದವ—

ಎಂಬ ಆತ್ಮಾನುಭೂತಿಯುಂಟಾಗುವದು. ಭಕ್ತಿಮಾರ್ಗದಿಂದಾಗಲಿ ಇಲ್ಲವೆ. ಜ್ಞಾನಮಾರ್ಗದಿಂದಾಗಲಿ ಅಹಂಕಾರದ ಅಳಿವಿನಿಂದ ನಿರಹಂಕಾರವು ಮೂಡಿಕೊಳ್ಳುವದು. ಸ್ವರೂಪವಿಸ್ಮೃತಿಯೇ ಮಲ; ಇದುವೆ ಅಜ್ಞಾನ. ಅಜ್ಞಾನವಳಿದು ಸುಜ್ಞಾನವಾಗೆ ಅದೇ ಸಮ್ಯಕ್‌ದೃಷ್ಟಿಯಾಗಿ ಮಾರ್ಪಡುವದು. ಇಂತಹ ನಿರಹಂಕಾರ ಸುಜ್ಞಾನಗಳ ಮಧುರ ಮಿಲನದಿಂದ ಪ್ರಭುವಿನ ನಿಲವು ಪ್ರಾದುರ್ಭವಿಸುವದೆಂದು ಪ್ರಭುಲಿಂಗಲೀಲೆಯ ಕರ್ತೃವಾದ ಚಾಮರಸನು ರಸವತ್ತಾಗಿ ಬಣ್ಣಿಸಿರುವನು. ನಿರಹಂಕಾರ ಸುಜ್ಞಾನಿಗಳಿಗೆ ಪ್ರಭುವು ಅಯೋನಿಜನಾಗಿ ಜನಿಸಿದ ವಿವರವನ್ನು ಕವಿ ಹೀಗೆ ಬಣ್ಣಿಸಿರುವನು :

ಲೌಕಿಕರು ಕಾಮಿಸುವರಿಹಪರ
ಲೋಕವನು ತಮಗೀವ ಪುತ್ರನ-
ನೇಕೆಯಾ ಮಾಯಾ ಪ್ರಪಂಚಿನ ಗಳಿಕೆಗಳು ನಮಗೆ ||
ಏಕವೆನಿಸುವ ನಿಜವನೀವ ನಿ-
ರಾಕುಳದ ಸುಕುಮಾರನಾಗಲಿ
ಬೇಕು ನಮಗೆಂದೆನುತ ನಿರಹಂಕಾರನಿಂತೆಂದ ||

ನಿರಹಂಕಾರ ಸುಜ್ಞಾನಿಗಳೀರ್ವರು ಅನುಷ್ಠಾನಗೆಯ್ಯುತ ಧ್ಯಾನಮಗ್ನ-ರಾಗಿ ಯೋಗಸಮಾಧಿಯಲ್ಲಿರುವಾಗ ಪ್ರಭುಜನನವನ್ನು ಕಾಣುವರು; ದಿವ್ಯ ಜನ್ಮದ ಅನುಭವವನ್ನು ಪಡೆಯುವರು :

ಆ ಸಮಾಧಿಯ ಭಾವದಲಿ ನವ
ಮಾಸ ಪೂರಿತವಾಗಿ ನೆನಹಿನ
ಸೇಸರಿನ ಬಲು ಬಿಸಿಲು ಬೆಳಗಿದುದಂತರಂಗದಲಿ ||
ಲೇಸೆನಿಸಿ ಕಾಣಿಸಿದುದೊಯ್ಯನೆ
ಭಾಸುರ ಶ್ರೀಮೂರ್ತಿಯೊಂದು ವಿ-
ಲಾಸ ನಿರಹಂಕಾರ ಸುಜ್ಞಾನಿಗಳ ಮನದೊಳಗೆ ||

ಕಂಡರೇಕೋಭಾವದಲಿ ನಿಃ-
ಖಂಡ ಮಹಿಮನ ನಿಖಿಳ ಭವಭಯ
ಖಂಡನನಾದ್ಯಂತ ರಹಿತನನಪ್ರಮೇಯನನ ||
ಚಂಡಕರಕೋಟಿ ಪ್ರಕಾಶೋ-
ದ್ದಂಡಮಯನ ಸುಹೃನ್ಮನೋಂಬುಜ-
ಮಂಡಿತನನಾ ದಂಪತಿಗಳೊಲಿದಂತರಂಗದಲಿ ||

ಬಿಸಿಲ ಬೇರಿಟ್ಟೆಳೆಗಿಳಿದು ಶೋ-
ಭಿಸುವ ಸೂರ್ಯನೊ ಹಿಮವನತಿಗಳೆ-
ದೆಸೆವ ಚಂದ್ರನೊ ನೆಟ್ಟನಾಶ್ರಿತ ಭಕ್ತಗುಣವಳಿದು ||
ಮಿಸುಕುವಗ್ನಿಯೋ ಪೇಳೆನಲು ರಂ-
ಜಿಸುವ ತೇಜೋಮಯದ ಬಾಲಕ-
ನೆಸೆದನಾ ಸುಜ್ಞಾನಿ ನಿರಹಂಕಾರರೆದುರಿನಲಿ ||

ಇಂತಹ ಪ್ರಭುಜನ್ಮದ ಅಥವಾ ದಿವ್ಯಜನ್ಮದ ಸಾಕ್ಷಾತ್ಕಾರದ ಬಲದಿಂದ, ಮಾನವನ ಭೌತಿಕ ಹಾಗೂ ಮಾನಸಿಕ ಜೀವನದ ವಿವಿಧ ಶಕ್ತಿಗಳ ಸಾರವತ್ತಾದ ಶೋಭೆಯ ಮೂಲಕ ಶುದ್ಧ ಸಾತ್ವಿಕ ಜೀವನವು ಅರಳುವಂತೆ ನೋಡಿಕೊಳ್ಳು-ವದೇ ಪಲ್ಲಟ ಇಲ್ಲವೆ ಪರಿವರ್ತನೆಯ ದಿವ್ಯ ಧ್ಯೇಯವಾಗಿದೆ.

# ಅನುಭಾವದ ಬೆಡಗು

ಭಾರತೀಯರ ಅಧ್ಯಾತ್ಮ ಶಾಸ್ತ್ರಗಳಲ್ಲಿ ಮೋಕ್ಷಾಪೇಕ್ಷಿಗಳಿಗಾಗಿ ಪ್ರಪಂಚದ ವರ್ಣನೆಯು ಬಹು ಸುಂದರವಾದ ರೀತಿಯಲ್ಲಿ ಮೂಡಿಬಂದಿರುತ್ತದೆ. ಸಾಧ್ಯ-ವಿದ್ದ ಮಟ್ಟಿಗೆ ಪ್ರಪಂಚದ ಪರಿಪೂರ್ಣವಾದ ಅರಿವು ಅಥವಾ ಪರಿಜ್ಞಾನವು ಮಾನವನಿಗೆ ಕರಗತವಾದ ಹೊರತು ನಿಶ್ಚಯ ಜ್ಞಾನವು ಸಾಧ್ಯವಾಗದು. ನಿಶ್ಚಯ ಜ್ಞಾನವಿಲ್ಲದೆ ನಿಶ್ಚಲ ವೃತ್ತಿಯೂ ನೆಲೆಗೊಳ್ಳದು. ಈ ನಿಶ್ಚಯ ಜ್ಞಾನ ಹಾಗು ನಿಶ್ಚಲವೃತ್ತಿ ಇವುಗಳಲ್ಲಿಯೇ ಸ್ವರೂಪ ಸಾಕ್ಷಾತ್ಕಾರವೂ, ಅದರಿಂದ ಲಭ್ಯವಾಗುವ ಸೌಖ್ಯವೂ ಅಡಗಿರುತ್ತವೆ. ಈ ದೃಷ್ಟಿಯಿಂದ ನೋಡಿದಾಗ ಪ್ರಪಂಚದ ಬಗೆಗಿನ ಪರಿಜ್ಞಾನವು ನಿಶ್ಚಯ ಜ್ಞಾನದತ್ತ ಕೊಂಡೊಯ್ಯುವ ಪ್ರಥಮ ಸೋಪಾನವಾಗಿದೆ ಎಂದು ಹೇಳಬಹುದು. ಪ್ರಪಂಚದ ವರ್ಣನೆಯು ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಬಗೆಯಾಗಿ ಬಣ್ಣಿಸಲ್ಪಟ್ಟಿದೆ. ಅದು ಶ್ವೇತಾಶ್ವತರೋಪನಿಷತ್ತಿನಲ್ಲಿ ಬಹು ಸುಂದರವಾದ, ಸರ್ವ ವ್ಯಾಪಕವಾದ, ಸುಬೋಧವಾದ ಶಬ್ದಗಳಲ್ಲಿ ವರ್ಣಿತವಾದುದನ್ನು ನಾವು ಕಾಣಬಹುದಾಗಿದೆ. ಆಶ್ಚರ್ಯದ ಸಂಗತಿಯೆಂದರೆ, ಆ ಉಪನಿಷತ್ತಿನಲ್ಲಿ ಅದು ಒಂದೇ ಒಂದು ಶ್ಲೋಕದಲ್ಲಿ ವರ್ಣಿತವಾಗಿದೆ. ಶ್ವೇತಾಶ್ವತರೋಪನಿಷತ್ತಿನಲ್ಲಿ ಆ ಶ್ಲೋಕವು ಇಂತಿದೆ :

ಪಂಚಸ್ರೋತೋಂಬುಂ ಪಂಚಯೋನ್ಯುಗ್ರವಕ್ರಾಂ
ಪಂಚಪ್ರಾಣೋರ್ಮಿಂ ಪಂಚಬುಧ್ಯಾದಿಮೂಲಾಂ
ಪಂಚಾವರ್ತಾಂ ಪಂಚದುಃಖೌಘವೇಗಾಂ
ಪಂಚಾದಶಭೇದಾಂ ಪಂಚಪರ್ವಾಮಧೀಮಃ ||

"ಐದು ಸ್ಥಾನಗಳಲ್ಲಿ ಉಗಮ ಹೊಂದುವ ಐದು ಪ್ರವಾಹಗಳುಳ್ಳ, ಬುದ್ಧಿಪಂಚಕದ ಆಧಾರದ ಮೇಲೆ ನಿಂತಿರುವ ಪಂಚಪ್ರಾಣಗಳೆಂಬ ತೆರೆಗಳುಳ್ಳ, ಐದು ದುಃಖಗಳೆಂಬ ಆವೇಗದಿಂದ ಕೂಡಿದ ಐದು ತಿರುಗಣಿ ಮಡುಗಳುಳ್ಳ, ಐವತ್ತು ಭೇದಗಳುಳ್ಳ ಹಾಗು ಐದು ವಿಭಾಗಗಳುಳ್ಳ ನದಿಯು ಉಗ್ರವೂ ಹಾಗು ವಕ್ರವೂ, ಸಿಡುಕಿನದೂ ಹಾಗು ಸೊಟ್ಟಾದುದೂ ಆಗಿರುವದನ್ನು ನಾವು

ಕಂಡೆವು. "— ಎಂಬ ಅರ್ಥದ ಉಪನಿಷತ್ತಿನ ಈ ಮಂತ್ರದಲ್ಲಿ ಆ ನದಿ ಅಥವಾ ಹೆದ್ದೊರೆಯು ಈ ಪ್ರಪಂಚವೇ ಆಗಿದೆ. ಅದರ ಐದು ಪ್ರವಾಹಗಳು ಪಂಚ-ಜ್ಞಾನೇಂದ್ರಿಯಗಳು. ಮೂಗು ನಾಲಿಗೆ ಕಣ್ಣು ಕಿವಿ ಹಾಗು ಚರ್ಮ—ಇವೇ ಐದು ಜ್ಞಾನಕ್ಕೆ ಸಾಧನವಾದ ಇಂದ್ರಿಯಗಳು. ಐದು ಪ್ರವಾಹಗಳು ಕೂಡಿಕೊಂಡು ಒಂದು ನದಿಯಾಗಿ ಹರಿಯುತ್ತಿರುವಂತೆ ಪ್ರಪಂಚವೆಂಬ ನದಿಯು ನೀರಿನಿಂದ ಕೂಡಿಕೊಂಡು ನೇರವಾಗಿ, ನಿರರ್ಗಳವಾಗಿ ಪ್ರವಹಿಸಬೇಕಾದರೆ ಪಂಚ ಇಂದ್ರಿಯಗಳಿಂದ ಉಂಟಾಗುವ ಜ್ಞಾನವು ಬೇಕೇ ಬೇಕು. ಪಂಚ ಜ್ಞಾನೇಂದ್ರಿಯಗಳು ಮಾನವನಿಗೆ ಇರಲಿಲ್ಲವೆಂದು ಭಾವಿಸೋಣ. ಆಗ ಈ ಪ್ರಪಂಚವು ಅರ್ಥವಿಹೀನವಾಗುತ್ತಿತ್ತು. ಪ್ರಪಂಚದ ಅಸ್ತಿತ್ವದ ಅರಿವು ಪಂಚ ಜ್ಞಾನೇಂದ್ರಿಯಗಳಿಂದಲೇ ಸಾಧ್ಯವಾಗಿದೆ. ಇಂದ್ರಿಯಗಳು ಜ್ಞಾನದ ಆಕಲನ ವಾಗುವದಕ್ಕೆ ಹೆಬ್ಬಾಗಿಲುಗಳಂತಿರುತ್ತವೆ. ಆದ್ದರಿಂದಲೇ ಪ್ರಪಂಚವನ್ನು ಒಂದು ಹೆದ್ದೊರೆಗೆ ಹೋಲಿಸಿ ಪಂಚಜ್ಞಾನೇಂದ್ರಿಯಗಳನ್ನು ಆ ನದಿಗೆ ನೀರನ್ನು ಪೂರೈಸುವ ಪಂಚ ಪ್ರವಾಹಗಳಿಗೆ ಹೋಲಿಸಲಾಗಿದೆ. ನೀರಿಲ್ಲದ ನದಿಯು ಹೇಗೆ ಶುಷ್ಕವೂ, ನಿರುಪಯುಕ್ತವೂ, ಅರ್ಥರಹಿತವೂ ಆಗಿರುವದೋ ಹಾಗೆಯೇ ಪಂಚಜ್ಞಾನೇಂದ್ರಿಯಗಳಿಲ್ಲದಿದ್ದರೆ ಈ ಪ್ರಪಂಚವು ಶುಷ್ಕವೂ, ನಿರುಪಯುಕ್ತವೂ, ನಿರರ್ಥಕವೂ ಆಗುತ್ತಿತ್ತು. ಇಷ್ಟೇ ಅಲ್ಲ, ನೀರಿಲ್ಲದ ನದಿಯ ಅಸ್ತಿತ್ವವನ್ನು ಗುರುತಿಸುವದು ಹೇಗೆ ಅಸಾಧ್ಯವೋ ಹಾಗೆಯೇ ಪಂಚಜ್ಞಾನೇಂದ್ರಿಯಗಳಿಲ್ಲ-ದಿದ್ದರೆ ಪ್ರಪಂಚದ ಅಸ್ತಿತ್ವವನ್ನು ಗೊತ್ತು ಹಚ್ಚುವದೂ ಅಶಕ್ಯವಾಗುತ್ತಿತ್ತು. ಇನ್ನು, ಈ ಪಂಚಜ್ಞಾನೇಂದ್ರಿಯಗಳಾದರೋ ತಮ್ಮಷ್ಟಕ್ಕೆ ತಾವೇ ಇದ್ದು-ಕೊಂಡುಬಿಟ್ಟಿದ್ದರೆ ಅವುಗಳಿಂದ ಯಾವ ಪ್ರಯೋಜನವೂ ಆಗುತ್ತಿದ್ದಿಲ್ಲ. ಪಂಚ ತನ್ಮಾತ್ರೆಗಳು ಇವುಗಳ ಉಗಮಸ್ಥಾನಗಳಾಗಿವೆ. ಶಬ್ದ ಸ್ಪರ್ಶ ರೂಪ ರಸ ಮತ್ತು ಗಂಧಗಳೆಂಬ ಪಂಚ ತನ್ಮಾತ್ರೆಗಳಿಲ್ಲದಿದ್ದರೆ ಈ ಜ್ಞಾನೇಂದ್ರಿಯಗಳಿಗೆ ಸ್ಥಾನವೆಲ್ಲಿ? ರೂಪವಿದೆ, ಆದುದರಿಂದ ನೇತ್ರದ ಇರವು ಸಾರ್ಥಕವಾಗಿದೆ. ನೇತ್ರದ ಮುಖಾಂತರ ರೂಪದ ಅರಿವು ನಮಗಾಗುತ್ತದೆ. ಅದರಂತೆಯೇ ರಸ ಗಂಧ ಶಬ್ದ ಹಾಗು ಸ್ಪರ್ಶಗಳಿವೆ. ಆದ್ದರಿಂದಲೇ ರಸನೆ ಘ್ರಾಣ ಕರ್ಣ ಹಾಗು ತ್ವಗಿಂದ್ರಿಯಗಳಿಗೆ ಅರ್ಥಪೂರ್ಣವಾದ ಅಸ್ತಿತ್ವವು ಅಳವಟ್ಟಿದೆ. ಈ ಶ್ಲೋಕದಲ್ಲಿ ಈ ಪಂಚತನ್ಮಾತ್ರೆಗಳನ್ನು ಉಗಮಸ್ಥಾನಗಳೆಂದು ಕರೆದಿರುತ್ತಾರೆ. ಪ್ರಪಂಚವೆಂಬ ನದಿಗಿರುವ ಪಂಚಜ್ಞಾನೇಂದ್ರಿಯಗಳೆಂಬ ಐದು ಪ್ರವಾಹಗಳ

ಐದು ಉಗಮಸ್ಥಾನಗಳು ಪಂಚತನ್ಮಾತ್ರೆಗಳೇ ಆಗಿವೆ. ಈ ರೂಪಕವು ನಿಜವಾಗಿಯೂ ಪಂಚತನ್ಮಾತ್ರೆಗಳ ಮಹತಿಯನ್ನು ಎತ್ತಿ ತೋರಿಸುವದಿಲ್ಲವೆ ?

ಶ್ವೇತಾಶ್ವತರೋಪನಿಷತ್ತಿನ ಈ ಶ್ಲೋಕದಲ್ಲಿ ಪಂಚಪ್ರಾಣಗಳ ವಿಷಯ-ವಾಗಿ ಬರುವ ವರ್ಣನೆಯು ಅತ್ಯಂತ ಮನನೀಯವಾಗಿದೆ. ಪಂಚಪ್ರಾಣಗಳೇ ಆ ಪ್ರಪಂಚರೂಪೀ ನದಿಯ ಮೇಲೆ ತೋರುವ ಐದು ತೆರೆಗಳಾಗಿವೆ. ಈ ತೆರೆಗಳು ಸಿಕ್ಕಸಿಕ್ಕ ಹಾಗೆ, ಸಿಕ್ಕಸಿಕ್ಕ ಸಮಯಗಳಲ್ಲಿ ಮೇಲೆದ್ದು ಪ್ರಪಂಚದ ನದಿಯಲ್ಲಿ ಮೆರೆಯ ಹತ್ತಿದರೆ ಪ್ರಪಂಚಕ್ಕೊಂದು ಅಸ್ತವ್ಯಸ್ತ ಸ್ಥಿತಿಯು ಉಂಟಾಗುತ್ತದೆ. ಅವಾಸ್ತವತೆಯು ತೋರಿಬರುತ್ತದೆ. ಅದೇಕೆ? ಅನಿಯಮಿತನದ ಅನಿವಾರ್ಯ ಪರಿಣಾಮವೆಂಬಂತೆ ಪ್ರಪಂಚದ ಸುಸ್ಥಿತಿಯೂ, ಸರಾಗತೆಯೂ, ಸೌಂದರ್ಯವೂ ನಾಶವಾಗುತ್ತವೆ. ಆದುದರಿಂದಲೇ ಯೋಗಿಗಳು ನಿರಂತರವಾದ, ಅವ್ಯಾಹತವಾದ ತಮ್ಮ ಯೋಗಾಭ್ಯಾಸ ಸಾಧನೆಯಿಂದ ಈ ಪ್ರಾಣದ ಗತಿಯಲ್ಲಿ ಒಂದು ತರಹದ ಸುಸ್ಥಿರತೆಯನ್ನೂ ಹಾಗು ತಾಲಬದ್ಧತೆ-ಯನ್ನೂ, ಒಂದು ತರಹದ ಸುಸ್ಥಿತಿಯನ್ನೂ ಮತ್ತು ಲಯವನ್ನೂ ತಂದು ಕೊಳ್ಳುವದಕ್ಕೆ ಯತ್ನಿಸುತ್ತಾರೆ. ಪಂಚಪ್ರಾಣಗಳಲ್ಲಿ ಈ ತರಹದ ಒಂದು ಹೊಂದಾಣಿಕೆಯಿದ್ದಾಗ, ಸಾಮರಸ್ಯವಿದ್ದಾಗ ಮಾತ್ರ ದೇಹವು ದಾರ್ಢ್ಯದಿಂದ ಕೂಡಿಕೊಂಡಿರುತ್ತದೆ. ಹಾಗು ಅದು ಬಹುಕಾಲ ಬದುಕುತ್ತದೆ. ಆದರೆ ಅದೇ ಆ ಹೊಂದಾಣಿಕೆ ಇಲ್ಲವೆ ಸಾಮರಸ್ಯವಿಲ್ಲದಾಗ ದೇಹವು ಬಹಳ ದಿನ ಬಾಳಲಾರದು. ಅಲ್ಲಮಪ್ರಭುದೇವರು ತಮ್ಮದೊಂದು ವಚನದಲ್ಲಿ ಈ ಮಾತನ್ನು ಅತ್ಯಂತ ಸುಂದರವಾಗಿ, ಮಾರ್ಮಿಕವಾಗಿ ತಿಳಿಗನ್ನಡದಲ್ಲಿ ಹೇಳಿದ್ದಾರೆ:

ಕಾಲೆರಡು ಗಾಲಿ ಕಂಡಯ್ಯಾ
ದೇಹವೆಂಬುದು ತುಂಬಿದ ಬಂಡಿ ಕಂಡಯ್ಯಾ
ಭಂಡಿಯ ಹೊಡೆವವರು ಐವರು ಮಾನಿಸರು
ಒಬ್ಬರಿಗೊಬ್ಬರು ಸಮವಿಲ್ಲವಯ್ಯಾ
ಅವರ ಇಚ್ಛೆಯನರಿದು ಹೊಡೆಯದಿದ್ದರೆ
ಅದರ ಅಚ್ಚು ಮುರಿಯಿತ್ತು ಗುಹೇಶ್ವರಾ.

ಕಂಗೆ ಗೋಚರವಾಗುವ ಈ ವಿಶಾಲವಾದ ವಿಸ್ತಾರವಾದ ಪ್ರಪಂಚದ ಸಂಕ್ಷೇಪರೂಪವೇ ನಮ್ಮ ದೇಹವಾಗಿದೆ. ಪ್ರಪಂಚದಲ್ಲಿಲ್ಲದುದು ದೇಹದಲ್ಲಿಲ್ಲ.

ದೇಹದಲ್ಲಿದ್ದುದು ಪ್ರಪಂಚದಲ್ಲಿಲ್ಲದಿಲ್ಲ! ಈ ಮಾತನ್ನು ಮನದಂದು, ಇದನ್ನು ನಮ್ಮ ಚಿತ್ತಭಿತ್ತಿಯ ಮೇಲೆ ಚಿತ್ರಿಸಿಕೊಂಡು ಅಲ್ಲಮಪ್ರಭುದೇವರ ಈ ವಚನದ ಅರ್ಥವನ್ನು ಕಾಣಲು ಆರಂಭಿಸಬೇಕು. ಈ ದೇಹವನ್ನು ಒಂದು ಬಂಡಿಗೆ ಹೋಲಿಸಿದರೆ, ಎರಡು ಕಾಲುಗಳೇ ಆ ಬಂಡಿಯ ಎರಡು ಗಾಲಿಗಳು. ಈ ದೇಹವೆಂಬೀ ಬಂಡಿಯು ತೆರನಾದುದಲ್ಲ, ಅದು ತುಂಬಿದ ಬಂಡಿಯಾಗಿದೆ. ಇದರಲ್ಲಿ ಯಾವುದಿಲ್ಲ? ಎಲ್ಲವೂ ಇವೆ. ಏನೇನು ಇದೆಯೆಂದು ಲೆಕ್ಕದಿಂದ ಹೇಳುವದು ಸುಲಭ ಸಾಧ್ಯವಲ್ಲ. ಕಾಮಾದಿ ಅರಿಷಡ್ವರ್ಗವೂ ಸಪ್ತವ್ಯಸನಗಳೂ ಅಷ್ಟಮದಗಳೂ ತಾಪತ್ರಯವೂ ಅಲ್ಲದೆ, ಪಂಚ-ಜ್ಞಾನೇಂದ್ರಿಯಗಳೂ ಪಂಚಕರ್ಮೇಂದ್ರಿಯಗಳೂ ಅಂತಃಕರಣಚತುಷ್ಟವೂ ಹೀಗೆ ಒಂದೇ, ಎರಡೇ— ಅನೇಕ ಸಂಗತಿಗಳು ದೇಹದಲ್ಲಿ ತುಂಬಿವೆ. ಈ ಎಲ್ಲ ಸಂಗತಿಗಳಿಗೆ ಆಧಾರಭೂತವಾದ, ಅಖಂಡವಾದ ಚೈತನ್ಯವೂ, ಮಾನವನನ್ನು ದೇವಮಾನವನನ್ನಾಗಿ ಮಾರ್ಪಡಿಸಬಲ್ಲ ಅಂತಃಶಕ್ತಿಯೂ ಈ ದೇಹ-ವೆಂಬ ಬಂಡಿಯಲ್ಲಿ ತುಂಬಾ ತುಂಬಿವೆ. ಇದು ಅಲ್ಲಮಪ್ರಭುದೇವರು ಹೇಳುವ ಮಾತಿನ ಔಚಿತ್ಯವಾಗಿದೆ. ಇನ್ನು, ಈ ಬಂಡಿಯನ್ನು ಹೊಡೆವವರು ಒಟ್ಟು ಐವರು ಜನರೆಂದು ಅಲ್ಲಮಪ್ರಭುವು ಒಂದು ತರಹದ ಬೆಡಗಿನ ರೀತಿಯಲ್ಲಿ ಹೇಳಿದ್ದಾರೆ. ಈ ಐವರು ಮಾನಿಸರು ನಮ್ಮ ಪಂಚಪ್ರಾಣಗಳೇ ಎಂದು ಅರ್ಥವಾಗುತ್ತಿದೆ. ಪ್ರಭುವು ಹೇಳಿದಂತೆ ಈ ಐವರು ಮಾನಿಸರು ಒಬ್ಬರಿಗೊಬ್ಬರು ಸಮವಿಲ್ಲ. ಅರ್ಥಾತ್ ಈ ಪಂಚಪ್ರಾಣಗಳಲ್ಲಿ ಏಕಧರ್ಮೀಯತೆಯಿಲ್ಲ. ಈ ಮಾತಿನ ರಹಸ್ಯವು ಪಂಚಪ್ರಾಣಗಳ ವಿವೇಚನೆಯಿಂದ ಮತ್ತಿಷ್ಟು ತಥ್ಯಪೂರ್ಣವಾಗಿ ತೋರದಿರದು. ಶಾಸ್ತ್ರಕಾರರು ಹೇಳುವಂತೆ, 'ಪ್ರಾಣಾಪಾನವ್ಯಾನೋ-ದಾನಸಮಾನ'ಗಳೆಂಬವೇ ಪಂಚಪ್ರಾಣಗಳಾಗಿವೆ. ಕಂಠದಲ್ಲಿ ಉದಾನವೂ, ಹೃದಯದಲ್ಲಿ ಪ್ರಾಣವೂ, ನಾಭಿಯಲ್ಲಿ ಸಮಾನವೂ, ಗುದದಲ್ಲಿ ಅಪಾನವೂ ಹಾಗು ಇಡೀ ದೇಹದ ತುಂಬೆಲ್ಲ ವ್ಯಾನವೂ–ಇಂತು ಪಂಚವಾಯುಗಳು ದೇಹದ ಬೇರೆ ಬೇರೆ ಭಾಗಗಳಲ್ಲಿವೆ. ಇವುಗಳ ಕಾರ್ಯಗಳಾದರೋ ಒಂದೇ ಬಗೆಯವಾಗಿವೆಯೋ? ಇಲ್ಲ, ಉದಾನವಾಯುವು ಅಬ್ಬಳಿಕೆ–ಬಿಕ್ಕಳಿಕೆಗಳುಂಟಾಗುವಂತೆಯೂ, ಪ್ರಾಣವಾಯುವು ಜೀವಧಾರಣೆಯಾಗುವಂತೆಯೂ, ಸಮಾನವಾಯುವು ಜಠರಾಗ್ನಿ ಮುಂತಾದ ಮುಖ್ಯ ಭಾಗಗಳು ಸಮಸ್ಥಿತಿ-ಯಲ್ಲಿರುವಂತೆಯೂ, ಅಪಾನ ವಾಯುವು ಶರೀರದ ಹೊಲಸು ಹೊರಗೆ

ಹೋಗುವಂತೆಯೂ ಮತ್ತು ವ್ಯಾನವಾಯುವು ರಕ್ತಚಲನೆಯು ದೇಹದ ಎಲ್ಲ ಭಾಗದಲ್ಲಿಯೂ ನಡೆದಿರುವಂತೆಯೂ ಕಾರ್ಯ ಮಾಡುತ್ತವೆ. ಹೀಗೆ ಪಂಚಪ್ರಾಣಗಳಲ್ಲಿ ಸ್ಥಾನಭೇದವಿದೆ ಹಾಗು ಕಾರ್ಯಭೇದವೂ ಇದೆ. ಆದುದರಿಂದ ಪ್ರಭುವು ತಿಳಿಸುವಂತೆ ಅವು ಒಂದಕ್ಕೊಂದು ಸಮವಾಗಿಲ್ಲ. ಇದನ್ನು ಸರಿಯಾಗಿ ಹಾಗು ಸಂಪೂರ್ಣವಾಗಿ ಅರ್ತೈಯ್ದು, ಸಾಧನದಿಂದ ಇವುಗಳ ಸ್ವಭಾವ–ಗುಣ–ಧರ್ಮ–ಕರ್ಮಗಳು ಸಮಸ್ಥಿತಿಯಲ್ಲಿರುವಂತೆ ಸುವ್ಯವಸ್ಥಿತವಾಗಿರುವಂತೆ ಮಾಡಬೇಕು. ಅಂದರೆ ಈ ಪಂಚಪ್ರಾಣಗಳಲ್ಲಿ ಹೊಂದಾಣಿಕೆಯು ಹದವರಿತು ಹಾಸು–ಹೊಕ್ಕಾಗಿರುವಂತೆಯೂ, ಸಾಮರಸ್ಯವು ಸೊಗಸಾಗಿ ಹೊರಹೊಮ್ಮುವಂತೆಯೂ ಸಾಧನವನೆಸಗಬೇಕು. ಹಾಗೆ ಮಾಡದೆ ಹೋದರೆ ಎಲ್ಲವೂ ಹದಗೆಡುತ್ತದೆ. ಈ ಮಾತು ಮೇಲಿನ ಪ್ರಭುದೇವರ ವಚನದಲ್ಲಿ ಬಹು ಸುಂದರವಾಗಿ, ಮನಂಬುಗುವಂತೆ ಬಂದಿದೆ. 'ಅವರ ಇಚ್ಛೆಯನರಿದು ಹೊಡೆಯದಿದ್ದರೆ ಅದರ ಅಚ್ಚು ಮುರಿಯಿತ್ತು ಗುಹೇಶ್ವರಾ.' ಆ ಪಂಚಪ್ರಾಣಗಳ ಇಚ್ಛೆಯನ್ನರಿದು ಅಂದರೆ ಸ್ವಭಾವ ಗುಣ ಧರ್ಮ ಮತ್ತು ಕರ್ಮಗಳನ್ನು ತಿಳಿದು ನಾವು ಈ ದೇಹವೆಂಬ ಬಂಡಿಯನ್ನು ನಡೆಸಬೇಕು. ಇಲ್ಲದೆ ಹೋದರೆ ಅದರ ಅಚ್ಚೇ ಮುರಿಯುವದು. ಅಂದರೆ ಶರೀರವು ಅಲ್ಪಾಯುವಾಗುವದು; ರೋಗ–ರುಜಿನಗಳಿಗೆ ತುತ್ತಾಗುವದು; ಅಕಾಲ ಮೃತ್ಯುವಿಗೀಡಾಗುವದು.

ಪಂಚಜ್ಞಾನೇಂದ್ರಿಯಗಳೂ ಇವೆ, ಇವುಗಳಿಗೆ ಉಗಮಸ್ಥಾನಗಳಾದ ಪಂಚತನ್ಮಾತ್ರೆಗಳೂ ಇವೆ ಹಾಗು ಈ ಪಂಚಜ್ಞಾನೇಂದ್ರಿಯಗಳೆಂಬ ಪಂಚ ಪ್ರವಾಹಗಳ ಮೇಲೆ ತೋರಿ ಅಡಗುವ ಪಂಚಪ್ರಾಣಗಳೂ ಇವೆ. ಸೂಕ್ಷ್ಮವಾಗಿ ವಿಚಾರ ಮಾಡಿ ನೋಡಿದರೆ, ಇವೆಲ್ಲವುಗಳಿದ್ದೂ ಬುದ್ಧಿ ಅಥವಾ 'ಮಹತ್' ಒಂದಿಲ್ಲದಿರೆ ಮಾನವನಿಗೆ ಜ್ಞಾನದ ಆಕಲನ ಅಥವಾ ಅನುಭವ ಸಂಪಾದನೆಯು ಸಾಧ್ಯವಿದೆಯೇ?— ಎಂಬೊಂದು ಮಹತ್ವದ ಸಮಸ್ಯೆಯು ಎದುರಾಗುತ್ತದೆ. ಈ ಸಮಸ್ಯೆಯ ರಹಸ್ಯವನ್ನು ಹೊರಗೆಡಹುವಾಗ ನಮ್ಮ ವಿಚಾರಧಾರೆಯು ಬೇರೆ ಬೇರೆ ದಿಕ್ಕುಗಳಲ್ಲಿ ಬಗೆಬಗೆಯಾಗಿ ಹರಿಯಹತ್ತುತ್ತದೆ. ಖನಿಜ ಪದಾರ್ಥಗಳಿಗೂ, ಗಿಡಮರ ಮೊದಲಾದ ಸಸ್ಯಾದಿಗಳಿಗೂ ಸಂವೇದನೆಯುಂಟು. ಅವೂ ಸಹ ಭೂಮಿಯ ಮೇಲೆ ಹುಟ್ಟಿ, ಕೆಲವು ಕಾಲದ ವರೆಗೆ ಬೆಳೆದು, ಆಮೇಲೆ ಇಲ್ಲದಾಗುತ್ತವೆ. ಇದನ್ನು ಶರಚ್ಚಂದ್ರ ಭೋಸರು ಪ್ರತ್ಯಕ್ಷ ಪ್ರಯೋಗದಿಂದ ಸಿದ್ಧಮಾಡಿ ಜಗತ್ತಿಗೇನೇ ಸ್ಪಷ್ಟವಾಗಿ ತಿಳಿಯಪಡಿಸಿದ್ದಾರೆ. ಆದರೆ, ಅವುಗಳಿಗೆ

ತಮ್ಮ ಸಂವೇದನೆಯನ್ನು ವ್ಯಕ್ತಗೊಳಿಸಲಿಕ್ಕೆ ಇಂದ್ರಿಯಗಳ ಅಭಿವ್ಯಕ್ತಿಯಿಲ್ಲ. ಅಲ್ಲಿ ಜ್ಞಾನದ ಆಕಲನವೂ ಆಗುವದಿಲ್ಲ. ಇದಕ್ಕೆಲ್ಲ ಬುದ್ಧಿಯಿಲ್ಲದಿರುವದೇ ಕಾರಣವಾಗಿದೆ. ಇಲ್ಲಿ ನಾವು 'ಬುದ್ಧಿ' ಯೆಂಬ ಪದವನ್ನು ವಿಶಾಲವಾದ ಅರ್ಥದಲ್ಲಿ ತೆಗೆದುಕೊಂಡಿದ್ದೇವೆ. ವೇದಾಂತದ ಪರಿಭಾಷೆಯಲ್ಲಿ ಇದನ್ನೇ ಅಂತಃಕರಣಚತುಷ್ಟಯವೆಂದು ಕರೆದಿದ್ದಾರೆ. ಅವರು ಹೇಳುವಂತೆ, ಅಂತಃಕರಣ ಚತುಷ್ಟಯದಲ್ಲಿ ಮನ ಬುದ್ಧಿ ಚಿತ್ತ ಮತ್ತು ಅಹಂಕಾರಗಳೆಂಬ ನಾಲ್ಕು ಪ್ರಕಾರಗಳು ಸೇರುತ್ತವೆ. ಪ್ರಸ್ತುತ ನಾವು ವಿವೇಚಿಸುತ್ತಿರುವ ಶ್ಲೋಕದಲ್ಲಿ 'ಪಂಚಬುದ್ಧ್ಯಾದಿಮೂಲಾಮ್'' ಎಂದು ಬರುತ್ತದೆ. ಇಲ್ಲಿ ಬುದ್ಧಿಪಂಚಕ ಅಥವಾ ಅಂತಃಕರಣ ಪಂಚಕವನ್ನು ನಿರ್ದೇಶಿಸಿ ಹೇಳಲಾಗಿದೆ. ಇಲ್ಲಿ ಮೇಲೆ ಹೇಳಿದ ನಾಲ್ಕು ಅಂತಃಕರಣಗಳಿಗೆ 'ಜ್ಞಾತೃ' ಎಂಬ ಇನ್ನೊಂದನ್ನು ಸೇರಿಸಿ ಅಂತಃಕರಣ ಪಂಚಕವನ್ನು ವಿವರಿಸುತ್ತಾರೆ. ಈ ಜ್ಞಾತೃ ಇಲ್ಲವೆ ಜ್ಞಾತಾ ಎಂಬ ಶಬ್ದಕ್ಕೆ 'ಜೀವ', ಎಂಬರ್ಥವಾಗುವದು. ನಿಜವಾಗಿಯೂ ಮನ ಬುದ್ಧಿ ಚಿತ್ತ ಹಾಗು ಅಹಂಕಾರಗಳು ಒಂದೇ ಜೀವಚೈತನ್ಯದ ಬೇರೆ ಬೇರೆ ಅವಸ್ಥೆಗಳಾಗಿವೆ. ಒಂದೇ ಒಂದು ಅಖಂಡವಾದ ಭೌತಚೈತನ್ಯವು ಹೇಗೆ ಉಗಿ ಉಷ್ಣ ಬೆಂಕಿ ಪ್ರಕಾಶ ವಿದ್ಯುತ್ ಮುಂತಾದ ವಿವಿಧ ರೂಪ-ಗಳಲ್ಲಿ ವ್ಯಕ್ತವಾಗಿ ಕಾಣುವದೋ ಹಾಗೆಯೇ ಏಕಮೇವವಾದ ಅಖಂಡವಾದ ಈ ಜೀವಚೈತನ್ಯವು, ಈ ಚೈತನ್ಯಪುರುಷನು (Psychic Being) ಮನ ಬುದ್ಧಿ ಚಿತ್ತ ಅಹಂಕಾರ ಮುಂತಾದ ಭಿನ್ನ ಭಿನ್ನ ಸ್ವರೂಪಗಳಲ್ಲಿ ವ್ಯಕ್ತವಾಗಿ ತೋರುತ್ತದೆ. ಮನ ಬುದ್ಧಿ ಚಿತ್ತ ಹಾಗು ಅಹಂಕಾರಗಳು ಜೀವವೆಂಬ ಒಂದೇ ಒಂದು ಅಖಂಡ ಚೈತನ್ಯದ ಬೇರೆ ಬೇರೆ ಶಕ್ತಿಗಳೆಂದು ಮನಃಶಾಸ್ತ್ರಜ್ಞರ ಒಂದು ಗುಂಪು ಪ್ರತಿಪಾದಿಸುತ್ತಿತ್ತು. ಈ ಗುಂಪಿಗೆ 'ಶಕ್ತಿವಾದ' (Faculty Theory) ಎಂದು ಹೆಸರಿದೆ. ಆದರೆ, ಇಂದು ಈ ಶಕ್ತಿವಾದವು ಸಂಪೂರ್ಣ ವಾಗಿ ಅಲ್ಲಗಳೆಯಲ್ಪಟ್ಟಿದೆ; ಅದು ಸುಳ್ಳೆಂದು ಶಾಶ್ವತವಾಗಿ ಸಿದ್ಧವಾಗಿ ಬಿಟ್ಟಿದೆ. ಶಕ್ತಿವಾದಿಗಳ ಪ್ರಕಾರ ಜೀವ ಚೈತನ್ಯವು ಬೇರೆ ಬೇರೆ ಶಕ್ತಿಗಳ ಸಿವುಡ, ಪೆಂಡಿ (a bundle of faculties) ಆಗಿರದೆ ಒಂದು ಅಖಂಡವಾದ ಏಕಮೇವ ಚೇತನ ವಸ್ತುವಾಗಿದೆ. ಮನ ಬುದ್ಧಿ ಚಿತ್ತ ಹಾಗು ಅಹಂಕಾರಗಳು ಅವರ ಕಾರ್ಯಬಾಹುಲ್ಯದಿಂದಲೂ ಸ್ಥಾನಭೇದದಿಂದಲೂ ಬಂದ ಬೇರೆ ಬೇರೆ ಅವಸ್ಥೆ-ಗಳಾಗಿವೆಯೇ ಹೊರತು ಅವು ಭಿನ್ನ ಭಿನ್ನವಾಗಿ ಕೊರೆದಿಟ್ಟ ಭಾಗಗಳು

(Compartmental divisions) ಆಗಿರುವದಿಲ್ಲ. ಒಂದೇ ಜೀವ-ಚೈತನ್ಯವು ಸಂಕಲ್ಪ ವಿಕಲ್ಪಗಳನ್ನು ಮಾಡುವಾಗ ಮನಸ್ಸೆಂದೂ, ನಿಶ್ಚಿತವಾದೊಂದು ನಿರ್ಣಯವನ್ನು ಕೊಡುವಾಗ ಬುದ್ಧಿಯೆಂದೂ, ಮಾಡಿದ್ದನ್ನು ನೆನಪಿಡುವಾಗ ಅಥವಾ ಹಿಂದಿನದನ್ನು ನೆನೆಸುವಾದ ಚಿತ್ತವೆಂದೂ, 'ನಾನು ಮಾಡಿದೆ, ನನ್ನಿಂದಾಯಿತು' ಎಂದು ಅಭಿಮಾನವನ್ನು ತಳೆಯುವಾಗ ಅಹಂಕಾರವೆಂದೂ— ಹೀಗೆ ಬೇರೆ ಬೇರೆ ಹೆಸರನ್ನು ಪಡೆಯುತ್ತದೆ. ಸಂಕಲ್ಪ-ವಿಕಲ್ಪಗಳನ್ನು ಮಾಡುವ ಮನಸ್ಸಿನ ಈ ಸ್ವಭಾವಧರ್ಮಕ್ಕೆ ಇಲ್ಲವೆ ಕರ್ತವ್ಯ-ಕರ್ಮಕ್ಕೆ ಅನುಗುಣವಾಗಿ ಮಾನವನ ಜೀವನವು ರೂಹುದಳೆಯುತ್ತದೆ. 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಎನ್ನುವ ಮಾತಿನ ಅಭಿಪ್ರಾಯವೂ ಇದನ್ನೇ ತಿಳಿಸುತ್ತದೆ. ಮನಸ್ಸಿನ ದ್ವಿವಿಧವಾದ ಈ ಸ್ವಭಾವ-ಗುಣವನ್ನು ಪ್ರಭುದೇವರು ಕೆಳಗಿನ ತಮ್ಮ ವಚನದಲ್ಲಿ ಅತ್ಯಂತ ಸೂಕ್ತವಾದ ಹಾಗು ಸುಂದರವಾದ ರೀತಿಯಲ್ಲಿ ವಿವರಿಸಿರುವದನ್ನು ನಾವು ನೋಡಬಹುದಾಗಿದೆ:

> ತನುವೇ ಹೇಳಿಗೆ, ಮನವೇ ಸರ್ಪ, ಪಂಚೇಂದ್ರಿಯಂಗಳೇ ಹೆಡೆಗಳು.
> ಆ ಸರ್ಪ ಕಚ್ಚಿ ಸತ್ತ ಹೆಣ ಸುಳಿದಾಡುವದ ಕಂಡೆ ಗುಹೇಶ್ವರಾ.

ಈ ದೇಹವೆಂಬುದೊಂದು ಹಾವಾಡಿಗನ ಕೈಯಲ್ಲಿರುವ ಹಾವಿಡುವ ಬೆತ್ತದ ಬುಟ್ಟಿ. ಈ ದೇಹದಲ್ಲಿರುವ ಮನಸ್ಸು ಘಟಸರ್ಪದಂತಿದೆ. ಈ ಸರ್ಪಕ್ಕಿರುವ ಎರಡು ನಾಲಿಗೆಗಳೇ ಸಂಕಲ್ಪ–ವಿಕಲ್ಪಗಳೆಂಬ ವೃತ್ತಿಗಳು. ಪಂಚವಿಷಯಗಳನ್ನು ಗ್ರಹಿಸುವ ಪಂಚ ಜ್ಞಾನೇಂದ್ರಿಯಗಳೇ ಈ ಹಾವಿಗಿರುವ ಹೆಡೆಗಳು. ಈ ಭೂಮಿಯ ಮೇಲೆ 'ಐದು ಹೆಡೆಯ ಸರ್ಪ'ವನ್ನು ಕಾಣುವೆವೊ ಇಲ್ಲವೋ ಹೇಳುವದು ಕಷ್ಟ. ಆದರೆ ಮನಸ್ಸೆಂಬ 'ಐದು ಹೆಡೆಯ ಸರ್ಪ'ವು ಮಾತ್ರ ಉಂಟು. ಇಂಥ ಸರ್ಪವು ಸಂಕಲ್ಪ–ವಿಕಲ್ಪ ವೃತ್ತಿಗಳಿಗೆ ಈಡಾಗದಂತೆ ವರ್ತಿಸಬೇಕು. ಹೀಗಿರದೆ ಹೋದರೆ ದೇಹದಿಂದೊಡಗೂಡಿಕೊಂಡಿದ್ದರೂ, ಪ್ರಾಣದ ಹರಿದಾಟವಿದ್ದರೂ ಜ್ಞಾನದೃಷ್ಟಿಯ ಅಭಾವದಿಂದ ಮಾನವನು ಸತ್ತಂತೆಯೇ ಸರಿ. ಯಾಕಂದರೆ, ಸಂದು–ಸಂಶಯಗಳಿಗೆ ಸ್ಥಾನವನ್ನು ಸಂಯೋಗಿಸಿಕೊಡುವ ಮಾನವನಿಗೆ ಯಥಾರ್ಥ ಜ್ಞಾನವಾಗಲು ಶಕ್ಯವಿಲ್ಲ. ಅವನದು ವ್ಯಾವರ್ತಜ್ಞಾನ ಅಂದರೆ ತಿರುವು–ಮುರುವು ಆದ ತಿಳಿವಳಿಕೆ.

ಇದರಿಂದ ಅವನು ಸಂಸಾರವೆಂಬ ತಿರುಗಣಿಯ ಮಡುವಿನಲ್ಲಿ ಸಿಕ್ಕು ಸೀಗುರಿ-ಗೊಂಡು ಸೋಲುವನು; ಸೊರಗಿ ಸೊರಗಿ ಸಾಯುವನು. ಸಂಸಾರಚಕ್ರದಲ್ಲಿ ಹೀಗೆ ಸುಳಿದಾಡುವ ಮಾನವನಿಗೆ ದೇಹ ಧರಿಸಿದ್ದರೂ ಸತ್ಯ–ಸೌಂದರ್ಯಗಳು ಲಭಿಸದೆ ಹೋಗುವವು. ಆದುದರಿಂದ ಅವನ ವ್ಯವಹಾರವೆಲ್ಲ ಸತ್ತ ಹೆಣ ಸುಳಿದಾಡುವಂತೆ ಎಂದು ಪ್ರಭುದೇವರು ಹೇಳುತ್ತಾರೆ.

ಶ್ವೇತಾಶ್ವತರೋಪನಿಷತ್ತಿನ ಮೇಲೆ ಕೊಟ್ಟ ಶ್ಲೋಕದ ಇಲ್ಲಿಯ ವರೆಗಿನ ವಿವೇಚನೆಯಿಂದ ಪಂಚಜ್ಞಾನೇಂದ್ರಿಯಗಳು ಪಂಚತನ್ಮಾತ್ರಗಳು ಪಂಚ-ಪ್ರಾಣಗಳು ಅಂತಃಕರಣಪಂಚಕ— ಹೀಗೆ ಒಟ್ಟು ೨೦ ತತ್ವಗಳ ವಿಷಯ ವಿಸ್ತಾರವು ನಮಗೆ ಸಿಕ್ಕಂತಾಯಿತು. ಆದರೆ ಇಷ್ಟರಿಂದ ಪ್ರಪಂಚದ ವರ್ಣನೆಯು ಪೂರ್ಣವಾಗಲಿಲ್ಲ. ಅದು ಹೇಗೆಂದರೆ, ' ಪ್ರಪಂಚ ' ಎಂಬ ಪದವು ೨೫ ನ್ನು ಹೇಳುವ ಅರ್ಥವುಳ್ಳದ್ದಾಗಿದೆ. 'ಪಂಚವಿಂಶತೀ' ತತ್ವಗಳಿಂದಾದುದು ಯಾವುದೋ ಅದು ಪ್ರಪಂಚ. ತೋರುವ ಈ ಸೃಷ್ಟಿಕ್ರಮವು ಹೇಗೆ ರಚನೆ ಹೊಂದಿತು ಇಲ್ಲವೆ ರೂಪುಗೊಂಡಿತು ಎಂಬುದನ್ನು ಹೇಳುವಾಗ ನಾವು ೨೫ ತತ್ವಗಳ ಪ್ರತಿಪಾದನೆಯನ್ನು ಮಾಡುತ್ತೇವೆ. ಹಾಗಾದರೆ ಪ್ರಪಂಚದ ಅರ್ಥವೇನು ? ಈ ಶಬ್ದದಲ್ಲಿ ಎರಡು ಪದಗಳಿವೆ. ಪ್ರ + ಪಂಚ ಎಂಬುವೇ ಆ ಎರಡು ಪದಗಳು. ಪಂಚ ಎಂದರೆ ಐದು ಎಂಬುದು ಎಲ್ಲರಿಗೂ ಗೊತ್ತಿದೆ. ಪ್ರ– ಎಂಬುದಕ್ಕೆ ಪ್ರಕೃಷ್ಟ ಇಲ್ಲವೆ ಪಟ್ಟು ಎಂಬೊಂದು ಅರ್ಥವಿದೆ. ಏತರ ಪಟ್ಟು ? ಅದರ ಅಂದರೆ 'ಪ್ರ'ದ ಸಮೀಪವರ್ತಿ ಅಂಕಿಯಾದ ಪಂಚದ ಪಟ್ಟು ಎಂದೇ ಅರ್ಥವಾಗುವದಿಲ್ಲವೆ ? ಹೀಗೆ ನೋಡಿದಾಗ ' ಪ್ರ–ಪಂಚ ' ಇದರರ್ಥ ಪಂಚ × ಪಂಚ (೫ × ೫ = ೨೫) ಎಂದಾಗುತ್ತದೆ. ಇದು ಪ್ರಪಂಚದ ನಿಜವಾದ ಅರ್ಥವು. ಪ್ರಪಂಚದ ಈ ಅರ್ಥವು ಸೃಷ್ಟಿರಚನಾಕ್ರಮದಲ್ಲಿ ಅಡಗಿದ ಇಪ್ಪತ್ತೈದು ತತ್ವ-ಗಳನ್ನು ಅವಲಂಬಿಸಿ ಪ್ರಚಾರದಲ್ಲಿ ಬಂದಿದೆ. ನಮಗೀಗ ಶ್ಲೋಕದ ಇಲ್ಲಿಯ ವರೆಗಿನ ವಿವೇಚನೆಯಿಂದ ಕೇವಲ ೨೦ ತತ್ವಗಳು ಮಾತ್ರ ಹೊರಟಿವೆ. ಇನ್ನುಳಿದ ಐದು ತತ್ವಗಳ ಅರ್ಥವನ್ನು ಕೊಡುವ ಪದಸಮುಚ್ಚಯವಾವುದು ? ಶ್ಲೋಕದ ಕೊನೆಯಲ್ಲಿ ಬರುವ 'ಪಂಚಪರ್ವಾಮ್' ಎಂಬುದೇ ಆ ಪದಸಮುಚ್ಚಯ-ವಾಗಿದೆ. 'ಪಂಚಪರ್ವ' ಅಂದರೆ ಐದು ವಿಭಾಗಗಳೆಂದು ಅರ್ಥವಾಗುತ್ತದೆ. ಯಾಕಂದರೆ, 'ಪರ್ವ' ಎಂದರೆ ವಿಭಾಗ ಎಂದು ಅರ್ಥವಿದೆ. ಈ ಐದು ವಿಭಾಗಗಳೆಂದರೆ ಪಂಚಮಹಾಭೂತಗಳೆಂದೇ ತಿಳಿಯಬೇಕು. ಪೃಥ್ವೀ ಅಪ್ ಅಗ್ನಿ

ವಾಯು ಆಕಾಶಗಳೆಂಬವೇ ಆ ಪಂಚಮಹಾಭೂತಗಳು. ಇಂತು ಪಂಚ-ಮಹಾಭೂತಗಳ ಪಂಚೀಕರಣದ ಹಂಚಿಕೆಯಿಂದಾದುದೇ ಪ್ರ-ಪಂಚ !

ಇದು ಆ ಶ್ಲೋಕದಲ್ಲಿ ಬರುವ ಪ್ರಪಂಚವನ್ನು ವರ್ಣಿಸುವ ಪದ ಸಮುಚ್ಚಯದ ವಿವರಣೆ. ಶ್ಲೋಕದ ಈ ಭಾಗವು ನಿಜವಾಗಿಯೂ ಅತ್ಯಂತ ಮಹತ್ವದ್ದಾಗಿದೆ. ಆದರೆ, ಅದೇ ಶ್ಲೋಕದ ಉಳಿದ ಭಾಗವು ನಮಗೆ ಹೇಳುವ ಅರ್ಥದ ಅಥವಾ ತಿಳಿಸಿಕೊಡುವ ಜ್ಞಾನದ ದೃಷ್ಟಿಯಿಂದ ಕಡಿಮೆ ಮಹತ್ವದ್ದೇನೂ ಆಗಿಲ್ಲ. ಆದುದರಿಂದ ಅದರ ವಿವೇಚನೆಯೂ ಸಹ ಸರಿಯಾದ ರೀತಿಯಲ್ಲಿ ಆದ ಹೊರತು ಮುಂದಿನ ವಿಷಯಗ್ರಹಣವು ಶಕ್ಯವಾಗುವದಿಲ್ಲ. ಅದನ್ನಿಷ್ಟು ಈಗ ನೋಡಿಯೇ ಮುಂದೆ ಸಾಗುವಾ.

'ಪಂಚಾವರ್ತಾಂ ಪಂಚದುಃಖೌಘವೇಗಾಂ' ಅಂದರೆ ಐದು ಪ್ರಕಾರದ ದುಃಖಗಳ ಆವೇಗದಿಂದ ಕೂಡಿದ ಐದು ತಿರುಗಣಿ ಮಡುಗಳು ಈ ಪ್ರಪಂಚ ರೂಪೀ ಹೆದ್ದೊರೆಯಲ್ಲಿವೆ. ಅವು ಯಾವವೆಂದರೆ, ಗರ್ಭ, ಜನನ ಜರೆ ರೋಗ ಮತ್ತು ಮೃತ್ಯುಗಳಿಂದುಂಟಾಗುವ ದುಃಖದ ತೀಕ್ಷ್ಣತೆಯಿಂದೊಡ-ಗೂಡಿದ ಐದು ಅವಸ್ಥೆಗಳೇ ಆ ಪಂಚ ಆವರ್ತಗಳು. ಮನುಷ್ಯನ ದುಃಖವು ನಿಜವಾಗಿಯೂ ಎಲ್ಲಿಂದ ಮತ್ತು ಎಂದಿನಿಂದ ಪ್ರಾರಂಭವಾಗುತ್ತದೆ? ಅವನು ಎಂದು ತಾಯಿಯ ಗರ್ಭದಲ್ಲಿ ಪ್ರವೇಶ ಮಾಡುವನೋ ಅಂದೇ, ಅದೇ ಕ್ಷಣ ದಿಂದಲೇ ಅವನ ದುಃಖದ ಆರಂಭವಾಗುತ್ತದೆ. ಇತ್ತ ಪ್ರಸೂತಿಕಾಲಕ್ಕೆ ತಾಯಿಗೆ ಅಪಾರವಾದ ಪ್ರಸವವೇದನೆಯಾಗುತ್ತದೆ. ಯಾರಿಗೇ ಆಗಲಿ, ಜನನಕಾಲಕ್ಕೂ ದುಃಖವು ತಪ್ಪಿದ್ದಲ್ಲ. ಹೀಗೆಯೇ ಮುಪ್ಪು ರೋಗ ಮರಣ ಮುಂತಾದ ಅವಸ್ಥೆಗಳಲ್ಲಿಯೂ ದುಃಖವು ಮಾನವನನನ್ನು ಬಿಟ್ಟಿಲ್ಲ. ಹೀಗೆ ಮಾನವನು ಈ ಪ್ರಪಂಚರೂಪೀ ಹೆದ್ದೊರೆಯಲ್ಲಿಯ ಭಯಂಕರವಾದ ಹಾಗು ದುಃಖದಾಯಕ ವಾದ ತಿರುಗಣಿ ಮಡುಗಳಲ್ಲಿ ಒಮ್ಮೆ ಸಿಕ್ಕಿಬಿದ್ದನೆಂದರೆ ಅಲ್ಲಿಂದ ಪುನಃ ಪಾರಾಗುವದೇ ಕಷ್ಟಕರವಾಗಿದೆ, ಕಠಿಣತರವಾಗಿದೆ. ಆ ಮೇಲೆ ಶ್ಲೋಕದಲ್ಲಿ ಉಳಿದ ಪದ 'ಪಂಚಾಶದ್ಭೇದಾಂ' ಎಂಬುದು. ಇದು ಪ್ರಪಂಚವೆಂಬ ನದಿಯು ಐವತ್ತು ಭೇದಗಳುಳ್ಳದ್ದಿದೆಯೆಂದು ಹೇಳುತ್ತದೆ. ಜೀವನವು ಅನಂತವಾದ ಭಿನ್ನ ಭಿನ್ನವಾದ ದುಃಖದ ಭಾವನೆಗಳಿಂದ ತುಂಬಿದೆ. ಹೆಜ್ಜೆ ಹೆಜ್ಜೆಗೂ ಅವು ನಮ್ಮನ್ನು ಕಾಡುತ್ತಿರುತ್ತವೆ ಎಂದು ಮುಂತಾಗಿ ಹೇಳುವದೇ ಈ ಮಾತಿನ

ಗೂಢವಾಗಿದೆ. ಈ ರೀತಿಯಾಗಿ, ಶ್ವೇತಾಶ್ವತರೋಪನಿಷತ್ತಿನ ಒಂದೇ ಒಂದು ಶ್ಲೋಕವು ಮೊದಲು ಪ್ರಪಂಚ, ಆ ಮೇಲೆ ಅದರಲ್ಲಿ ತೋರಿ ಕೆಡುವ ಮಾನವ ಸಂಸಾರ ಹಾಗು ಕೊನೆಗೆ ಸಂಸಾರದಿಂದುಂಟಾಗುವ ದುಃಖಾವೇಗ ಇವುಗಳ ವರ್ಣನೆಯನ್ನು ಬಹು ಸುಂದರವಾಗಿ, ಬಂಧುರವಾಗಿ ನಮಗೆ ಮಾಡಿ ಕೊಡುತ್ತದೆ!

ಹೀಗೆ ನಾವು ಕಂಡು, ಕೇಳಿ, ತಿಳಿದುಕೊಂಡ ಮೇಲೆ, ನಮ್ಮ ಎದುರು ನಿಲ್ಲುವ ಸಮಸ್ಯೆ ಒಂದೇ ಒಂದು: ಈ ಮಹಾ ನದಿಯನ್ನು ಹಾಯಾಗಿ ಹಗು-ರಾಗಿ ದಾಟಲು ಅದಾವ ಉಪಾಯವಿದೆ— ಎಂಬುದೇ ಆ ಸಮಸ್ಯೆ. ನಿಜವಾಗಿ ಇಂತಹ ಭೀಕರವಾದ ಆದರೂ ಶ್ರೀಕರವಾಗಬಲ್ಲ ಹೆದ್ದೊರೆಯನ್ನು ದಾಟಿ ಪಾರಾಗಲು ವಿಜ್ಞಾನ ಸಾಲದು; ಅದಕ್ಕೆ ಆತ್ಮಜ್ಞಾನವೇ ಬೇಕು. ವಿಜ್ಞಾನ-ವನ್ನು ಸಾಧಿಸಲಿಕ್ಕೆ ಮಾನವನಲ್ಲಿ ಅಂಥದೇನೂ ದೊಡ್ಡ ಗುಣವಿಶೇಷವಿರಬೇಕಾ ಗಿಲ್ಲ. ಚುರುಕಾದ ಬುದ್ಧಿ ಮತ್ತು ಉದ್ಯೋಗಶೀಲತೆ ಇವೆರಡಿದ್ದರೆ ವಿಜ್ಞಾನವು ಸುಲಭವಾಗಿ ಸಾಧಿಸುತ್ತದೆ. ಇಲ್ಲಿ ಮಾನವನ ಆಂತರಿಕ ಇರುವಿನ ರೀತಿಯಾ-ಗಲಿ ಅಥವಾ ಬಹಿರಂಗ ಜೀವನದ ಆಚಾರ ಇಲ್ಲವೆ ಶೀಲವಾಗಲಿ ಎಣಿಕೆಯಲ್ಲಿ ತೆಗೆದುಕೊಳ್ಳಲ್ಪಡುವದಿಲ್ಲ. ವಿಜ್ಞಾನದಲ್ಲಿ ಪ್ರಗತಿಯನ್ನು ಸಾಧಿಸಬೇಕಾದರೆ ಇವು ಇರಲೇ ಬೇಕೆಂದೇನೂ ಇಲ್ಲ. ಆದರೆ, ಆ ಆತ್ಮಜ್ಞಾನವನ್ನು ಸಾಧಿಸ ಬೇಕಾದರೆ ಮಾನವನಲ್ಲಿ ವಿಶೇಷತರಹದ ವರ್ತನೆ ನಿಚ್ಚಳ ನಿರ್ಮಲವಾದ ಅಂತಃಕರಣ ಮುಂತಾದ ಅನುಪಮವಾದ ಅನರ್ಘ್ಯವಾದ ಸದ್ಗುಣ ಸಂಪತ್ತು ಇರಬೇಕಾಗುತ್ತದೆ. ಬಸವಣ್ಣನವರು ತಮ್ಮದೊಂದು ವಚನದಲ್ಲಿ ವಿವರಿಸುವಂತೆ ಅಂತರಂಗ ಶುದ್ಧಿ ಹಾಗು ಬಹಿರಂಗ ಶುದ್ಧಿಗಳೆರಡೂ ಆತ್ಮಜ್ಞಾನಕ್ಕೆ ಅವಶ್ಯ-ವಾದವುಗಳು. ಆತ್ಮಜ್ಞಾನದ ಜಿಜ್ಞಾಸುಗಳಲ್ಲಿ ಅಥವಾ ಆಧ್ಯಾತ್ಮ ಸಾಧಕನಲ್ಲಿ ಮುಖ್ಯವಾಗಿ ಮೂರು ಸಂಗತಿಗಳು ಅವಶ್ಯವಾಗಿ ಇರಬೇಕಾಗುವದು. ಮೊದ-ಲನೆಯದಾಗಿ, ಸಾಧಕನಲ್ಲಿ ಅಂತರ್ಮುಖವೃತ್ತಿಯಿರಬೇಕು. ಮಾನವನ ಮನಸ್ಸು ಸ್ವಾಭಾವಿಕವಾಗಿ ಬಹಿರ್ಮುಖಿಯಾದುದು. ಅದು ಯಾವಾಗಲೂ ಹೊರಗಿನ ವಿಷಯಗಳತ್ತ ಹರಿಯುತ್ತಿರುತ್ತದೆ. ಎಲ್ಲಿಯ ವರೆಗೆ ಮಾನವನ, ಮುಖ್ಯವಾಗಿ ಅಧ್ಯಾತ್ಮ ಸಾಧಕನ ಮನಸ್ಸು ಕೇವಲ ಬಾಹ್ಯ ವಿಷಯಗಳಲ್ಲಿಯೇ ನಿಮಗ್ನವಾಗಿರುವದೋ ಅಲ್ಲಿಯ ವರೆಗೆ ಅಧ್ಯಾತ್ಮಸಾಧನೆಯು ಮುಂದುವರಿ-ಯದು. ಆದುದರಿಂದ ಬಹಿರ್ಮುಖವಾಗಿರುವ ಸ್ವಾಭಾವಿಕ ಮನಃಪ್ರವೃತ್ತಿ

ಯನ್ನು ಒಳಗಡೆಗೆ ತಿರುಗಿಸಬೇಕು. ಹೀಗೆ ಮನವನ್ನು ಅಂತರ್ಮುಖಗೊಳಿಸುವದೇ ಸಾಧಕನ ಮೊತ್ತಮೊದಲಿನ ಕರ್ತವ್ಯವಾಗಿದೆ. ಎರಡನೆಯದಾಗಿ, ಅಂತಃಕರಣಶುದ್ಧಿಯು ಅತ್ಯಗತ್ಯವಾಗಿ ಸಾಧಕನಲ್ಲಿ ಇರಬೇಕಾದ ಗುಣ ವಿಶೇಷವು. ಅಂತಃಕರಣಶುದ್ಧಿಯಿಲ್ಲದ ಮಾನವನಿಗೆ ವಿಚಾರಶುದ್ಧಿ ಅಥವಾ ಶುದ್ಧಬುದ್ಧಿಯು ಸಾಧ್ಯವಾಗದು. ನಿಜವಾಗಿಯೂ ಶುದ್ಧಬುದ್ಧಿಯಿಂದಲೇ ಆತ್ಮಸಿದ್ಧಿಯು ಲಭಿಸುತ್ತದೆ. ಅಂತಃಕರಣಶುದ್ಧಿಯಿಲ್ಲದೆ ಹೋದರೆ ಮನಸ್ಸು ಮಲ ಆವರಣ ವಿಕ್ಷೇಪಗಳಿಗೆ ವಾಸಸ್ಥಾನವಾಗುತ್ತದೆ. ಇಂತಹ ಮನವೆಂಬ ದರ್ಪಣದಲ್ಲಿ ಸ್ವರೂಪ ಸಾಕ್ಷಾತ್ಕಾರವು ಅಶಕ್ಯವಾಗಿರುತ್ತದೆ. ಜಿಜ್ಞಾಸುವಿನಲ್ಲಿ ಮೂರನೆಯ ಸಂಗತಿಯು ಸ್ಫುರಣಾತ್ಮಕಜ್ಞಾನವಾಗಿದೆ. ಸಾಧಕನಲ್ಲಿ ಈ ಅಂತಃಸ್ಫುರಣವು ಅತ್ಯವಶ್ಯ ಬೆಳಗಬೇಕು. ಬರಿಯ ಪಾಂಡಿತ್ಯ ಇಲ್ಲವೆ ಶಾಸ್ತ್ರಾಭ್ಯಾಸದಿಂದ ಸಾಧಕನಿಗೆ ಆತ್ಮನ ಬಗೆಗೆ ಒಂದು ಪ್ರಕಾರದ ಜ್ಞಾನವಾಗುವದೇನೋ ನಿಜ. ಆದರೆ, ಶುಷ್ಕ ಪಾಂಡಿತ್ಯದಿಂದಾಗಲಿ ಅಥವಾ ಕೇವಲ ಪುಸ್ತಕದ ಜ್ಞಾನದಿಂದಾಗಲಿ ಇಲ್ಲವೆ ಬರಿಯ ಬೌದ್ಧಿಕ ಬೆಳವಣಿಗೆಯಿಂದಾಗಲಿ ಅರಿವಿನಾನಂದವು ಅಂಗಕ್ಕೆ ಅಳವಡದು. ಶಾಸ್ತ್ರೀಯ ಶಬ್ದಗಳಲ್ಲಿ ಇಂತಹ ಜ್ಞಾನವನ್ನು ಪರೋಕ್ಷಜ್ಞಾನವೆಂದು ಕರೆಯುತ್ತಾರೆ. ಆತ್ಮಜ್ಞಾನದ ವಿಷಯದಲ್ಲಿ ಪರೋಕ್ಷಜ್ಞಾನಕ್ಕಿಂತ ಅಪರೋಕ್ಷಜ್ಞಾನಕ್ಕೆ ಉನ್ನತಸ್ಥಾನವಿದೆ; ಹೆಚ್ಚಿನ ಬೆಲೆಯಿದೆ. ಇಂತಹ ಅಪರೋಕ್ಷಜ್ಞಾನವು ಅಂತಃಸ್ಫುರಣದಿಂದಲ್ಲದೆ ಸಾಧ್ಯವಾಗದು.

ಮೇಲೆ ವಿವರಿಸಿದ ಅಂತರ್ಮುಖವೃತ್ತಿ (Introversion), ಪರಿಶುದ್ಧ ಭಾವ, ಚಿತ್ತಶುದ್ಧಿ ಇಲ್ಲವೆ ಅಂತಃಕರಣ ನೈರ್ಮಲ್ಯ (Purification) ಅನುಭೂತಿ ಹಾಗು ಅಂತಃಸ್ಫುರಣ ಅಥವಾ ಸ್ಫುರಣಾತ್ಮಕಜ್ಞಾನ (Intuition) ಈ ಮೂರು ಸಾಧಕನಲ್ಲಿರಬೇಕಾದ ಮುಖ್ಯ ಸಂಗತಿಗಳಿಗೆ ಪಾರಿಭಾಷಿಕ ಶಬ್ದಗಳಲ್ಲಿ ಅಧಿಕಾರಿ ಲಕ್ಷಣಗಳೆಂದು ಕರೆಯಬಹುದು. ಇದೆಲ್ಲವೂ ವಿಜ್ಞಾನದ ವಿದ್ಯಾರ್ಥಿಯಲ್ಲಿ ಇರಲೇ ಬೇಕೆಂದಿಲ್ಲ. ವಿಜ್ಞಾನದಲ್ಲಿ ಒಂದು ಪ್ರಕಾರದ ಪರಿಣತಿಯನ್ನೋ ಪ್ರಗತಿಯನ್ನೋ ಅನೇಕರು ಸಾಧಿಸಬಲ್ಲರು, ಸಾಧಿಸಿದ್ದಾರೆ. ಆದರೆ ಆತ್ಮಜ್ಞಾನದಲ್ಲಿ ಆಳವಾದ ಹಾಗು ನೀಳವಾದ ಅನುಭವವನ್ನಾಗಲಿ ಇಲ್ಲವೆ ನಿಪುಣತೆಯನ್ನಾಗಲಿ ಸಾಧಿಸಬಲ್ಲವರೇ ಆಗಲಿ, ಸಾಧಿಸಿದವರೇ ಆಗಲಿ ಸಿಕ್ಕುವದು ಅತಿ ವಿರಳ. ಅಲ್ಲಿ ಸಾಧಕನು ಅಧಿಕಾರಿಲಕ್ಷಣಗಳನ್ನೆಲ್ಲ ತನ್ನ ಜೀವನದಲ್ಲಿ ಅಳವಡಿಸಿಕೊಂಡಿರಬೇಕಾಗುತ್ತದೆ. ಇದು ಬಲು ಕಠಿಣವಾದುದು. ಇದೇ

ಅರ್ಥದಲ್ಲಿ ಬಸವಣ್ಣನವರು 'ಆದಿಗುರು, ಅನಾದಿ ಶಿಷ್ಯ' ಎಂದು ಹೇಳುತ್ತಾರೆ. ಅಂದರೆ ಗುರುವು ಆದಿಪುರುಷನಾಗಿದ್ದಾನೆ. ಅವನು ನಿಜವಾಗಿ ಎಲ್ಲ ಅರ್ಥದಲ್ಲಿಯೂ ಮೊದಲಿಗನು. ಗುರುವನ್ನು ಜ್ಞಾನದೃಷ್ಟಿಯಿಂದಲೇ ನೋಡಲಿ ಇಲ್ಲವೆ ಅನುಭಾವದ ದೃಷ್ಟಿಯಿಂದಲೇ ನೋಡಲಿ ಅಥವಾ ಅವನ ಸ್ಥಾನ-ಮಾನ-ವಿದ್ವತ್ತುಗಳ ದೃಷ್ಟಿಯಿಂದಲೇ ನೋಡಲಿ, ಅವನು ನಮಗೆ ಆದಿಪುರುಷನೇ! ಅವನು ಎಲ್ಲರಿಗಿಂತಲೂ ಹಿರಿಯನೇ!! ಆದರೆ, ಶಿಷ್ಯನಿಗೆ ಮಾತ್ರ ಆದಿಯೆಂಬುದೇ ಇಲ್ಲ. ಅವನು ಅನಾದಿಪುರುಷನಾಗಿದ್ದಾನೆ. ಆದಿಯುಳ್ಳ ಗುರುವಿಗಿಂತಲೂ ಆದಿಯೇ ಇಲ್ಲದ ಶಿಷ್ಯನು ಶ್ರೇಷ್ಠನೆಂದಾಗಲಿ ಅಥವಾ ಉನ್ನತೋನ್ನತ ಸ್ಥಾನ-ಮಾನವುಳ್ಳವನೆಂದಾಗಲಿ ಇದರ ಅರ್ಥವಿರದೆ ಶಿಷ್ಯನು ಗುರುವಿನ ಸಾಮಿಪ್ಯದಲ್ಲಿ ಬಂದು ಶಾಸ್ತ್ರದ ಶ್ರವಣ ಸಾಧನ ಅಭ್ಯಾಸ ಮುಂತಾದವುಗಳನ್ನು ಗುರುವಿನ ಮಾರ್ಗದರ್ಶನದಲ್ಲಿ ಸಾಗಿಸುವ ಪೂರ್ವದಲ್ಲಿ ಅವನು ಒಂದು ವಿಶಿಷ್ಟವಾದ ಹೃದಯಪರಿಪಾಕವನ್ನು ಸಂಪಾದಿಸಿದ ವ್ಯಕ್ತಿಯಾಗಿರಬೇಕಾಗುತ್ತದೆ! ಅವನು ತನ್ನ ಜೀವನವನ್ನು ವಿಶೇಷವಾದಮೊಂದು ರೀತಿಯಲ್ಲಿ ಮಾರ್ಪಡಿಸಿಕೊಂಡಿರಬೇಕಾಗುತ್ತದೆ ಎಂದು ಅದರರ್ಥ. ಇದೇ ಮಾತನ್ನು ಅಲ್ಲಮಪ್ರಭುದೇವರು ತಮ್ಮ ನೈಜವಾದ ಬೆಡಗಿನ ರೀತಿಯಲ್ಲಿ ಮನಂಬುಗುವ ಹೀಗೆ ಹೇಳಿದ್ದಾರೆ:

ಗಂಡಗಿಂತ ಮುನ್ನವೇ ಹೆಂಡತಿ ಹುಟ್ಟಿ, ಗಂಡಗಿಂತ ಕಿರಿಯಳಾದಳು!

ಸಂಸ್ಕೃತದ 'ಗುರು' ಎಂಬ ಪದಕ್ಕೆ 'ಗರುವ ಗಂಡ ದೊಡ್ಡವ' ಎಂದು ಅರ್ಥವಾಗುತ್ತದೆ. ಆದುದರಿಂದ ಇಲ್ಲಿ ಗಂಡ ಎಂದರೆ ಗುರು ಎಂಬ ಅರ್ಥವಾಗುವದು. ಅಂದ ಮೇಲೆ ಹೆಂಡತಿ ಎಂಬುದಕ್ಕೆ ಶಿಷ್ಯನೆಂದು ತಾನೇ ಅರ್ಥವಾಯಿತು. ಗಂಡಗಿಂತ ಹೆಂಡತಿ ಮೊದಲೇ ಹುಟ್ಟಿ ಅವನಿಗಿಂತಲೂ ಕಿರಿಯಳಾದಳು ಎಂಬುದರ ಅರ್ಥವಿಷ್ಟೇ: ಅಧಿಕಾರಿ ಲಕ್ಷಣಗಳನ್ನು ತನ್ನ ಜೀವನದಲ್ಲಿ ಸಾಧಿಸಿ ಸಂಪಾದಿಸಿದ ಸಾಧಕನು ಇಲ್ಲವೆ ಶಿಷ್ಯನು ನಿಜವಾಗಿಯೂ ಗುರುಕರಕಮಲಜಾತನಾಗುವದಕ್ಕಿಂತ ಮೊದಲು ಅಥವಾ ಗುರುಪುತ್ರನಾಗುವ ಮುನ್ನ ಅಧ್ಯಾತ್ಮಿಕವಾದ ಒಂದು ಅರ್ಥದಲ್ಲಿ ಜನನವನ್ನು ತಾಳಿರುತ್ತಾನೆ. ಈ ಅರ್ಥದಲ್ಲಿ ಗುರುವಿಗಿಂತ ಮುನ್ನವೆ ಹುಟ್ಟಿದ ಶಿಷ್ಯನು ಮುಂದೆ ಗುರುವಿನ ಹತ್ತಿರ ಅಭ್ಯಾಸ-ಸಾಧನೆಗಳನ್ನು ಆರಂಭಿಸುವಾಗ ಮತ್ತೊಮ್ಮೆ ಅವೇ ಗುಣಗಳನ್ನು

ಕೂಡಿಕೊಂಡು ವಿನೀತಭಾವದಿಂದೊಡಗೂಡಿ, ಗುರುಭಕ್ತಿಯಿಂದ ಜೀವನವನ್ನು ನಡೆಸಬೇಕಾಗುತ್ತದೆ. ಎಂದರೆ ಗುರುವಿಗಿಂತ ಮುನ್ನವೆ ಹುಟ್ಟಿ ತಾನು ಅವನಿಗಿಂತ ಕಿರಿಯನಾಗಿ, ವಿನೀತನಾಗಿ ಇರಬೇಕಾಗುತ್ತದೆ. ಇಂಥ ಸಾಧಕನೇ ಆತ್ಮಜ್ಞಾನಕ್ಕೆ ಅಧಿಕಾರಿಯು; ಗುರುವಿಗೆ ನಿಜವಾದ ಶಿಷ್ಯನು; ಹಾಗು ಇಂಥವನೇ ಆಧ್ಯಾತ್ಮಿಕ ಜಗತ್ತಿನಲ್ಲಿ ಅಡಿಯಿಟ್ಟು ಗುರುವಿನ ಸಾನಿಧ್ಯ, ಗುರುವಿನ ಮಾರ್ಗದರ್ಶನ, ಗುರೂಪದೇಶ ಮತ್ತು ಗುರುವಿನ ಅನುಗ್ರಹಗಳ ಮುಖಾಂತರ ಆತ್ಮಜ್ಞಾನದಲ್ಲಿ ನಿಲುಕಡೆಯನ್ನು ಹೊಂದಿ ನಿತ್ಯಾನಂದ ಸಾಗರದಲ್ಲಿ ಮುಳುಗೇಳುತ್ತಾನೆ.

ಆದರೆ ಇಂಥ ಆತ್ಮಜ್ಞಾನದಲ್ಲಿ ನಿಲುಕಡೆಯನ್ನು ಹೊಂದುವ ಬಗೆ ಯಾವುದು? ಮಾರ್ಗವಾವುದು? ಎಂಬುದೇ ಸಾಧಕನಿಗೇಳುವ ಮುಂದಿನ ಪ್ರಶ್ನೆಯಾಗಿದೆ. ಆತ್ಮಜ್ಞಾನದಲ್ಲಿ ನಿಲುಕಡೆಯನ್ನು ಹೊಂದುವ ಅಂಥದೊಂದು ಬಗೆಯಿಲ್ಲದಿಲ್ಲ, ಮಾರ್ಗವಿಲ್ಲದಿಲ್ಲ. ಅದುವೇ ಅನುಭಾವಮಾರ್ಗ. ಈ ಅನುಭಾವ ಮಾರ್ಗದ ಬೆಡಗು ಕೆಳಗಿನ ವಚನದಲ್ಲಿ ಬಹು ಮಾರ್ಮಿಕವಾಗಿ ವರ್ಣಿತವಾದುದನ್ನು ನಾವು ಕಾಣಬಹುದಾಗಿದೆ:

ಅಯ್ಯಾ, ಆರು ಇಲ್ಲದ ಅರಣ್ಯದಲ್ಲಿ ನಾನು ಅಡಿಯಿಟ್ಟು ನಡೆವುತಿರ್ದೆನಯ್ಯಾ.
ಮುಂದೆ ಬರ ಬರ ಮಹಾಸರೋವರವ ಕಂಡೆ.
ಆ ಸರೋವರದೊಳಗೊಂದು ಹಿರಿಯ ಮೃಗವ ಕಂಡೆ.
ಆ ಮೃಗಕ್ಕೆ ಕೊಂಬುಂಟು, ತಲೆಯಿಲ್ಲ. ಬಾಯಿ ಉಂಟು, ಕಣ್ಣು ಇಲ್ಲ.
ಕೈ ಉಂಟು, ಬೆರಳಿಲ್ಲ. ಕಾಲುಂಟು, ಹೆಜ್ಜೆಯಿಲ್ಲ.
ಒಡಲುಂಟು, ಪ್ರಾಣವಿಲ್ಲ.
ಇದ ಕಂಡು ಹೌಹ್ವನೆ ಹಾರಿ ಹೆದರಿ ಬಿದ್ದೆನಯ್ಯಾ.
ಆಗ ಎನ್ನ ಹೆತ್ತ ತಾಯಿ ಬಂದು ಎತ್ತಿ ಕುಳ್ಳಿರಿಸಿ
ಚಿತ್ತ ಮೂಲಾಗ್ನಿಯ ಒತ್ತಿ ಉರುಹಿದಡೆ
ಎಲ್ಲವು ಸುಟ್ಟು, ಬಟ್ಟಬಯಲಾದವು.
ಬಟ್ಟಬಯಲೊಳಗೆ ಅಡಿಯಿಟ್ಟು ನಡೆವಾಗ ಮುಂದೆ
ಇಟ್ಟೆಡಿಯ ಬಾಗಿಲೊಳಗೆ ಮತ್ತೊಂದು ಮೃಗವ ಕಂಡೆ.

ಅದಕೆ ತಲೆ ಉಂಟು, ಕೋಂಬು ಇಲ್ಲ. ಕಣ್ಣು ಉಂಟು, ಬಾಯಿ ಇಲ್ಲ.
ಹಸ್ತವುಂಟು, ಕೈಯಿಲ್ಲ. ಹೆಜ್ಜೆಯುಂಟು, ಕಾಲಿಲ್ಲ.
ಪ್ರಾಣವುಂಟು ಒಡಲಿಲ್ಲ.
ಇದ ಕಂಡು ನಾನಪ್ಪಿಕೊಳ್ಳಹೋದರೆ
ಮುಟ್ಟದ ಮುನ್ನವೆ ಎನ್ನನೆ ನುಂಗಿತ್ತು,
ನುಂಗಿದ ಮೃಗ ಮಹಾಲಿಂಗದಲ್ಲಿಯೆ ಅಡಗಿತ್ತು,
ಬಸವಪ್ರಿಯ ಕೂಡಲ ಚೆನ್ನಬಸವಣ್ಣ.



ಇದೊಂದು ಬೆಡಗಿನ ವಚನವು. ಇಂಥ ಬೆಡಗಿನ ವಚನಗಳು ಬೇರೆ, ಬೇರೆ ವಚನಕಾರರ ವಚನಗಳಲ್ಲಿ ಅಸಂಖ್ಯ ಸಿಗುತ್ತವೆ. ಆದರೆ ಈ ಬೆಡಗಿನ ವಚನಗಳು ಶ್ರೀ ಅಲ್ಲಮ ಪ್ರಭುವಿನ ವಚನಗಳಲ್ಲಿ ವಿಶೇಷವಾಗಿದ್ದುದು ಕಂಡು-ಬರುತ್ತದೆ. ದಾಸಸಾಹಿತ್ಯದಲ್ಲಿಯೂ 'ಕನಕನ ಮುಂಡಿಗೆ'ಗಳೆಂದು ಕನಕ-ದಾಸರು ಬರೆದ ಕೆಲವು ಪದಗಳು ಪ್ರಸಿದ್ಧವಿವೆ. ಅವೂ ಒಂದು ಪ್ರಕಾರದ ಬೆಡಗಿನ ವಚನಗಳೇ.

'ಬೆಡಗು' ಎಂಬ ಪದಕ್ಕೆ 'ಸೌಂದರ್ಯ'ವೆಂತಲೂ ಹಾಗೂ 'ಒಗಟು' ಎಂತಲೂ ಎರಡು ಅರ್ಥಗಳಿವೆ. ವಚನಸಾಹಿತ್ಯದಲ್ಲಿ ಬರುವ ಇಂಥ ವಚನಗಳ ಹಾಗು ಕನಕದಾಸರ ಮುಂಡಿಗೆಗಳ ಅಭ್ಯಾಸವನ್ನು ಆಳವಾಗಿ ಮಾಡಿದಾಗ ಅವುಗಳಲ್ಲಿ ಒಂದು ಬಗೆಯ ಸೌಂದರ್ಯವು ತುಂಬಿರುವಂತೆ ರಹಸ್ಯವೂ ಅಡಗಿರುತ್ತದೆ. ಒಡೆಯಲು ಬಾರದ ಒಡಪಿನಂತಿರುವ ಈ ವಚನಗಳಲ್ಲಿ ಹಾಗು ಪದಗಳಲ್ಲಿ ಒಂದು ಬಗೆಯ ಬೆಡಗು—ಸೌಂದರ್ಯ ಮತ್ತು ಸಮ-ಸ್ಯಾತ್ಮಕ ರಹಸ್ಯ ಹಾಸುಹೊಕ್ಕಾಗಿರುವದನ್ನು ಮನಗಾಣಬಹುದು. ಆದರೆ, ಸಾಮಾನ್ಯರಿಗೆ ಇವು ಒಡೆಯಲಾಗದ ಒಗಟುಗಳಂತೆ ಕಂಡರೆ ಅನುಭಾವಿಗಳಿಗೆ ಮಾತ್ರ ಅವು ಸುಲಭ ಹಾಗು ಸುಬೋಧವಾದ ಸಂಗತಿಗಳು. ಪಾಲ್ಕುರಿಕೆಯ ಸೋಮಾರಾಧ್ಯರು ಹೇಳಿದಂತೆ, ಬೆಡಗಿನ ವಚನಗಳು ಕಂಡವರಿಗೆ ಕಣಕದ ಕಡಬು, ಕಾಣದವರಿಗೆ ಕಲ್ಲುಪೆಟ್ಟಿನಂತಿರುತ್ತವೆ. ಅಂದರೆ ಅನುಭಾವಿಗಳು ಬೆಡಗಿನ ವಚನಗಳ ಸಾರಸರ್ವಸ್ವವನ್ನು ಸೂರೆಗೊಳ್ಳುವರು; ಅದರ ಸವಿ-ಯನ್ನುಂಡು ಅವರ ಮೈ—ಮನಗಳೆರಡೂ ತೂಗಿ ತೊನೆದಾಡುವವು. ಆದರೆ,

ಸ್ವಾನುಭಾವವಿಲ್ಲದ ಪಂಡಿತರಿಗಾಗಲಿ ಪಾಮರರಿಗಾಗಲಿ, ಆ ಬೆಡಗಿನ ವಚನಗಳು ಕಲ್ಲಿನಂತೆ ಕಠಿಣವಾಗಿ ಪರಿಣಮಿಸುವವು, ಕರ್ಣಕಠೋರವಾಗಿ ಕಾಣುವವು. ಪರಾವಾಣಿಯಲ್ಲಿ ಕಂಡ ಅನುಭವವನ್ನು ಎಷ್ಟೋ ಸಲ ಅನುಭಾವಿಗಳಿಗೆ ಇದ್ದಕ್ಕಿದ್ದಂತೆ ತಿಳಿಸಿ ಹೇಳಲು ಆಗುವದಿಲ್ಲ. ಅನುಭಾವಿಗಳು ತಮಗೆ ಪರಾವಾಣಿಯಲ್ಲಾದ ದಿವ್ಯಾನುಭವವನ್ನು ವೈಖರೀವಾಣಿಯಲ್ಲಿ ಇಳಿಸುವಾಗ ಈ ಶಬ್ದಗಳ ಸಾಮರ್ಥ್ಯವು ಎಷ್ಟು ಮಾತ್ರಕ್ಕೂ ಸರಿದೂಗುವಂತೆ ಕಾಣುವದೇ ಇಲ್ಲ. ಆಗ ಅವರು ತಾವು ಕಂಡುಂಡ ಆ ಅನುಭವವನ್ನು ಇದ್ದಕ್ಕಿದ್ದಂತೆ ಶಬ್ದಗಳಲ್ಲಿ ಹೇಳದೆ ತಿರುವುಮುರುವು ಶಬ್ದಗಳಲ್ಲಿ ಹೇಳಿಬಿಡುತ್ತಾರೆ. ಹೀಗೆ ಅನುಭಾವಿಗಳ ಅನುಭಾವವು ತಿರುವು–ಮುರುವು ಶಬ್ದಗಳಲ್ಲಿ ಇಳಿದು ಬಂದಾಗ ಅವೇ ಬೆಡಗಿನ ವಚನಗಳಾಗಿ ಪರಿಣಮಿಸುತ್ತವೆ. ಇಂಥದೊಂದು ದಿವ್ಯಾನುಭವವನ್ನು ಹೇಳುವ ಭವ್ಯ ಬೆಡಗಿನಿಂದೊಡಗೂಡಿದ ವಚನಗಳಲ್ಲಿ ಮೇಲಿನ ಹಡಪದ ಅಪ್ಪಣ್ಣನ ವಚನವೂ ಒಂದಾಗಿದೆ. ಈಗ ಅದರಲ್ಲಿ ಅಡಗಿದ ಬೆಡಗನ್ನು ಬಿಡಿಸಿ ನೋಡುವಾ.

ಈ ಭವಪ್ರಪಂಚದಲ್ಲಿ ಆತ್ಮನಿಗೆ ಯಾರದೂ ಸಂಬಂಧವಿಲ್ಲ. ವಚನದಲ್ಲಿ ಬರುವ 'ಆರು ಇಲ್ಲದ ಅರಣ್ಯ'ವೆಂದರೆ ಯಾರ ಸಂಬಂಧವೂ ಇಲ್ಲದ ಭವ್ಯಾರಣ್ಯ ಇಲ್ಲವೆ ಪ್ರಪಂಚವೆಂದೇ ಅರ್ಥ. ಅಲ್ಲಮಪ್ರಭುವು ಒಂದೆಡೆ ಬಹಳ ಮನ ಹಿಡಿಯುವ ಹಾಗೆ ಈ ಭವಪ್ರಪಂಚವನ್ನು ಬಣ್ಣಿಸಿದ್ದಾರೆ. 'ಕರೆಯದೆ ಬಂದುದ, ಹೇಳದೆ ಹೋದುದನಾರು ಅರಿಯರಲ್ಲ. ಗುಹೇಶ್ವರನೆಂಬ ಲಿಂಗವು ಉಣ್ಣದೆ ಹೋದುದನಾರು ಅರಿಯರಲ್ಲ.' ಈ ಪ್ರಪಂಚಕ್ಕೆ ಬರಬೇಕೆಂದು ನಮಗೆ ಯಾರೂ ಆಮಂತ್ರಣವನ್ನು ಕೊಟ್ಟಿಲ್ಲ, ಆಹ್ವಾನವನ್ನಿತ್ತಿಲ್ಲ. ನಾವೆಲ್ಲರೂ ನಿಜಕ್ಕೂ ಇಲ್ಲಿಗೆ ಕರೆಯದೆ ಬಂದಿದ್ದೇವೆ. ಹಾಗೆಯೇ ನಾವು ಹೋಗುವಾಗ ಯಾರಿಗೂ ಹೇಳದೆ ಹೋಗುತ್ತೇವೆ. ಸಾಯುವಾಗ, ನಾವು ಇಂದೇ ಸಾಯುತ್ತೇವೆ, ಆದುದರಿಂದ ಹೋಗಿ ಬರುತ್ತೇವೆ— ಎಂದು ಮುಂತಾಗಿ ಯಾರ ಮುಂದೆಯೂ ಹೇಳುವದಿಲ್ಲ. ಪ್ರಭುವಿನ ವಚನದಲ್ಲಿಯ 'ಗುಹೇಶ್ವರನೆಂಬ ಲಿಂಗವು ಉಣ್ಣದೆ ಹೋದುದನಾರು ಅರಿಯರಲ್ಲ!' ಎಂಬ ಮಾತು ಇನ್ನೂ ಬಹಳ ಮಾರ್ಮಿಕವಾಗಿದೆ. ಜ್ಞಾನಿಯು ಅಥವಾ ಶಿವಶರಣನು ಈ ಲೋಕದಲ್ಲಿ ಎಲ್ಲರೂ ಹುಟ್ಟುವಂತೆ ಹುಟ್ಟುವದೇನೋ ನಿಜ; ಆದರೆ ಅವನು ಈ ಪ್ರಪಂಚದಲ್ಲಿ ನಿರ್ಲಿಪ್ತ ಸ್ಥಿತಿಯಲ್ಲಿದ್ದು ಕೊನೆಗೊಂದು ದಿನ ತನ್ನ ಲೀಲೆಯನ್ನು ಮುಗಿಸುತ್ತಾನೆ.

ಸಾಮಾನ್ಯರಂತೆ ಅವನು ಪ್ರಪಂಚದಲ್ಲಿ ಹುಟ್ಟಿ ಬಂದರೂ ಸಂಸಾರದ ಬಂಧನಕ್ಕೆ ಒಳಗಾಗುವದಿಲ್ಲ. ಅವನೂ ಪ್ರಪಂಚದಲ್ಲಿ ವಿಹರಿಸುತ್ತಾನೆ; ಆದರೆ ಅವನದು ಶಿವಪ್ರಪಂಚ. ಈ ಸಂದರ್ಭದಲ್ಲಿ ನಾವು ಪ್ರಪಂಚ ಹಾಗೂ ಸಂಸಾರಗಳಲ್ಲಿಯ ಅಂತರವನ್ನು ನೆನಪಿಡಬೇಕು. ಈಗಾಗಲೇ ಸವಿಸ್ತಾರವಾಗಿ ವಿವರಿಸಿದಂತೆ ಪ್ರಪಂಚವು ಪಂಚಮಹಾಭೂತಗಳ ಪಂಚೀಕರಣದ ಹಂಚಿಕೆಯಿಂದಾಗಿದೆ. ಆದರೆ ಪ್ರಪಂಚವೇ ಸಂಸಾರವಲ್ಲ. 'ಸಮ್+ಸೃ' ಎಂಬ ಸಂಸ್ಕೃತ ಮೂಲ ಧಾತುವಿನಿಂದ 'ಸಂಸಾರ' ಎಂಬ ಶಬ್ದವು ಉತ್ಪತ್ತಿಯಾಗಿರುತ್ತದೆ. 'ಸಂ+ಸೃ' ಪದಕ್ಕೆ 'ಚಕ್ರಾಕಾರದಲ್ಲಿ ತಿರುಗು' ಎಂದು ಅರ್ಥವಾಗುತ್ತದೆ. ಅದಕ್ಕಾಗಿಯೇ 'ಸಂಸಾರ ಚಕ್ರ' ಎಂಬುದನ್ನು ಮೇಲಿಂದ ಮೇಲೆ ಅನುಭಾವಿಗಳು, ಜ್ಞಾನಿಗಳು ಉಪಯೋಗಿಸುತ್ತಿರುವದನ್ನು ನಾವು ಕಾಣುತ್ತೇವೆ. ಜನನ–ಮರಣಗಳ ಅವ್ಯಾಹತವಾದ ಚಕ್ರದಲ್ಲಿ ಜೀವನು ತಿರುಗುತ್ತಿರುವ ಒಂದು ರೀತಿಯು ಸಂಸಾರ ಶಬ್ದದಿಂದ ನಿರ್ದೇಶಿತವಾಗುತ್ತದೆ. ಜೀವನು ಈ ಜನನ–ಮರಣಗಳ ವರ್ತುಲದಲ್ಲಿ ಸಿಕ್ಕಿಬಿದ್ದು ಸಂಸಾರದುಃಖದಿಂದ ಪಾರಾಗಲಾರದವನಾಗಿದ್ದಾನೆ.

ಪುನರಪಿ ಜನನಂ ಪುನರಪಿ ಮರಣಂ ।
ಪುನರಪಿ ಜನನೀಜಠರೇ ಶಯನಂ ॥

ಎಂಬುದು ಈ ಜೀವನ ನಿಃಸಹಾಯಕ ಸ್ಥಿತಿಯಾಗಿದೆ. ಅವನು ಈ ವರ್ತುಲದಲ್ಲಿ ಅದೆಷ್ಟು ತಿರುಗಿದರೂ, ತಿರುಗಿತಿರುಗಿ ಯಾವಾಗ ನೋಡಿದರೂ ಗಾಣದೆತ್ತು ಇದ್ದಲ್ಲಿಯೇ ಇರುವಂತೆ, ಪ್ರಗತಿಯೆಂಬುದನ್ನು ಎಳ್ಳನಿತು ಕಾಣನು. ಆದರೆ ಶರಣನ ಜೀವನದ ರೀತಿಯೇ ಬೇರೆ. ಅವನು ನಿಜವಾಗಿಯೂ ಲೀಲಾ-ಪುರುಷ. ಅವನು ಸಾಮಾನ್ಯ ಜೀವರಂತೆ ಈ ಸಂಸಾರದ ದುಷ್ಟ ವರ್ತುಲದಲ್ಲಿ ಸಿಕ್ಕುವವನಲ್ಲ. ವರ್ತುಲಕ್ಕೆ ತೆಗೆದ ಸ್ಪರ್ಶರೇಖೆಯು ಹೇಗೆ ಸಿಡಿದು ನಿಂತಿರು-ತ್ತದೆಯೋ ಹಾಗೆಯೇ ಶರಣನು ಸಂಸಾರವರ್ತುಲದಿಂದ ಸ್ಪರ್ಶರೇಖಾ ಮಾರ್ಗ-ಗಾಮಿಯಾಗಿಯೇ ಚರಿಸುತ್ತಾನೆ. ಎಂದರೆ ಅವನು ಕೇವಲ ನಿರ್ಲಿಪ್ತನಾಗಿ ನಿಂತುಕೊಂಡಿದ್ದಾನೆ. ಯಾಕಂದರೆ, ಅವನಿಗೆ ಈಗ ಸಮ್ಯಕ್‌ದೃಷ್ಟಿಯು ಸಾಧಿಸಿರುತ್ತದೆ. ಅವನಿಗೆ ಯಾವದೇ ಭೋಗದ ಲೇಪವಿಲ್ಲ. ಅವನು ಈ ಪ್ರಪಂಚದಲ್ಲಿ ಬಂದು ಸಂಸಾರದ ಭೋಗೋಪಭೋಗಗಳನ್ನು ಉಣ್ಣದೆ ಹೋಗುವ ಮಾನವಶ್ರೇಷ್ಠನಾಗಿದ್ದಾನೆ.

ನಾವು ಅರಣ್ಯಕ್ಕೆ 'ಭವಾರಣ್ಯ'ವೆಂದು ಅರ್ಥಮಾಡಿದ ಮೇಲೆ ಅದರಲ್ಲಿ ತೋರುವ ಮಹಾಸರೋವರವು 'ಸಂಸಾರ ಸರೋವರ'ವೆಂದೇ ಅರ್ಥವಾಗುತ್ತದೆ. ಅಧ್ಯಾತ್ಮದ ಹಂಬಲವಿಲ್ಲದ ಸಾಮಾನ್ಯ ಮಾನವನಿಗೆ ಸಂಸಾರವು ತಾಪತ್ರಯದ ಅಥವಾ ದುಃಖದ ಆಗರವಾಗಿದೆ. ಇಂಥ ದುಃಖಮಯ ಸಂಸಾರದಲ್ಲಿ ಮಾನವನು ಭೋಗಾಸಕ್ತನಾಗಿ ವಿಷಯಗಳ ಉರುಳಿನಲ್ಲಿ ಸಿಲುಕುತ್ತಾನೆ. ಆದರೆ, ಬರಿಯ ಬಾಹ್ಯವಿಷಯಗಳ ಭೋಗದಿಂದ ಇಂದ್ರಿಯಗಳು ತಪ್ತವಾಗುವವಲ್ಲದೆ ಅವು ಎಂದೂ ತೃಪ್ತವಾಗವು.

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ||
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ||

ಬೆಂಕಿಯಲ್ಲಿ ಸುರುವಿದ ತುಪ್ಪದಿಂದ ಬೆಂಕಿ ಆರದೆ ಇನ್ನೂ ಹೆಚ್ಚು ಪ್ರಜ್ವಲವಾಗುವಂತೆ ಸಂಸಾರ ವಿಷಯಭೋಗ. "ಜಂಬೂ ದ್ವೀಪದ ವ್ಯವಹಾರಿ......... ಉಷ್ಣೆ–ತೃಷ್ಣೆ ಘನವಾಗಿ ಕಡಲೇಳು ಕುಡಿದು ನೀರಡಿಸಿ ಅರಲುಗೊಂಡು ಬೆರಗಾದ." —ಎಂದು ಅಲ್ಲಮ ಪ್ರಭುದೇವರು ಇದೇ ಮಾತನ್ನು ಬೆಡಗಿನ ನುಡಿಯಲ್ಲಿ ಹೇಳಿದ್ದಾರೆ. ವಿಷಯಗಳನ್ನು ಭೋಗಿಸುತ್ತ ಭೋಗಿಸುತ್ತ ಹೋದಷ್ಟೂ ಅವುಗಳ ಬಗೆಗೆ ನಮ್ಮಲ್ಲಿ ಇನ್ನೂ ಹೆಚ್ಚೆಚ್ಚು ತೀಕ್ಷ್ಣವಾದ, ತೀವ್ರತರವಾದ ಅತೃಪ್ತಿ, ಅಸಮಾಧಾನಗಳೇ ಹೆಚ್ಚುತ್ತ ಹೋಗುವವು; ಭೋಗಾಸಕ್ತಿ ಇಲ್ಲವೆ ಭೋಗಲಾಲಸೆಗಳು ಅಧಿಕಾಧಿಕ ಪ್ರಮಾಣದಲ್ಲಿ ಜಾಗ್ರತವಾಗುತ್ತ ಸಾಗುವವು; ಮಾನವನು ಸಾಯುವ ಕೊನೆಯ ಗಳಿಗೆಯ ವರೆಗೂ ವಿಷಯಗಳಲ್ಲಿಯೇ ಮುಳುಗೇಳುತ್ತ ಅಶಾಂತಿಯಿಂದಲೇ ಇಹಲೋಕಯಾತ್ರೆಯನ್ನು ಮುಗಿಸುವನು. ಇದು ನಿಜವಾಗಿಯೂ ಮಾನವ ಜೀವನದ ದುಃಖಾಂತವಾಗಿದೆ. ಇಂತಿದೆ ಸಂಸಾರಸಾಗರದ ದುಃಸ್ಥಿತಿಯ ದುರಂತ! ಒಮ್ಮೆ ಈ ದುಃಸ್ಥಿತಿಯಿಂದ ಕೂಡಿದ ಸಂಸಾರವೆಂಬ ಮಹಾಸರೋವರದೊಳಗೆ ವಿಷಯಗಳ ಉರುಬಿನಲ್ಲಿ ಸಿಕ್ಕಿಕೊಂಡ ಮೇಲೆ ಜೀವನ ಸ್ಥಿತಿಯು ಮತ್ತಿಷ್ಟು ಹದಗೆಡುತ್ತದೆ. ಅವನ ಸ್ಥಿತಿಯು ಅತೀವ ಕರುಣಾಜನಕವಾಗುತ್ತದೆ.

'ಆ ಸರೋವರದೊಳಗೊಂದು ಹಿರಿಯ ಮೃಗ.' ಆ ಹಿರಿಯ ಮೃಗಕ್ಕೆ 'ಜೀವ'ವೆಂದರ್ಥ. ಆ ಜೀವನ ಆಕಾರ–ವಿಕಾರಗಳೆಂತು? 'ಆ ಮೃಗಕ್ಕೆ ಕೊಂಬುಂಟು, ತಲೆಯಿಲ್ಲ'. ಜೀವನಿಗೆ ಅಹಂಕಾರ–ಮಮಕಾರಗಳೆಂಬ ಎರಡು

ಕೋಡುಗಳಿವೆ. ಈ ಎರಡು ಕೋಡುಗಳಿರುವದರಿಂದ ಜೀವನು ಜಗತ್ತಿನಲ್ಲಿ ಅನೇಕ ಅನತ್ಕೃತ್ಯಗಳನ್ನೆಸಗುತ್ತಾನೆ. ಅಂತಹ ಹೀನ ಕೃತ್ಯಗಳನ್ನು ಮಾಡುವಾಗ ಅವನಿಗೆ ಸಾರಾಸಾರ ವಿಚಾರದ ಅರಿವೇ ಇರುವದಿಲ್ಲ. ಯಾಕಂದರೆ, ಅವನಿಗೆ 'ತಲೆಯಿಲ್ಲ!' ಸುಜ್ಞಾನವಿಲ್ಲ, ಸದಸದ್ವಿವೇಕ ಬುದ್ಧಿ-ಯಿಲ್ಲ. ಹಾಗೆಯೇ 'ಬಾಯಿಯುಂಟು, ಕಣ್ಣು ಇಲ್ಲ.' ವಾಚಾಳಿತನ, ವಾಗಾಡಂಬರಗಳು ಅಧಿಕವಾಗಿವೆ, ಆದರೆ ಸಮ್ಯಗ್‌ಜ್ಞಾನದೃಷ್ಟಿಯು ಅಭಾವ-ವಿದೆ. ಆತ್ಮಾನಾತ್ಮಗಳ ಬಗೆಗೆ, ಜೀವನದ ರೀತಿ-ನೀತಿಗಳ ಬಗೆಗೆ, ಜೀವನದ ಇತಿ-ಮಿತಿಗಳ ಬಗೆಗೆ, ಅಷ್ಟೇ ಅಲ್ಲ, ಜೀವನದ ಪವಿತ್ರವಾದ ಧ್ಯೇಯ-ಧೋರಣೆಗಳ ಬಗೆಗೆ, ಗೊತ್ತಿನ ಗುರಿಯ ಬಗೆಗೆ ಹಾಗು ಅದರ ಸಾರ್ಥಕತೆ-ಸಫಲತೆಗಳ ಬಗೆಗೆ ಅಸ್ಖಲಿತವಾಗಿ ಅವ್ಯಾಹತವಾಗಿ ಮಾತನಾಡುವ ಚಾಪಲ್ಯವು ನಾಕಷ್ಟಿದೆ. ಈ ವಾಚಾಳಿತನದಿಂದ ಅವನು ಜಗತ್ತನ್ನೇ ಬೆರಗು-ಗೊಳಿಸುತ್ತಾನೆ. ಆದರೆ ಜೀವನದ ಅರಿವು ಅಂಗಕ್ಕೆ ಅಳವಟ್ಟಿಲ್ಲ. ಪ್ರಬಲ ಸಾಧನೆಯ ಹಿನ್ನೆಲೆಯಲ್ಲಿ, ಪ್ರಗಲ್ಭ ಸ್ವಾನುಭಾವದ ಹಿನ್ನೆಲೆಯಾಗಿ ಜೀವನದ ಬಗೆಗೆ ಬೆಳೆದು ಬಂದ ಸರಿಯಾದ ದೃಷ್ಟಿಯಿಲ್ಲ! ಸಮ್ಯಕ್‌ದೃಷ್ಟಿಕೋನವಿಲ್ಲ!! ನಿಷ್ಠಾಗರಿಷ್ಠವಾದ ನಿಜದರಿವಿನಲ್ಲಿ ನಿಲುಕಡೆಯನ್ನೂ ಹೊಂದಿಲ್ಲ!!!

ಆ ಮೃಗಕ್ಕೆ 'ಕೈಯುಂಟು, ಬೆರಳಿಲ್ಲ.' ಜೀವನು ತನ್ನ ಕೈಗಳಿಂದ ಕಾರ್ಯಗಳನ್ನೇನೋ ಮಾಡುತ್ತಾನೆ. ಆದರೆ ಆ ಕಾರ್ಯಗಳಲ್ಲಿ ಒಂದು ಹಿಡಿತ ಇಲ್ಲದಾಗಿದೆ. ಇಲ್ಲಿ 'ಬೆರಳಿಲ್ಲ' ಎಂದರೆ ಹಿಡಿತವಿಲ್ಲ ಎಂದೇ ಅರ್ಥ. ಈಗ ನೀವು ನಿಮ್ಮ ಕೈಯ್ಯ ಚಿತ್ರವನ್ನು ಕಣ್ಣೆದುರು ಚಿತ್ರಿಸಿಕೊಳ್ಳಿರಿ; ಮತ್ತು ಯಾವ-ದೊಂದು ವಸ್ತುವನ್ನು ಕೈಯಿಂದ ಹಿಡಿದು ಎತ್ತುವದಿದೆ ಎಂದು ಭಾವಿಸಿರಿ. ಆಗ ನೀವು ಆ ವಸ್ತುವನ್ನು ಹೇಗೆ ಎತ್ತುವಿರಿ? ಇದರ ಸಂಪೂರ್ಣ ಚಿತ್ರವು ನಿಮ್ಮ ಮನಶ್ಚಕ್ಷುವಿನ ಮುಂದೆ ಸರಿಯಾಗಿ ನಿಂತಿರುವದೆ? ಸರಿ; ಅದೇ ಪ್ರಕಾರ, ಬೆರಳುಗಳಿಲ್ಲದ ಒಂದು ಕೈಯ್ಯ ಚಿತ್ರವನ್ನು ನಿಮ್ಮ ಕಣ್ಣೆದುರು ತಂದುಕೊಳ್ಳಿರಿ. ಹಾಗು ತಂಬಿಗೆಯೊಂದನ್ನು ಅದೇ ಕೈಯಿಂದ ಮೇಲಕೆತ್ತುವ-ದಿದೆ ಎಂದು ತಿಳಿಯಿರಿ. ಈಗ ಆ ತಂಬಿಗೆಯನ್ನು ಎತ್ತಬಲ್ಲಿರಾ? ಸರ್ವಥಾ ಎತ್ತಲಾರಿರಿ! ಅದೇಕೆ? ನೀವು ಸರಿಯಾಗಿ ಕಲ್ಪನೆ ಮಾಡಿಕೊಂಡಿದ್ದರೆ ಅದರ ಕಾರಣವನ್ನು ಹುಡುಕಲು ದೂರದ ವರೆಗೆ ಹೋಗಬೇಕಿಲ್ಲ. ಹಿಡಿಯಲಿಕ್ಕೆ ಅಥವಾ ಹಿಡಿದೆತ್ತಲಿಕ್ಕೆ ನೆರವಾಗುವ ಬೆರಳುಗಳೇ ಈಗ ಇಲ್ಲದಾಗಿವೆ. ಬೆರಳು-

ಗಳಿಂದಲೇ ಯಾವದೊಂದು ವಸ್ತುವನ್ನು ಹಿಡಿದು ಎತ್ತಲಿಕ್ಕೆ ಅಥವಾ ಯಾವ-ದೊಂದು ಕೆಲಸವನ್ನು ಮಾಡಲಿಕ್ಕೆ ಸಾಧ್ಯವಿದೆ. ಬೆರಳುಗಳಿಲ್ಲದಿದ್ದರೆ ಹಾಗೆ ಮಾಡಲು ಸಾಧ್ಯವೇ ಇಲ್ಲ. ಆದುದರಿಂದ 'ಬೆರಳು' ಎಂಬುದು ಸರಿಯಾದ ಹಿಡಿತವನ್ನು ನಿರ್ದೇಶಿಸುತ್ತದೆ. ಮಾನವನು ಈ ಲೋಕದಲ್ಲಿ ಹುಟ್ಟಿ ಬಂದ ಮೇಲೆ ತನ್ನ ಶಕ್ತಿಗನುಸಾರವಾಗಿ ಕೇವಲ ಕಾರ್ಯಗಳನ್ನೆಸಗಿಬಿಟ್ಟರೆ ಮಾತ್ರ ತೀರಲಿಲ್ಲ. ಹಾಗೆ ಸಿಕ್ಕಾಬಟ್ಟೆಯಾಗಿ ಕರ್ಮಗಳನ್ನು ಮಾಡುತ್ತಿದ್ದರೆ ಕರ್ಮ-ಬಂಧನವು ತಪ್ಪಿದ್ದಲ್ಲ, ಅದು ಕಟ್ಟಿಟ್ಟ ಬುತ್ತಿಯಾಗಿದೆ. ಒಂದು ಹಿಡಿತದಿಂದ, ಒಂದು ಹಂಚಿಕೆಯಿಂದ ಕರ್ಮಗಳನ್ನೆಸಗಬೇಕು. ಹೀಗೆ ಮಾಡಿದರೆ ಮಾತ್ರ ಕರ್ಮಲೇಪನವಿಲ್ಲ, ಕರ್ಮಬಂಧನವಿಲ್ಲ. 'ಯೋಗಃ ಕರ್ಮಸು ಕೌಶಲಮ್' ಎಂಬುದರ ರಹಸ್ಯವಾದರೂ ಇದುವೆ. ಸಾಮ್ಯಬುದ್ಧಿಯನ್ನಿಟ್ಟುಕೊಂಡು ಕಾಮ್ಯ-ಬುದ್ಧಿಯನ್ನು ಬದಿಗೆ ಸರಿಸಿ ಕರ್ಮಗಳನ್ನೆಸಗಿದರೆ, ಹಿಡಿತದಿಂದ ಇಲ್ಲವೆ ಹಂಚಿಕೆಯಿಂದ ಕರ್ಮಗಳನ್ನು ಮಾಡಿದರೆ ಅದರಿಂದ ನಮಗೆ ಕರ್ಮಬಂಧನವಾಗದು. ಇದೇ ಅರ್ಥದಲ್ಲಿ ಬಸವಣ್ಣನವರು ತಮ್ಮದೊಂದು ವಚನದಲ್ಲಿ ಹೀಗೆ ಹೇಳುತ್ತಾರೆ :

> ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ ;
> ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ !
> ಮಾಡುವ, ನೀಡುವ ನಿಜಗುಣವುಳ್ಳಡೆ, ಕೂಡಿಕೊಂಡಿಪ್ಪ,
> ನಮ್ಮ ಕೂಡಲ ಸಂಗಮದೇವ !!

ನಮ್ಮಲ್ಲಿ ಈ ರೀತಿಯಾಗಿ 'ಮಾಡುವ, ನೀಡುವ ನಿಜಗುಣ'ವು ಅಥವಾ ಕಾರ್ಯಕುಶಲತೆಯು ಇದ್ದುದಾದರೆ ನಾವು ಮಾಡಿದ ಕಾರ್ಯಗಳು ಕೂಡಲ-ಸಂಗಮದೇವನಿಗೆ ಸಲ್ಲುವವು, ಸಾರ್ಥಕವಾಗುವವು.

ಆ ಪಶುವಿಗೆ 'ಕಾಲುಂಟು, ಹೆಜ್ಜೆಯಿಲ್ಲ.' ಜೀವನು ನಡೆಯುತ್ತಾನೇನೋ ನಿಜ; ಆದರೆ ಆ ನಡೆಯು ಪರಿಣಾಮಕಾರಿಯಾಗಿಲ್ಲ, ಯಾಕೆಂದರೆ 'ಹೆಜ್ಜೆಯಿಲ್ಲ!' ಇಲ್ಲಿ 'ಹೆಜ್ಜೆ' ಎಂಬ ಪದಕ್ಕೆ ಪರಿಣಾಮವೆಂದರ್ಥ. ಕಾಲುಗಳಿಂದ ನಡೆದುದರ ಪರಿಣಾಮವೇನು ? ನೆಲದ ಮೇಲೆ ಮೂಡುವ ಹೆಜ್ಜೆಗಳೇ ಹಾಗೆ ನಡೆದುದರ ಪರಿಣಾಮ. ಹಾಗೆಯೇ ಮಾನವನು ತನ್ನ ಜೀವನವನ್ನು ನಡೆಸುತ್ತಾನೆ.

ಆ ಜೀವನವನ್ನು ನಡೆಸುವದರಿಂದ ಒಂದು ಫಲ, ಒಂದು ಪರಿಣಾಮ ಅವನ ಜೀವನದಲ್ಲಿ ತೋರಿ ಬರಬೇಡವೆ ? ಆದರೆ ಎಲ್ಲಿಯ ವರೆಗೆ ಮಾನವ ಜೀವನದಲ್ಲಿ ನಿಶ್ಚಿತವಾದ ಒಂದು ನಿಲುಮೆಯಿಂದ ಕೂಡಿಕೊಂಡ ಗೊತ್ತಿನ ಗುರಿಯಿಲ್ಲವೊ ಅಲ್ಲಿಯ ವರೆಗೆ ಅವನ ಜೀವನವು ನಿರರ್ಥಕವಾದ ರೀತಿಯಲ್ಲಿ ಕಳೆದುಹೋಗುತ್ತದೆ. ಇಂಥ ಜೀವನದಿಂದ ವ್ಯರ್ಥವಾದ ಆಯಾಸ ವ್ಯರ್ಥವಾದ ಶ್ರಮಗಳಾಗುವವಲ್ಲದೆ ತನ್ನ ವ್ಯಕ್ತಿತ್ವಕ್ಕಾಗಲಿ, ತನ್ನ ಸುತ್ತಿರುವ ವಿಶ್ವಕ್ಕಾಗಲಿ ಏನೂ ಪ್ರಯೋಜನವಾಗುವದಿಲ್ಲ.

ಅಳೆವುತ್ತ ಅಳೆವುತ್ತ ಬಳಲುವರಲ್ಲದೆ ಕೊಳಗ ಬಳಲುವದೆ ?
ನಡೆವುತ್ತ ನಡೆವುತ್ತ ಬಳಲುವರಲ್ಲದೆ ಬಟ್ಟೆ ಬಳಲುವದೆ ?

ಎಂದು ಮುಂತಾಗಿ ಬಸವಣ್ಣನವರ ವಚನಗಳಲ್ಲಿ ಬರುವ ಮಾತುಗಳು ವ್ಯರ್ಥಶ್ರಮಕ್ಕೆ ಬೆಲೆಯಿಲ್ಲವೆಂದೇ ಹೇಳುತ್ತವೆ. ಆದುದರಿಂದ ಪ್ರತಿಯೊಬ್ಬ ಮಾನವನು ತನ್ನ ಜೀವನದ ಪ್ರವಾಹವು ಒಂದು ನಿಶ್ಚಿತವಾದ ಗುರಿಯನ್ನುದ್ದೇಶಿಸಿ ಹರಿಯುತ್ತಿರುವಂತೆ ನೋಡಿಕೊಳ್ಳಬೇಕು.

ಆ ವ್ಯಗಕ್ಕೆ 'ಒಡಲುಂಟು, ಪ್ರಾಣವಿಲ್ಲ.' ಜೀವನಿಗೆ ಸಂಗ್ರಹ ಬುದ್ಧಿಯಿದೆ; ಆದರೆ ಅದೇ ವಿತರಣಜ್ಞಾನವಿಲ್ಲ. ಒಡಲು ಸ್ವಾರ್ಥಪರವಾದ ಸಂಗ್ರಹ ಮನೋವೃತ್ತಿಯನ್ನು ನಿರ್ದೇಶಿಸಿದರೆ, ಪ್ರಾಣವು ವಿತರಣೆ ಇಲ್ಲವೆ ಹಂಚುವಿಕೆಯ ಗುಣ ವಿಶೇಷವನ್ನು ಸೂಚಿಸುತ್ತದೆ. ಪ್ರಾಣವೂ ಒಂದು ವಾಯು ತತ್ವವಾಗಿದೆ. ವಾಯುವು ಯಾವ ಸ್ಥಳವನ್ನೂ ತೆರವಾಗಿ ಬಿಡುವದಿಲ್ಲ. ಅದು ಎಲ್ಲ ಕಡೆಗೂ ಸಮನಾಗಿ ತನ್ನನ್ನು ತಾನೇ ಹಂಚುತ್ತದೆ. ಇದು ವಾಯುವಿನ ಸಹಜ ಗುಣವಾಗಿದೆ. ಮಾನವನು ತನ್ನ ನಿತ್ಯ ಜೀವನವಲ್ಲಿ ಸಂಕುಚಿತವಾದ ಹಾಗು ಸ್ವಾರ್ಥಪರತೆಯಿಂದ ಕೂಡಿದ ಸಂಗ್ರಹ ಮನೋವೃತ್ತಿಯಿಂದಾಗಿ ಅದೆಷ್ಟು ಅನ್ಯಾಯದ, ಅನೀತಿಯ ಅಸತ್ಕೃತ್ಯಗಳನ್ನೆಸಗುವದಿಲ್ಲ ? ಇಂದಿನ ಸಮಾಜದ ಶರೀರ ರಚನೆಯಲ್ಲಿ ಶೋಷಣೆಯು ಒಂದು ಎದ್ದುತೋರುವ ರೋಗವಾಗಿದೆ. ಸಾಮಾಜಿಕ ವಿಷಮತೆಯು ವಿನಾಶ ಹೊಂದಿ ಸಮಾಜದಲ್ಲಿ ಆರ್ಥಿಕ ಸಮತೆಯು ಸಂಸ್ಥಾಪಿತವಾದ ಹೊರತು ಜೀವನದ ಭವಿಷ್ಯವು ಪ್ರಕಾಶಮಯ ವಾಗದು. ಇಂದು ಮಾನವನಲ್ಲಿ ವಿತರಣ ಗುಣವು ಬೆಳೆದುಬರಬೇಕಾಗಿದೆ.

ಇದುವೇ ಲೋಕಕಲ್ಯಾಣದ ನಿಜವಾದ ಮಾರ್ಗವಾಗಿದೆ. ಕೊಟ್ಟದ್ದು ತನಗೆ, ಕೂಡಿಟ್ಟದ್ದು ಪರರಿಗೆ. ಇದುದರಿಂದ ಕೊಡು; ಮುಕ್ತ ಮನಸ್ಸಿನಿಂದ ಕೊಡು; ಕೂಡಿಡಬೇಡ, ಎಂದೆಂದೂ ಕೂಡಿಡಬೇಡ.

ಮೇಲಿನ ವಚನಾರ್ಧಭಾಗದ ವಿವರವಾದ ವಿವೇಚನೆಯಲ್ಲಿ ಜೀವಾತ್ಮನ ಅತ್ಯಂತ ಸುಂದರವಾದ ವರ್ಣನೆಯು ಮೂಡಿಬಂದಿರುವುದನ್ನು ನಾವು ಮನ-ಗಾಣಬಹುದು. ಜೀವಾತ್ಮನು ತಾನು ಈಗಿದ್ದ ಸ್ಥಿತಿಯಲ್ಲಿಯೇ ಇದ್ದುಕೊಂಡು ಜೀವನವನ್ನು ಸಾಗಿಸುತ್ತಿದ್ದರೆ ಜ್ಞಾನದ ದೃಷ್ಟಿಯಿಂದ ಅವನಿಗೆ ಜೀವನವೇ ಇಲ್ಲ. ಇನ್ನುಳಿದ ಪಶು–ಪಕ್ಷಿ ಮುಂತಾದ ಜೀವಿಗಳಂತೆ ಅವನೂ ಹುಟ್ಟಿ, ಸತ್ತು, ಕೆಟ್ಟು ಹೋಗುತ್ತಾನೆ. ಆದರೆ ಸುಕೃತ ಬಲದಿಂದಲೋ ಇಲ್ಲವೆ ಪೂರ್ವಪುಣ್ಯದ ಪ್ರಭಾವದಿಂದಲೋ ಅಥವಾ ಸದ್ಗುರುವಿನ ಕರುಣಾಕಟಾಕ್ಷದಿಂದಲೋ ಒಮ್ಮೆ ಈ ಜೀವಾತ್ಮನಿಗೆ ತನ್ನ ಹೀನ–ದೀನ ಸ್ಥಿತಿಯನ್ನು, ಭೀಭತ್ಸಮಯ ಹಾಗು ಹೀನಾಯವಾದ ಗತಿಯನ್ನು ಕಂಡು ಭಯವೋ, ಹೇಯವೋ ಎನಿಸಿದಾಗ ಅವನ ದೃಷ್ಟಿಯು ಒಳಗಡೆ ತಿರುಗುತ್ತದೆ. ಇಂಥದೊಂದು ನಿಕೃಷ್ಟಾವಸ್ಥೆಯಿಂದ ಮೇಲೆದ್ದು ತನ್ನ ನಿಜಾವಸ್ಥೆಯ ಅರಿವು ಉದಯವಾಗ ತೊಡಗುತ್ತದೆ. ಆ ಮೇಲೆ ಆತ್ಮೋದ್ಧಾರದ ಸಾಧನೆಗೆ ಮನಸ್ಸು ಆತುರಗೊಳ್ಳುತ್ತದೆ. ಹೀಗೆಯೇ ಕೆಲವು ಕಾಲದವರೆಗೆ ಸಾಗಿರಲು ಅವನಲ್ಲಿ ಚಿಚ್ಛಕ್ತಿಯು ಜಾಗ್ರತವಾಗುತ್ತದೆ. ಮೇಲಿನ ವಚನದ ಮಧ್ಯಭಾಗದ ಸುಮಾರಿಗೆ ಬರುವ 'ಆಗ ಎನ್ನ ತಾಯಿ ಬಂದು ಎತ್ತಿ ಕುಳ್ಳಿರಿಸಿ ಚಿತ್ತಮೂಲಾಗ್ನಿಯ ಒತ್ತಿ ಉರಹಿದಡೆ ಎಲ್ಲವು ಸುಟ್ಟು ಬಟ್ಟಬಯಲಾದವು.' —ಎಂಬ ಮಾತಿನಲ್ಲಿ, ಈ ಒಂದು ಸಂಧಿಕಾಲದೊಳಗೆ ಜೀವಾತ್ಮನಲ್ಲಿ ತೋರುವ ಅಥವಾ ಉದಯವಾಗುವ ಇಲ್ಲವೆ ಜಾಗೃತವಾಗುವ ಚಿಚ್ಛಕ್ತಿಯ ಪ್ರಭಾವವೇ ವ್ಯಕ್ತವಾಗುತ್ತದೆ. ಇಲ್ಲಿ 'ಹೆತ್ತ ತಾಯಿ' ಪದವು ಜಾಗೃತವಾಗಿರುವ ಚಿಚ್ಛಕ್ತಿಯನ್ನು ಉದ್ದೇಶಿಸಿದೆ. ಇದೇ ಮಾತನ್ನು ಅಲ್ಲಮಪ್ರಭುವು ಒಂದೆಡೆಗೆ ಇಂತು ಹೇಳುತ್ತಾರೆ·

ಹೃದಯದಲ್ಲಿ ಹುದುಗಿದಗ್ನಿಯ ತೆಗೆದು ಮುದ್ದಾಡಿ
ಧ್ವನಿಯ ಧರ್ಮವ ನುಂಗಿ, ಮನದ ಬಣ್ಣಗಳಡಗಿ
ಹೆತ್ತ ತಾಯಿ ಮಗನ ನುಂಗಿ, ಶಿಶು ತಾಯ ಬೆಸಲಾಗಿ
ಗುಹೇಶ್ವರನೆಂಬ ನಿಲವು ಅಂಗೈಯ್ಯ ಮಾಲೆ ನುಂಗಿತ್ತು."

ಹೃದಯದಲ್ಲಿ ಹುದುಗಿಕೊಂಡಿದ್ದ ಅಥವಾ ಅಡಗಿಕೊಂಡಿದ್ದ ಜ್ಞಾನಾಗ್ನಿಯು ಜಾಗೃತವಾಗುತ್ತದೆ. ಆಗ ನಮಗೆ ಜ್ಞಾನೋದಯವಾಗಿ ಸುತ್ತಲು ಜ್ಞಾನಪ್ರಕಾಶದ ಪ್ರಭೆಯು ಪಸರಿಸುತ್ತದೆ. ಆ ಸುಜ್ಞಾನವೊಡನೆ ಚಿತ್‌ಶಕ್ತಿಯು ಬೆರೆತು ಬೇರಿಲ್ಲದಂತೆ ಅಡಗಲು ಆಗ ನಿಜದರಿವಿನ ನಿಲವು ನಮ್ಮ ಅಂಗೈಯ ನೆಲ್ಲಿಯಂತಾಗುತ್ತದೆ. ಧ್ವನಿಯ ಧರ್ಮವು ಅಡಗುತ್ತದೆ, ಸಕಲ ವ್ಯವಹಾರವು ನಿಲ್ಲುತ್ತದೆ, ಶಬ್ದಮುಗ್ಧ ಸ್ಥಿತಿಯು ಪ್ರಾಪ್ತವಾಗುತ್ತದೆ. ಕುಂಡಲೀನಿ ಶಕ್ತಿಯು ಜಾಗೃತವಾಗಿ ಸಹಸ್ರಾರವನ್ನು ಸೇರಲು ಹಸಿವು-ತೃಷೆ, ಮಲ-ಮೂತ್ರ, ಜಾಗರ-ನಿದ್ರೆ, ಹರ್ಷ-ಶೋಕ ಈ ಮುಂತಾದ ದೇಹಧರ್ಮವೆಲ್ಲವೂ ಮಾಯವಾಗುತ್ತದೆ, ಪ್ರಕೃತಿಯ ದೋಷಗಳೆಲ್ಲವೂ ಬಟ್ಟಬಯಲಾಗುತ್ತವೆ. ಹೀಗೆ ಕುಂಡಲಿಯು ಜಾಗ್ರತವಾಗಿ ಆಧಾರದಿಂದ ಆಜ್ಞಾಚಕ್ರದ ವರೆಗಿನ ಚಕ್ರಗಳನ್ನು ಭೇದಿಸಿ ಸಹಸ್ರಾರದಲ್ಲಿ ಸೇರಿ ನಿಲುಕಡೆಯನ್ನು ಹೊಂದಿದಾಗ ಅನ್ಯಥಾ ಅಥವಾ ಅಪರಾಪ್ರಕೃತಿಯ ದಟ್ಟವಾದ ಅಂಧಕಾರವು ಅಳಿದು ಪರಾಕೃತಿಯ ಪ್ರಕಾಶವು ತೊಟ್ಟನೆ ತೊಳಗಿ ಬೆಳಗ ತೊಡಗುತ್ತದೆ.

ಆ ಪ್ರಕಾಶದ ಬೆಳಗಿನಲ್ಲಿ ನಾನು ‘ಮತ್ತೊಂದು ಮೃಗವ ಕಂಡೆ’ ಎಂದರೆ ಅಂತರಾತ್ಮನನ್ನು ನೋಡಿದೆನೆಂದು ಅರ್ಥ. ಹಾಗಾದರೆ ಈ ಅಂತರಾತ್ಮನ ಅವಸ್ಥೆಯದು ಎಂತಹದು ? ಅದು ಜೀವಾತ್ಮನಿದ್ದ ಸ್ಥಿತಿ-ಗತಿಗಳಿಗಿಂತ ತೀರ ಭಿನ್ನವಾದುದು. ನಾವು ವಚನದ ಪೂರ್ವಾರ್ಧ ಭಾಗದಲ್ಲಿ ಜೀವಾತ್ಮನ ಅವಸ್ಥೆಯ ಬೆಡಗನ್ನು ಅನುಭವಿಸಿದಂತೆ, ಅದರ ಉತ್ತರಾರ್ಧದಲ್ಲಿ ಅಂತರಾತ್ಮನ ಸುಂದರವಾದ ರಹಸ್ಯವನ್ನು ಕಾಣಬಹುದಾಗಿದೆ. ‘ಅದಕೆ ತಲೆಯುಂಟು, ಕೊಂಬಿಲ್ಲ........ಒಡಲಿಲ್ಲ.’ ಅಂತರಾತ್ಮನಲ್ಲಿ ಸುಜ್ಞಾನವಿದೆ, ಸುವಿವೇಕವಿದೆ, ಸಾರಾಸಾರ ವಿಚಾರವಿದೆ. ಆದರೆ ಅಹಂಕಾರ–ಮಮಕಾರಗಳೆಂಬ ಎರಡು ಕೋಡುಗಳಿಲ್ಲ. ಸಮ್ಯಕ್‌ದೃಷ್ಟಿಯಿದೆ, ವಾಗಾಡಂಬರ–ವಾಚಾಳಿತನಗಳಿಲ್ಲ. ಮಾಟವಿದ್ದರೂ ಅದರ ಸೋಂಕು ಇಲ್ಲ. ಪರಿಶುದ್ಧವಾದ ಪರಿಣಾಮಕಾರಿಯಾದ ಆಚರಣೆಯುಂಟು, ಶುಷ್ಕವಾದ ನಿರರ್ಥಕವಾದ ನಡೆಯಿಲ್ಲ. ಕೊಡುವ ಜ್ಞಾನವುಂಟು, ಕೂಡಿಡುವ ಕುಬುದ್ಧಿಯಿಲ್ಲ. ಸರ್ವತ್ರ ಸರ್ವದಾ ಸರ್ವಥಾ ಸಮದೃಷ್ಟಿಯೇ ವಿರಾಜಿಸುತ್ತದೆ, ವಿಜೃಂಭಿಸುತ್ತದೆ. ಇಂಥ ಅಂತರಾತ್ಮನನ್ನು ಅರಿದು ಅಪ್ಪಿಕೊಳ್ಳ ಹೋದರೆ ಜೀವಾತ್ಮನೇ ಅಂತರಾತ್ಮನಾಗಿ ಕಾಣುವನು. ಆಹಾ! ಜೀವಾತ್ಮನೇ ಅಂತರಾತ್ಮನಾಗಿರುವನಲ್ಲ! ಎಂದು ಆಶ್ಚರ್ಯದಿಂದ, ವಿಸ್ಮಿತವಾದ

ನೇತ್ರಗಳಿಂದ ನೋಡು ನೋಡುವಷ್ಟರಲ್ಲಿಯೇ ಆ ಅಂತರಾತ್ಮನು ಪರಮಾತ್ಮ-ನಲ್ಲಿ ಒಡವೆರೆದು ಒಂದಾಗುವನು. ಒಂದೇ ಒಂದು ವಚನದಲ್ಲಿ ಇದೆಲ್ಲ ಅನು-ಭಾವದ ಬೆಡಗು ಎಷ್ಟು ಸುಂದರವಾಗಿ ಮಾರ್ಮಿಕವಾಗಿ ಮೂಡಿ ಬಂದಿದೆ! ಜೀವಾತ್ಮ ಅಂತರಾತ್ಮ ಪರಮಾತ್ಮರ ಈ ಸೂಕ್ಷ್ಮವಾದ ಅರಿವು ಅಥವಾ ಪರಿಜ್ಞಾನವು ಸಾಧಕನ ಸಾಧನ ಕ್ರಮದಲ್ಲಿ ಅತ್ಯಂತ ಮಹತ್ವವಾದುದು. ಆದುದರಿಂದ ಸೂಕ್ಷ್ಮಗ್ರಾಹಿಯಾದ ಸಾಧಕನು ಈ ಅನುಭಾವದ ಬೆಡಗನ್ನು ತನ್ನ ಅಧ್ಯಾತ್ಮ ಜೀವನದಲ್ಲಿ ಅಳವಡಿಸಿಕೊಂಡು ಅದರಿಂದಾಗುವ ಆನಂದವನ್ನು ಆಸ್ವಾದಿಸಲಿ; ತನ್ನ ಸಾಧ್ಯವನ್ನು ಸೇರಲಿ ಹಾಗು ತನ್ನ ಸಾಧನದ ಸಾಫಲ್ಯ-ವನ್ನನುಭವಿಸಲಿ !

---

# ಧರ್ಮಚಕ್ರ

'ಧರ್ಮಚಕ್ರ' ಎಂಬ ಪದದಲ್ಲಿ ಎರಡು ಶಬ್ದಗಳಿವೆ. 'ಧರ್ಮ' ಎಂಬುದೊಂದು, ಹಾಗು 'ಚಕ್ರ' ಎಂಬುದು ಇನ್ನೊಂದು. ಅವರಲ್ಲಿ ಮೊದಲನೆಯದಾದ 'ಧರ್ಮ' ಎಂಬ ಪದವನ್ನು ಕುರಿತು ನಾವು ಆಲೋಚಿಸಿದಾಗ 'ಧರ್ಮವೆಂದರೇನು?' ಎಂಬುದೇ ಮೊದಲನೆಯದಾಗಿ ನಮ್ಮ ಎದುರು ಬಂದು ನಿಲ್ಲುವ ಪ್ರಶ್ನೆ ಆಗಿದೆ. ಅದಕ್ಕೆ ಉತ್ತರವನ್ನು ಕಂಡು ಮುಂದೆ ಸಾಗುವದೂ ಸಹ ನಮ್ಮ ಧರ್ಮವಾಗಿದೆ! ಸರಿ, ಹಾಗಾದರೆ ಧರ್ಮವೆಂದರೇನು?

ಭಾರತೀಯ ದರ್ಶನದಲ್ಲಿ ಧರ್ಮ, ಕರ್ಮ, ಯೋಗ ಇತ್ಯಾದಿಗಳು ಎರಡೇ ಎರಡು ಅಕ್ಷರಗಳನ್ನೊಳಗೊಂಡ ಕಿರಿಯ ಪದಗಳಾದರೂ ಹಿರಿದಾದ ಅರ್ಥವನ್ನು ಗರ್ಭೀಕರಿಸಿಗೊಂಡಿವೆ. 'ಧರ್ಮ' ಪದದೊಡನೆ ಕುಲಧರ್ಮ, ಜಾತಿಧರ್ಮ, ಮಿತ್ರಧರ್ಮ, ಪತಿಧರ್ಮ, ಸತಿಧರ್ಮ, ರಾಜಧರ್ಮ, ಗೃಹಸ್ಥಧರ್ಮ, ಸನ್ಯಾಸಧರ್ಮ— ಹೀಗೆ ಹಲವಾರು ಶಬ್ದಗಳು ನಮ್ಮ ಕಣ್ಮುಂದೆ ಬಂದು ನಿಲ್ಲುತ್ತವೆ. ಆದರೆ ಧರ್ಮವು ಈ ಶಬ್ದಪ್ರಯೋಗಗಳಿಗಷ್ಟೇ ಪರಿಮಿತವಾಗಿಲ್ಲ. ಸಾಮಾನ್ಯವಾಗಿ ಧರ್ಮದ ವ್ಯಾಖ್ಯೆಯನ್ನು 'ಧಾರಣಾತ್ ಧರ್ಮಮಿತ್ಯಾಹುಃ।' ಎಂದು ಹೇಳಲಾಗುತ್ತದೆ. ಧಾರಣೆ ಮಾಡುವದರಿಂದ ಧರ್ಮವೆನಿಸುವದು. ವ್ಯಕ್ತಿಯ ಹಾಗು ಸಮಾಜದ, ವ್ಯಷ್ಟಿಯ ಹಾಗು ಸಮಷ್ಟಿಯ ಧಾರಣೆಯೇ ಧರ್ಮವಾಗಿದೆ. ವ್ಯಕ್ತಿ–ಸಮಾಜಗಳ ಮಧುರ ಬಾಂಧವ್ಯಕ್ಕೆ ಭಂಗಬಾರದ ರೀತಿಯಲ್ಲಿ ವ್ಯಕ್ತಿ–ಸಮಾಜಗಳೆರಡನ್ನೂ ಹೊಂದಿಸಿಕೊಂಡು ಹೋಗುವ ಹದನವೇ ಧರ್ಮ. ಇದನ್ನೇ ನಾವು ಬೇರೆ ಶಬ್ದಗಳಲ್ಲಿ ಹೇಳುವುದಾದರೆ, ವ್ಯಕ್ತಿಯ ಆಂತರಿಕ ಶಕ್ತಿಗಳಲ್ಲಿ ಒಂದು ತರಹದ ಸಮತೆಯನ್ನೂ, ವ್ಯಕ್ತಿ–ವ್ಯಕ್ತಿಗಳ ನಡುವಿನ ಸುಂದರವಾದ ಸಂಬಂಧವನ್ನೂ, ವ್ಯಕ್ತಿ ಹಾಗು ಸಮಾಜಗಳಲ್ಲಿ ಸರಾಗವಾಗಿ ಸಾಗಬಲ್ಲ ಸ್ವಾಸ್ಥ್ಯವನ್ನೂ ಸಾಧಿಸಲಿಕ್ಕೆ ನಮಗೆ ನೆರವು ನೀಡುವ ಒಂದು ಸಾಧನವೇ ಧರ್ಮ ಎಂದು ಎನ್ನಬಹುದು. ಮಾನವನು ಸಾಮಾಜಿಕ ಪ್ರಾಣಿ (Man is a social animal). ಅವನು ಸಮಾಜದ ಒಂದು ಘಟಕವಾಗಿರುವದರಿಂದ ಸಮಾಜಕ್ಕೆ ಹೊಂದಿಕೊಂಡಿರಬೇಕಾಗುವದು. ಪರ್ಯಾಯವಾಗಿ ಇದನ್ನು ಹೀಗೆ ಹೇಳಬಹುದು: ಯಾವ ಕಾರ್ಯವು ಅಥವಾ ಘಟನೆಯು

ಕೊನೆಯಲ್ಲಿ ವ್ಯಕ್ತಿಗೆ ಇಲ್ಲವೆ ಸಮಾಜಕ್ಕೆ ಘಾತುಕವಾಗಿಯೂ, ದುಃಖದಾಯಕ-ವಾಗಿಯೂ ಪರಿಣಮಿಸುವದೋ ಅದು ಅಧರ್ಮ, ಅದು ತ್ಯಾಜ್ಯವಾಗಿರುವದು. ಯಾವದು ಹಿತಕರವಾಗಿಯೂ, ಸುಖಕರವಾಗಿಯೂ ಕೊನೆಗೊಳ್ಳುವದೋ ಅದು ಧರ್ಮ, ಅದು ಕರ್ತವ್ಯವೆನಿಸಿರುವದು. ಮೇಲೆ ಹೇಳಿದ ಈ ಧರ್ಮದ ವ್ಯಾಖ್ಯೆಯಿಂದ ಸಮಾಜದ ಧಾರಣೆಯು ಧರ್ಮದ ಉದ್ದೇಶವಾಗಿದೆ ಎಂಬುದು ಸ್ಪಷ್ಟವಾದ ಮಾತಾಗಿದೆ.

ಧರ್ಮದ ಉದ್ದೇಶವೇನೋ ನಮಗೆ ತಿಳಿಯಿತು. ಆದರೆ ಧರ್ಮಕ್ಕೊಂದು ಉದ್ದೇಶವಿರುವಂತೆಯೇ ಅದಕ್ಕೊಂದು ಉಗಮವೂ ಇರಬೇಕಾಗುವದು. ಹೀಗೆ ಉಗಮವಿರಬೇಕೆಂದು ಒಪ್ಪಿದ ಮೇಲೆ ಅದು ಏತರಲ್ಲಿದೆ ? ಎಂಬುದು ಮುಂದೆ ಉದ್ಭವಿಸುವ ಸಹಜ ಪ್ರಶ್ನೆಯಾಗಿದೆ. 'ಆಚಾರಪ್ರಭವೋ ಧರ್ಮಃ।' ಇದು ಒಂದು ಅತ್ಯಂತ ಮಹತ್ವದ ಮಾತು. ಇದು ಧರ್ಮದ ಉಗಮ-ವೆಲ್ಲಿಂದ ಆಗುತ್ತದೆಂಬ ಮಾತನ್ನು ಸುಬೋಧವಾಗಿ ಸರಸವಾಗಿ ತಿಳಿಸಿಕೊಡು-ತ್ತದೆ. ಈ ಸಂಸ್ಕೃತದ ಮಾತಿನ ಪ್ರಕಾರ ಆಚಾರವೇ ಧರ್ಮಕ್ಕೆ ಉಗಮಸ್ಥಾನವು. ಆಚಾರದಿಂದಲೇ ಧರ್ಮವು ರೂಪಗೊಳ್ಳುವದು. ಆದರೆ ಈ ಆಚಾರವು ಎಂತಹದು ? ಅದರ ಸ್ವಭಾವವೇನು ? ಆಚಾರವು, ಸಾಮಾನ್ಯವಾಗಿ ನೋಡಿ-ದಾಗ, ಇಬ್ಬಗೆಯದಾಗಿದೆ; ಅದು ಸ್ವೈರಾಚಾರವೆಂತಲೂ, ಶಿಷ್ಟಾಚಾರವೆಂತಲೂ ಎರಡು ಪ್ರಕಾರದ್ದಾಗಿದೆ. ಧರ್ಮದ ಉಗಮವು ಈ ಎರಡು ಪ್ರಕಾರದ ಆಚಾರ-ಗಳಲ್ಲಿ ಯಾವುದರಿಂದಾಗುತ್ತದೆ ? ಸ್ವೈರಾಚಾರದಿಂದಲೋ ಅಥವಾ ಶಿಷ್ಟಾಚಾರ-ದಿಂದಲೋ ? ಇದಕ್ಕೆ ಉತ್ತರವನ್ನು ಯಾರಾದರೂ ಹೇಳಬಹುದು. ಅವರೆಲ್ಲರೂ ಹೇಳುವ ಉತ್ತರವು ಒಂದೇ—ಶಿಷ್ಟಾಚಾರದಿಂದ ಧರ್ಮದ ಉಗ-ಮವು ಆಗುವದು ಎಂದು. ಹಾಗಾದರೆ, ಶಿಷ್ಟಾಚಾರವೆಂದರೇನು ? ಸಮಾಜದ ರಚನೆಯು, ಸುವ್ಯವಸ್ಥಿತವಾಗಿರಬೇಕು, ಅದರ ರೀತಿಯು ಸುಸಂಬದ್ಧವಾಗಿರ-ಬೇಕು, ಹಾಗು ಅದರ ನಡೆಯು ನೇರವಾಗಿ ನಿರರ್ಗಳವಾಗಿ ನಿಯಮಬದ್ಧವಾಗಿ ಸಾಗಬೇಕು —ಎನ್ನುವ ಒಂದು ಉದಾತ್ತ ಹಾಗು ಉದಾರ ದೃಷ್ಟಿಯಿಂದ ಹಿರಿಯರು ಇಲ್ಲವೆ ಶಿಷ್ಟರು ಕೆಲವು ಕಟ್ಟುಗಳನ್ನು ಹಾಕುತ್ತ ಬಂದಿದ್ದಾರೆ; ಹಲವು ನಿಟ್ಟುಗಳನ್ನು ನಿರ್ದೇಶಿಸುತ್ತ ಬಂದಿದ್ದಾರೆ. ಹಾಗೆ ಹಿರಿಯರು ಇಲ್ಲವೆ ಶಿಷ್ಟರು ಹಾಕಿಹೋದ ಕಟ್ಟುಗಳೂ, ತೋರಿಸಿ ಕೊಟ್ಟ ನಿಟ್ಟುಗಳೂ ಸಮಾಜಕ್ಕೆ ಮಾನ್ಯವಾಗುತ್ತ ಬಂದಿವೆ. ಇಂತು ಶಿಷ್ಟರು ಹಾಕಿಕೊಟ್ಟ ಹಾಗು ಸಮಾಜದ

ಮಾನ್ಯತೆಯನ್ನು ಪಡೆದ ಕಟ್ಟು-ನಿಟ್ಟುಗಳೇ ಸಮಾಜ ಜೀವನದ ಬೆನ್ನೆಲಬು-ಗಳಂತಿವೆ. ಮತ್ತು ಅವೇ ಶಿಷ್ಟಾಚಾರವೆಂದು ಕರೆಯಿಸಿಕೊಳ್ಳಲ್ಪಡುತ್ತವೆ. ಹೀಗೆ ಸರ್ವಸಮ್ಮತವಾದ ಶಿಷ್ಟಾಚಾರವೇ ಧರ್ಮದ ಉಗಮ.

ಇಂಥ ಶಿಷ್ಟಾಚಾರಗಳಿಂದಲೇ ಶಾಸ್ತ್ರವು ಹುಟ್ಟುವದು. ಇದರಿಂದ ಧರ್ಮಕ್ಕೆ ನಿಯತ ಆಜ್ಞೆಗಳ ಒಂದು ಸ್ವರೂಪವೂ ಬರುವದು. 'ನೀನು ಹೀಗೆ ಮಾಡು, ನೀನು ಹಾಗೆ ಮಾಡಬೇಡ' ಎಂಬ ವಿಧಿನಿಷೇಧ ವಾಕ್ಯಗಳು ಅಸ್ತಿತ್ವ-ದಲ್ಲಿ ಬಂದವು. ಹೀಗೆ ನೋಡಿದಾಗ ಧರ್ಮವು ವಿಧಿ-ನಿಷೇಧಾತ್ಮಕ ಸ್ವರೂಪ-ವನ್ನು ತಳೆಯುವದು. ಇದನ್ನನುಲಕ್ಷಿಸಿಯೇ 'ಚೋದನಾಲಕ್ಷಣೋ ಧರ್ಮಃ।' ಎಂಬ ಧರ್ಮದ ವ್ಯಾಖ್ಯೆಯು ಹುಟ್ಟಿತು. ಯಾವದು ಆಜ್ಞಾಪಿಸುವದೋ ಅದುವೇ ಧರ್ಮ. ಸಮಾಜಧಾರಣೆಯು ಧರ್ಮದ ಉದ್ದೇಶವೆಂದೂ, ಶಿಷ್ಟಾ-ಚಾರವು ಅದರ ಉಗಮವೆಂದೂ, ಶಾಸನವು ಅಥವಾ ಆಜ್ಞೆಯು ಅದರ ಸ್ವರೂಪ ವೆಂದೂ ನಿರ್ಣಯವಾದರೂ ಧರ್ಮ-ಕರ್ಮಗಳ ಸಂಬಂಧದಿಂದ ಪ್ರಸಂಗವಶಾತ್ ಮನುಷ್ಯನ ಮನಸ್ಸಿನಲ್ಲಿ ಉದ್ಭವವಾಗುವ ಸಂಶಯಗಳನ್ನು ತಪ್ಪಿಸಲಿಕ್ಕೆ ಮಾರ್ಗವಿಲ್ಲ. ಮಾನವನ ಮನಸ್ಸಿನಲ್ಲಿ ಒಮ್ಮೊಮ್ಮೆ ಸತ್ಯ-ಅಸತ್ಯ, ಅಹಿಂಸೆ-ಹಿಂಸೆ, ಹಿತ-ಅಹಿತ ಮುಂತಾದ ಪರಸ್ಪರ ವಿರುದ್ಧ ಸಂಗತಿಗಳ ಬಗೆಗೆ ತಿಕ್ಕಾಟ, ತಾಕಲಾಟಗಳು ತಲೆದೋರುತ್ತವೆ. ಆಗ ಮನುಷ್ಯನು ಶಬ್ದಗಳಿಂದ ಹೇಳಿ ತೀರದ ಅದಾವುದೋ ಒಂದು ತೊಡಕಿನಲ್ಲಿ ತೂರಿ ಹೋಗುತ್ತಾನೆ. ಅವನ ಮೈ-ಮನಗಳೆರಡೂ ದಣ್ಣನೆ ದಣಿದು, ಸೋತು ಹೋಗುತ್ತವೆ. 'ಕಿಂ ಕರೋಮಿ, ಕಂ ಗಚ್ಛಾಮಿ, ಕುತ್ರ ಮೇ ಮಾರ್ಗೋಽಸ್ತಿ।'— ಏನು ಮಾಡಲಿ, ಯಾರನ್ನು ಮೊರೆ ಹೋಗಲಿ, ಎಲ್ಲಿ ನನಗೆ ಮಾರ್ಗವಿದೆ?— ಎಂಬೀ ಹಲವಾರು ಸಮಸ್ಯೆ-ಗಳು ಅವನೆದುರು ಧುತ್ತೆಂದು ಬಂದು ನಿಲ್ಲುತ್ತವೆ. ಕೊನೆಗೆ ಉಪಾಯಗಾಣದೆ ನಿರಾಶೆಯು ಆಶ್ರಯವನ್ನೇ ಹೊಂದುವಷ್ಟು ಮರವಸ್ಥೆಗೆ ಅವನು ಬಂದು ಮುಟ್ಟುತ್ತಾನೆ. ಇಂತಹ ಸಂಶಯಗಳಿಂದ ಪಾರಾಗಲು ಉಪಾಯವೇನಾದರೂ ಉಂಟೆ? ಇಂತಹ ತೊಡಕಿನಿಂದ, ಬಿಕ್ಕಟ್ಟಿನ ಪ್ರಸಂಗಗಳಿಂದ ಪಾರಾಗಲು ಮಾರ್ಗವಾವುದಾದರೂ ಉಂಟೆ? ಹೀಗೆ ಕಿಂಕರ್ತವ್ಯಮೂಢನಾಗಿ ಕೊರಗಿ ಕರಗಿ ಸೊರಗಿ ಸಣ್ಣಾಗುತ್ತಿರುವ ಅವನಿಗೆ ಆಶಾಕಿರಣವು ಕಂಡು ಪುನಃ ಚೇತರಿಸಿಕೊಂಡು ಬಾಳನ್ನು ಬೆಳಕಿನಲ್ಲಿ ಕಳೆಯಬೇಕೆಂದೆನಿಸುವದು. ಯಾವ-ದಾದರೊಂದು ಹಾದಿಯುಂಟೇ? ಎಂದು ಆಕುಲ ಆವೇಶ ಭರಿತನಾದ ಸಾಧಕನು

ಆಗ ಆತುರಗೊಳ್ಳಬಹುದು. ಹೀಗೆ ಆತುರಗೊಳ್ಳುವದು ಸ್ವಾಭಾವಿಕವೇ ಆಗಿದೆ. ಆದರೆ ಇಂತು ಆತುರಗೊಂಡ ಸಾಧಕನಿಗೆ ಕೊನೆಗೆ ನಿರಾಶೆಯ ಆಶ್ರಯವನ್ನು ಪಡೆಯುವದೇನೂ ಅವಶ್ಯವಿಲ್ಲ. ಅವನು ಶಾಂತಚಿತ್ತನಾಗಿ, ಸಾವಧಾನದಿಂದ, ತನ್ನೊಳಗೆ ತಾನು ವಿಚಾರಮಾಡಿದಾಗ ತನ್ನೀ ದುಃಸ್ಥಿತಿಯಿಂದ ಪಾರಾಗಲಿಕ್ಕೆ ಅತ್ಯಂತ ಸುಲಭವಾದ ಮಾರ್ಗವುಂಟು.

ಸತಾಂ ಹಿ ಸಂದೇಹ ಪದೇಷು ವಸ್ತುಷು
ಪ್ರಮಾಣಮಂತಃಕರಣಪ್ರವೃತ್ತಯಃ ।

ಇದರಿಂದ ಆ ಮಾರ್ಗವನ್ನು ಹುಡುಕಲು ಅವನೇನೂ ಬಹು ದೂರ ಹೋಗಬೇಕಿಲ್ಲ. ಮಾನವನ ಮನಸ್ಸಿಗೆ ಸಂದೇಹವು ಆವರಿಸಿದ ಸಮಯದಲ್ಲಿ ನಿರ್ಮಲಾಂತಃಕರಣದ ಪ್ರವೃತ್ತಿಯೇ ಪ್ರಮಾಣವಾಗಿರುವುದರಿಂದ ನಿರ್ಮಲವಾದ ಇಲ್ಲವೆ ವಿಶುದ್ಧವಾದ ಅಂತಃಕರಣವು ದಾರೀದೀವವಾಗುವದು. ಇಂತಹ ವಿಶುದ್ಧವಾದ ಅಂತಃಕರಣವು ಸಾಧುಸಜ್ಜನರ ನಂತರ ಸತ್ಪುರುಷರ ಸೊತ್ತಾಗಿದೆ. ಅವರ ಅಂತಃಕರಣದ ಪ್ರವೃತ್ತಿಗಳೇ ಸಂಶಯಕ್ಕಾಸ್ಪದ ವಸ್ತುಗಳಿದ್ದೆಡೆಯಲ್ಲೆಲ್ಲವೂ ಪ್ರಮಾಣೀಭೂತವಾಗಿವೆ. ಅದಕ್ಕಾಗಿ ಅಂಥವರ ನೆರವನ್ನು ಕೋರಬೇಕಾಗುತ್ತದೆ. ಇದನ್ನೇ ಮಹಾಭಾರತದಲ್ಲಿ ಹೀಗೆ ಹೇಳಲಾಗಿದೆ :

ತರ್ಕಃ ಪ್ರತಿಷ್ಠಃ ಶ್ರುತಯೋ ವಿಭಿನ್ನಾ
ನೈಕೋ ಋಷಿರ್ಯಸ್ಯ ವಚಃ ಪ್ರಮಾಣಮ್ ।
ಧರ್ಮಸ್ಯ ತತ್ವಂ ನಿಹಿತಂ ಗುಹಾಯಾಂ
ಮಹಾಜನೋ ಯೇನ ಗತಃ ಸಃ ಪಂಥಾ ॥ ”

‘ತರ್ಕವು ನೆಲೆಯಿಲ್ಲದುದಾಗಿದೆ, ಶ್ರುತಿಗಳೂ ಭಿನ್ನಭಿನ್ನವಾಗಿಯೇ ಬೋಧಿಸುತ್ತವೆ, ಯಾವನಾದರೊಬ್ಬನ ಮಾತುಗಳು ಪ್ರಮಾಣವೆಂದು ನಂಬಿ ನಡೆಯಬೇಕೆಂದರೆ ಅಂಥ ಒಬ್ಬನಾದರೂ ಋಷಿಯಿಲ್ಲ. ಹೀಗೆ ಧರ್ಮದ ತತ್ವವು ಕತ್ತಲೆ ವ್ಯಾಪಿಸಿದ ಗವಿಯಲ್ಲಿಟ್ಟ ನಿಧಿಯಂತೆ ನಿಲುಕಲಾರದುದಾಗಿದೆ. ಆದುದರಿಂದ ಅಂದಿನ ಮಹಾಂತರು ಯಾವ ಹಾದಿಯಿಂದ, ಯಾವ ರೀತಿಯಿಂದ ನಡೆದು ಹೋಗಿದ್ದಾರೋ ಅರ್ಥಾತ್ ತಮ್ಮ ಜೀವನವನ್ನು ಸಾಗಿಸಿದ್ದಾರೋ ಅದೊಂದೇ ನಿಜವಾದ, ನಂಬಲರ್ಹವಾದ ಮಾರ್ಗವಾಗಿದೆ, ಪಂಥವಾಗಿದೆ.’

ಈ ಶ್ಲೋಕದಿಂದ ಧರ್ಮದ ತತ್ವವು ಗೂಢವಾಗಿದೆ. ಹೀಗೆ ಗೂಢವಾದ ಧರ್ಮ ತತ್ವವು ಮಹಾತ್ಮರ ಆಚರಣೆಯಲ್ಲಿ ರೂಢವಾಗಿದೆ. ಗೂಢವಾದುದು ರೂಢ-ವಾದಾಗ ಮೂಢನಿಗೂ ಕೂಡ ಅದು ಸುಲಿದ ಬಾಳೆಯ ಹಣ್ಣಿನಂದದಿ ಸುಲಭವಾಗುವದು ಎಂದು ಸ್ಪಷ್ಟವಾಗುತ್ತದೆ. ಅಂದ ಮೇಲೆ ನಿಜವಾ-ಗಿಯೂ ಮಹಾಂತರಾರು? ಎಂಬುದನ್ನು ತಿಳಿದುಕೊಳ್ಳುವದು ಕ್ರಮಪ್ರಾಪ್ತ-ವಾದುದಲ್ಲವೆ?

'ಮಹತ್' ಶಬ್ದಕ್ಕೆ ಬುದ್ಧಿಯೆಂಬ ಅರ್ಥವುಂಟು. ಮಹತ್ ಅಥವಾ ಬುದ್ಧಿಯು ಯಾರಲ್ಲಿ ಸರಿಯಾಗಿ, ತರ್ಕಬದ್ಧವಾಗಿ ಕಾರ್ಯಗೈಯುತ್ತಿರುವದೋ ಅವರೇ ಮಹಾಂತರು, ಮಹಾತ್ಮರು. ಕಾಮ್ಯಬುದ್ಧಿಯನ್ನು ಬಿಟ್ಟು ಸಾಮಾನ್ಯ ಬುದ್ಧಿಯಿಂದ ಜೀವನವನ್ನು ಸಾಗಿಸುವಂತಹ ಸತ್ಪುರುಷರೇ ಮಹಾತ್ಮರು. —ಎಂದು ಅದನ್ನು ಇನ್ನೊಂದು ತರಹವಾಗಿ ಹೇಳಬಹುದು. ಈ ಮಹಾಪುರುಷರು ನಿರ್ಮಲಾಂತಃಕರಣವುಳ್ಳವರು. ಈ ಅರಿವಿನ ಮಹಾಂತರು ನಡೆದ ದಾರಿಯೇ ನಮಗೆಲ್ಲರಿಗೂ ನಿಜವಾಗಿಯೂ ತಾರಕವಾದ ಮಾರ್ಗವಾಗಿದೆ.

'ಅಘಟಿತ ಘಟಿತರು, ವಿಪರೀತ ಚರಿತರು,
ಕೂಡಲಸಂಗನ ಶರಣರು ಹೋದ ದಾರಿ ಭಯ ಕಾಣಿರಣ್ಣಾ!'

ಎಂದು ಅಣ್ಣ ಬಸವಣ್ಣನು ನಮ್ಮನ್ನು ಎಚ್ಚರಿಸುತ್ತಾನೆ. ಈ ಎಚ್ಚರಿಕೆಯನ್ನೇ ನಮ್ಮ ಜೀವನಮದಕರಿಗೆ ಒಂದು ಮಹದಂಕುಶವೆಂದು ಇಟ್ಟುಕೊಂಡು ನಾವೆಲ್ಲರು ಮಹಾತ್ಮರ ಮಹಾಮಹಿಮರ ನಡೆಯನ್ನೇ ನಮ್ಮ ನಡೆಯನ್ನಾಗಿ ಮಾಡಿಕೊಳ್ಳಬೇಕು. ಅವರ ಹೆಜ್ಜೆಯಲ್ಲಿಯೇ ಹೆಜ್ಜೆಯನ್ನಿಡುತ್ತ ಜಾಗರೂಕತೆ-ಯಿಂದ ಹಾಗು ಧೈರ್ಯದಿಂದ ಮುಂದೆ ಮುಂದೆ ಸಾಗಬೇಕು.

ಮೇಲಿನ ಮಾತಿನ ವಿವೇಚನೆಯಿಂದ, ಅಂತಃಕರಣ ಪ್ರವೃತ್ತಿ, ಅಂತರ್ವಾಣಿ, ಅಂತಜ್ಞಾನ ಅಥವಾ ಅಂತಃಸ್ಫೂರ್ತಿ— ಇದುವೆ ಧರ್ಮದ ಮೂಲವೆಂದು ವ್ಯಕ್ತವಾಗುವದು. Inner Voice, Intuitive Vision ಎಂದು ಹೇಳಿ ಪಾಶ್ಚಿಮಾತ್ಯರಲ್ಲಿ ಕೆಲವು ತತ್ವಜ್ಞಾನಿಗಳು ಅಥವಾ ತತ್ವವೇತ್ತರು ಈ ಅಂತರ್ವಾಣಿ, ಅಂತಜ್ಞಾನ ಇಲ್ಲವೆ ಅಂತಃಸ್ಫೂರ್ತಿಯು ಧರ್ಮದ ಮೂಲ-ವೆಂಬುದನ್ನು ಒಪ್ಪಿಕೊಂಡಿದ್ದಾರೆ. ಅದುವೇ ನಿಜವಾದ ಧಾರ್ಮಿಕ ಪ್ರವೃತ್ತಿ ಯೆಂದೂ ಕರೆದಿದ್ದಾರೆ. ಅವರೆನ್ನುವದು ಸಾರಾಂಶರೂಪದಲ್ಲಿ ಹೀಗೆ:

The faculty of intuition exists more or less dormant in man and it is the actually religious instinct. Like all other instincts it should be developed, trained and disciplined, so as to enoble man to have a correct, complete and comprehensive vision of man and the universe and of their mutual relation. ಅಂತಃಸ್ಫುರಣ ಶಕ್ತಿಯು ಮಾನವನಲ್ಲಿ ಹೆಚ್ಚುಕಡಿಮೆ ಸುಪ್ತವಾದೊಂದು ರೀತಿಯಲ್ಲಿ ಹುದುಗಿಕೊಂಡಿದೆ. ಇದರಲ್ಲಿ ನಿಜವಾದ ಧಾರ್ಮಿಕ ಪ್ರವೃತಿಯು ಉಗಮವಿದೆ. ವ್ಯಕ್ತಿಯ ಹಾಗು ವಿಶ್ವದ, ಸೃಷ್ಟಿಯ ಹಾಗು ಸಮಷ್ಟಿಯ ಸರಿಯಾದ ಸಂಪೂರ್ಣವಾದ ಮತ್ತು ಸರ್ವವ್ಯಾಪಕವಾದ ಕಲ್ಪನೆಯನ್ನು ಕಾಣಲಿಕ್ಕೆ ಇಲ್ಲವೆ ಅಂತಹ ಜ್ಞಾನವನ್ನು ಆಕಲನ ಮಾಡಲಿಕ್ಕೆ ಮಾನವನಿಗೆ ಸಾಮರ್ಥ್ಯವನ್ನು ತಂದುಕೊಡುವ ದಿಶೆಯಲ್ಲಿ ಈ ಅಂತಃಸ್ಫುರಣೆಯು ಪ್ರಬಲವಾದ ಕಾರ್ಯ ಮಾಡುತ್ತದೆ. ಈ ಪ್ರವೃತ್ತಿಯನ್ನೂ ಉಳಿದೆಲ್ಲ ಪ್ರವೃತ್ತಿಗಳಂತೆ ಬೆಳೆಯಿಸಿಕೊಂಡು ಬರಬೇಕು, ಅದಕ್ಕೆ ತಕ್ಕ ತರಬೇತಿಯನ್ನು ಕೊಡಬೇಕು, ಹಾಗು ಅದು ಶಿಸ್ತು ಹಾಗು ಸಂಯಮನಗಳಿಗೆ ಒಳಪಟ್ಟಿರುವಂತೆ ನೋಡಿಕೊಳ್ಳಬೇಕು. ಇದನ್ನು ನಾವು ಮನದಂದು ನೋಡಿದಾಗ ಮೇಲೆ ಹೇಳಿದಂತೆ ಪಾಶ್ಚಿಮಾತ್ಯ ತತ್ವವೇತ್ತರ ನಿಲುವೆಯ ನಿರ್ದಿಷ್ಟವಾದ ಅಭಿಪ್ರಾಯವು ತಿಳಿಯುವದು.

ಇಲ್ಲಿಯ ವರೆಗೆ ನಾವು ಧರ್ಮವೆಂದರೇನು ಎಂಬುದನ್ನು ತಿಳಿದುಕೊಳ್ಳುವದಕ್ಕಾಗಿ ವ್ಯಾಖ್ಯೆಗಳನ್ನೂ ಸೂತ್ರಗಳನ್ನೂ ಅರ್ಥೈಸಿಕೊಂಡು ಪ್ರಯತ್ನಿಸಿದ್ದಾಯಿತು. ಆದರೆ ಹೀಗೆ ವ್ಯಾಖ್ಯೆಗಳಿಂದಲೂ ಸೂತ್ರಗಳಿಂದಲೂ ಅರಿತುಕೊಂಡ ಈ ಸಿದ್ಧಾಂತವನ್ನು ಕಠೋಪನಿಷತ್ತಿನಲ್ಲಿ ಬರುವ ಒಂದು ರೂಪಕವು ಅದು ಎಷ್ಟು ಸುಂದರವಾಗಿ ನಿರೂಪಿಸಿರುವುದೆಂಬುದನ್ನು ನೋಡಬಹುದು :

ಆತ್ಮಾನಾಂ ರಥಿನಂ ವಿದ್ಧಿ ಶರೀರಂ ರಥಮೇವ ತು ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥

ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್ ।
ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥

ಇದರ ಅರ್ಥವು ಕನ್ನಡದಲ್ಲಿ ಹೀಗೆ ಇದೆ: "ಈ ಶರೀರವೇ ರಥ; ಬುದ್ಧಿಯೇ ಸಾರಥಿ; ಮನಸ್ಸೇ ಹಗ್ಗವು; ಇಂದ್ರಿಯಗಳೇ ಕುದುರೆಗಳು; ವಿಷಯಗಳೇ ಅವು ಮೇಯುವ ಹೊಲಗಳು; ಆತ್ಮನೇ ಆ ರಥದಲ್ಲಿ ಕುಳಿತ ಯಜಮಾನನು. ಈ ಆತ್ಮನು ಇಂದ್ರಿಯ ಮನಸ್ಸು ಮುಂತಾದವುಗಳ ಮುಖಾಂತರ ಭೋಕ್ತಾ ಆಗಿದ್ದಾನೆ". ಈ ರೂಪಕವನ್ನು ನಾವು ಸರಿಯಾಗಿ ತಿಳಿದುಕೊಂಡರೆ ನಮಗೆ ಅದೆಷ್ಟೋ ಉತ್ತಮ ಮಾತುಗಳು ಹೊಳೆಯುತ್ತವೆ. ಈ ರೂಪಕದಲ್ಲಿ ನಾವು ಸಾಂಖ್ಯರ ಪ್ರಕ್ರಿಯೆಯನ್ನು ಕಾಣಬಹುದು. ವಿಷಯಗಳು, ಇಂದ್ರಿಯಗಳು, ಮನ, ಬುದ್ಧಿ, ಆತ್ಮ ಇತ್ಯಾದಿ ಪದಗಳು ಆ ಪ್ರಕ್ರಿಯೆಯನ್ನು ನಿರ್ದೇಶಿಸುತ್ತವೆ. ಪಂಚಮಹಾಭೂತಗಳ ಹಂಚಿಕೆಯಿಂದ ಈ ಪ್ರಪಂಚವಾಗಿದೆಯಷ್ಟೆ! ಈ ಪ್ರಪಂಚದ ಅನುಭವವು ಪಂಚತನ್ಮಾತ್ರೆಗಳ ಅನುಭವವೇ ಆಗಿದೆ. ಪಂಚ-ತನ್ಮಾತ್ರೆಗಳ ಅನುಭವವು ಪಂಚೇಂದ್ರಿಯಗಳಿಂದಲೇ ಆಗುವದು. ಅವುಗಳಿಗೆ ಮನವೇ ಆಧಾರವಾಗಿದೆ. ಮನವು ಜ್ಞಾನೇಂದ್ರಿಯಗಳಲ್ಲಿ ಸಂಕಲ್ಪ—ವಿಕಲ್ಪಾತ್ಮಕವಾಗಿಯೂ, ಕರ್ಮೇಂದ್ರಿಯಗಳಲ್ಲಿ ವ್ಯಾಕರಣಾತ್ಮಕವಾಗಿಯೂ ಕಾರ್ಯ ಮಾಡುತ್ತದೆ. ಜ್ಞಾನೇಂದ್ರಿಯಗಳಿಂದ ಗ್ರಹಣ ಮಾಡಿದ ಸಂಸ್ಕಾರಗಳನ್ನು ಕ್ರಮಪಡಿಸಿ ನಿರ್ಣಯಾತ್ಮಕವಾಗಿ ಬುದ್ಧಿಯ ಮುಂದಿಡುವದು ಸಂಕಲ್ಪ ವಿಕಲ್ಪಾತ್ಮಕ ಮನಸ್ಸಿನ ಕಾರ್ಯವಾಗಿದೆ. ಬುದ್ಧಿ ಕೊಟ್ಟ ನಿರ್ಣಯಗಳನ್ನು ಕರ್ಮೇಂದ್ರಿಯಗಳಿಂದ ಪ್ರಚಾರದಲ್ಲಿ ತರುವದು ವ್ಯಾಕರಣಾತ್ಮಕ ಮನಸ್ಸಿನ ಕಾರ್ಯವಾಗಿದೆ. ಆದರೆ ನಿರ್ಣಯವು ಬುದ್ಧಿಯಿಂದಲೇ ಬರತಕ್ಕದ್ದು. ಕಾರಣ ಬುದ್ಧಿಯು ಮನಸ್ಸಿಗಿಂತಲೂ ಅಧಿಕವಾದುದು. ಮನಸ್ಸು ವ್ಯಾಕರಣಾತ್ಮಕ-ವಾದರೆ ಬುದ್ಧಿಯು ವ್ಯವಸಾಯಾತ್ಮಕವಾಗಿದೆ. ಕರ್ತವ್ಯಾಕರ್ತವ್ಯದ ನಿರ್ಣಯವನ್ನು ಹೇಳುವದು ಬುದ್ಧಿಯೇ ಆಗಿದೆ. ಆತ್ಮನು ಬುದ್ಧಿಗಿಂತ ಅಧಿಕವಾಗಿದ್ದಾನೆ. ಕರ್ತೃತ್ವಾಭಿಮಾನವು ಆತ್ಮನಿಗಿಲ್ಲ, ಬುದ್ಧಿಗಿದೆ. ಆತ್ಮನು ದ್ರಷ್ಟಾ, ಜ್ಞಾತಾ, ಭೋಕ್ತಾ ಆಗಿದ್ದಾನೆ. ಇಲ್ಲಿಯೊಂದು ಪ್ರಶ್ನೆ: ಆತ್ಮನು ದ್ರಷ್ಟಾ, ಜ್ಞಾತಾ ಎಂದು ವರ್ಣಿಸಿದುದನ್ನು ಒಪ್ಪಬಹುದು; ಆದರೆ ಆತ್ಮನು ಭೋಕ್ತಾ ಎಂದು ಹೇಳುವದು ಸರಿಯೇ?

ಈ ಪ್ರಶ್ನೆಯು ನಿಜವಾಗಿಯೂ ಮಹತ್ವದ್ದಾಗಿದೆ. ಸಾಂಖ್ಯರು ಆತ್ಮನು ಅಕರ್ತಾ, ಅಸಂಗೀ ಎಂದು ಹೇಳುತ್ತಾರೆ. ಅವನು ಕರ್ತೃತ್ವಭಾವವನ್ನೊಳ-ಗೊಂಡವನಲ್ಲ. ಆ ಕರ್ತೃತ್ವಭಾವವು ಪ್ರಕೃತಿಗಿದೆ. ಪ್ರಕೃತಿಯು ಏತಕ್ಕಾಗಿ

ಕಾರ್ಯವನ್ನು ಮಾಡುತ್ತಿರುತ್ತಾಳೆ? ಆತ್ಮನ ಭೋಗ–ಮೋಕ್ಷಗಳಿಗಾಗಿ ಆ ಪ್ರಕೃತಿಯು ಅವ್ಯಾಹತವಾಗಿ ಕಾರ್ಯನಿರತಳಾಗಿದ್ದಾಳೆ. ಇದರರ್ಥವಿಷ್ಟೇ, ಆತ್ಮನು ಭೋಕ್ತಾ ಆಗಿದ್ದಾನೆ. ಹೀಗೆ ಸಾಂಖ್ಯರು ಆತ್ಮನಿಗೆ ಭೋಕ್ತೃತ್ವವನ್ನು ಮಾನ್ಯಮಾಡುತ್ತಾರೆ.



ಆ ಮೇಲೆ ವೇದಾಂತಿಗಳು ಬಂದು ಆತ್ಮನಿಗೆ ಭೋಕ್ತೃತ್ವವು ಇಲ್ಲವೆಂದೂ ಆತ್ಮನು ಕೇವಲ ಸಾಕ್ಷಿಯಾಗಿದ್ದಾನೆ, ದೃಷ್ಟಾ ಆಗಿದ್ದಾನೆ, ಜ್ಞಾತಾ ಆಗಿದ್ದಾನೆ ಎಂದೂ ಹೇಳಿದರು. ತರುವಾಯ ಬೌದ್ಧರು ಬಂದು ಇವಾವೂ ಆತ್ಮನಿಗೆ ಸಂಬಂಧವಿರುವದಿಲ್ಲ ಎಂದು ಹೇಳಿದರು. ಆದರೆ ಇದನ್ನು ಅನುಭಾವಿಗಳು ಒಪ್ಪುವದಿಲ್ಲ. ಪ್ರಭುವು ಅಥವಾ ದೇವರು ಸರ್ವಾಂತರ್ಯಾಮಿ (Omni-present) ಯಾಗಿದ್ದಾನೆ, ಸರ್ವಜ್ಞ (Omniscient) ಮೂರ್ತಿಯಾಗಿ-ದ್ದಾನೆ, ಸರ್ವಕಾರಣಕರ್ತೃವೂ (Omnipresent) ಅವನಿದ್ದಾನೆ ಎಂದು ಹೇಳುವದರ ಇಂಗಿತವೇನು? ಇದು ಅರ್ಥರಹಿತವಾದ ಶಬ್ದಾಡಂಬರವೇ? ಅಲ್ಲ; ಭಕ್ತರು ಹೇಳುವಂತೆ ಪರಮಾತ್ಮನು, ಇಲ್ಲವೆ ಪ್ರಭುವು ಅಥವಾ ಜ್ಞಾನಿಗಳ ಪ್ರಕಾರ ಆತ್ಮನು 'ಕರ್ತುಮಕರ್ತುಮನ್ಯಥಾ ಕರ್ತುಮ್' ಶಕ್ತನಾಗಿದ್ದಾನೆ. ಇದುವೇ ಅನುಭಾವಮಾರ್ಗದ ಅನುವು. ಇಲ್ಲಿ ಪೌರುಷವಾದಕ್ಕೆ ಆಸ್ಪದವಿದೆ. ನಮಗೆ ಕರ್ಮಗಳು ಅಂಟಿಕೊಳ್ಳುವವಲ್ಲ! ಎಂಬ ಹೇಡಿಯ ಭಯವು ಇಲ್ಲಿಲ್ಲ. ಕರ್ಮಭೂಮಿಯಲ್ಲಿ ಜನಿಸಿದ ಪ್ರತಿಯೊಬ್ಬ ಆತ್ಮನೂ ಕರ್ತಾ ಆಗಿದ್ದಾನೆ. ಅವನು ಭೋಕ್ತಾ ಆಗಿದ್ದಾನೆ, ಅವನು ಜ್ಞಾತಾ, ದೃಷ್ಟಾ– ಎಲ್ಲವೂ ಆಗಿದ್ದಾನೆ. ಅಲ್ಲದೆ ಅವುಗಳ ಮೇಲೆ ಪ್ರಭುತ್ವವುಳ್ಳ ಅಧಿಪತಿಯೂ ಅವನಾಗಿದ್ದಾನೆ. ಈ ಅರ್ಥದಲ್ಲಿ ಆತ್ಮನ ಸಾಕ್ಷಿತ್ವವನ್ನು, ಆತ್ಮನ ಜ್ಞಾತೃತ್ವವನ್ನು, ಆತ್ಮನ ಭೋಕ್ತೃತ್ವವನ್ನು ಅನುಭವಿಸುವದೇ ನಿಜವಾದ ಧರ್ಮ, ಇದುವೆ ಮೋಕ್ಷ-ಧರ್ಮ, ಇದುವೆ ಆತ್ಮಕಲ್ಯಾಣ. ಇಂತಹ ಆತ್ಮಕಲ್ಯಾಣವನ್ನು ಅನುಲಕ್ಷಿಸಿ ಧರ್ಮದ ವ್ಯಾಖ್ಯೆಯನ್ನು ಮಾಡುವರು ಅಧ್ಯಾತ್ಮವಾದಿಗಳು. ಆತ್ಮಕಲ್ಯಾಣ-ವೆಂದರೆ ಸರ್ವಭೂತಹಿತವು. ಬಹುಜನರ ಬಹುಸುಖಕ್ಕಿಂತ ಸರ್ವಭೂತಹಿತವು ಶ್ರೇಷ್ಠವಲ್ಲವೆ? ಇಂತಹ ಸರ್ವಭೂತಹಿತವೇ ಧರ್ಮದ ಧ್ಯೇಯವಾಗಿರಬೇಕು.

ಇಲ್ಲಿ ಒಂದು ಮಾತನ್ನು ವಿವರವಾಗಿ ತಿಳಿದುಕೊಂಡಿರಬೇಕು- ಆತ್ಮ-ಸಂಯಮ, ಮನೋನಿಗ್ರಹ, ಇಂದ್ರಿಯವಿಜಯ ಈ ಮೂರು ಪದಗಳು ಒಂದೇ

ಅರ್ಥವನ್ನು ಕೊಡುವ ಬೇರೆ ಬೇರೆ ಮೂರು ಪರ್ಯಾಯ ಶಬ್ದಗಳೋ ಅಥವಾ ಅವುಗಳಲ್ಲಿ ಏನಾದರೂ ಅರ್ಥ ಭೇದವಿದೆಯೋ? ಸ್ಥೂಲ ದೃಷ್ಟಿಯಿಂದ, ಈ ಶಬ್ದಗಳನ್ನುಪಯೋಗಿಸುವ ಸಾಮಾನ್ಯ ದೃಷ್ಟಿಯಿಂದ ನೋಡಿದರೆ ಅರ್ಥದಲ್ಲೇನೂ ವ್ಯತ್ಯಾಸವಿಲ್ಲ. ಆದರೆ ಸೂಕ್ಷ್ಮವಾಗಿ ನೋಡಿದಾಗ ಇವುಗಳ ಅರ್ಥದಲ್ಲಿ ಭೇದ ವಿದೆ ಎಂದು ಹೊಳೆಯುವದು. ಆತ್ಮ ಮನ ಇಂದ್ರಿಯಗಳು ಬೇರೆ ಬೇರೆಯಾಗಿವೆ. ಆತ್ಮಸಂಯಮವೆಂದರೆ ಇಂಗ್ಲೀಷಿನಲ್ಲಿ Self control, ಮನೋನಿಗ್ರಹವೆಂದರೆ Mind control, ಇಂದ್ರಿಯವಿಜಯವೆಂದರೆ Sense control ಎಂದು ಅರ್ಥವಾಗುತ್ತದೆ. ಇವು ಅತಿ ಸೂಕ್ಷ್ಮ ಮತ್ತು ಸ್ಥೂಲವಾದ ತಮ್ಮ ಆತ್ಮ ಮನ ಇಂದ್ರಿಯ ಎಂಬ ಮೂರು ಪ್ರತ್ಯೇಕವಾದ ವಸ್ತುಗಳನ್ನು ಅಂಕಿತದಲ್ಲಿ ಇಟ್ಟು-ಕೊಳ್ಳುವದು ಎಂಬ ಅರ್ಥದಲ್ಲಿ ಬಳಕೆ ಹೊಂದುತ್ತವೆ.

ಕಠೋಪನಿಷತ್ತಿನ ಮೇಲೆ ಕೊಟ್ಟ ವಿವರಣಾದ ವಿವೇಚನೆಯಿಂದ ಆತ್ಮ ಸಾಕ್ಷಾತ್ಕಾರವನ್ನು ಹೊಂದಬಯಸುವವನು ಆತ್ಮಸಂಯಮ ಇಲ್ಲವೆ ಇಂದ್ರಿಯ ನಿಗ್ರಹವನ್ನು ಮೊತ್ತಮೊದಲು ಸಾಧಿಸಬೇಕು. ಆತ್ಮ ಸಾಕ್ಷಾತ್ಕಾರಕ್ಕೆ ಇಲ್ಲವೆ ಮೋಕ್ಷಧರ್ಮಕ್ಕೆ ಇಂದ್ರಿಯನಿಗ್ರಹವು ಪ್ರಥಮ ಹೆಜ್ಜೆಯಾಗಿದೆ. ಆತ್ಮ ಸಾಕ್ಷಾತ್ಕಾರಕ್ಕೆ ಅಥವಾ ಮೋಕ್ಷ ಧರ್ಮಕ್ಕೆ ಮೆಟ್ಟಲುಗಳನ್ನು ಹೇಳುತ್ತ ಅಮನಸ್ಕವೇ ಆತ್ಮಸಾಕ್ಷಾತ್ಕಾರದ ಆತ್ಯಂತಿಕ ಗುರಿಯೆಂಬುದನ್ನು ಆದಯ್ಯ-ನೆಂಬ ಶರಣನು ತನ್ನದೊಂದು ವಚನದಲ್ಲಿ ಬಹಳ ಮಾರ್ಮಿಕವಾಗಿ ಹೇಳಿದ್ದಾನೆ, ನೋಡಿ :

ಸಕಲೇಂದ್ರಿಯಂಗಳಲ್ಲಿ ವಿಕಾರಿಸುವ ಮನವ ನಿಳಿದು ನಿಂದಾತನೇ ಸುಖಿ.
ಪಂಚೇಂದ್ರಿಯಂಗಳಿಚ್ಛೆಯಲ್ಲಿ ಕೀಳುಮನಂಗೊಂಡು ಸುಳಿವಾತ ದುಃಖಿ.
ಮನವು ಬಹಿರ್ಮುಖವಾಗಲು ಮಾಯಾ ಪ್ರಪಂಚಿ.
ಮನವು ಅಂತರ್ಮುಖವಾದಡೆ ಅವಿರಳ ಜ್ಞಾನಿ.
ಮನವು ಮಹದಲ್ಲಿ ನಿಂದಿರಲಾತ ಮುಕ್ತನು.
ಮನೋಲಯವಾದಡೆ ಸೌರಾಷ್ಟ್ರ ಸೋಮೇಶ್ವರ ಲಿಂಗದಲ್ಲಿ ಅಭೇದ್ಯನು.

ನಮ್ಮ ಮನಸ್ಸು ಯಾವಾಗಲೂ ಇಂದ್ರಿಯಗಳ ಮುಖಾಂತರವಾಗಿ ವಿಷಯಗಳನ್ನು ಸೇವಿಸುತ್ತದೆ. ಈ ವಿಷಯ ಸೇವನೆಯಿಂದ ಮನಸ್ಸು ವಿಕಾರ-ಗೊಳ್ಳುತ್ತದೆ. ಹೀಗೆ ವಿಕಾರಗೊಳ್ಳುವ ಮನಸ್ಸು ಒಮ್ಮೆ ಸುಖಕ್ಕೆ, ಒಮ್ಮೆ ದುಃಖಕ್ಕೆ

ಒಳಗಾಗುತ್ತದೆ. ಸುಖ-ದುಃಖಗಳು ಮನಸ್ಸಿನ ಎರಡು ಅವಸ್ಥೆಗಳು. ಆದಯ್ಯನು ಹೇಳುವಂತೆ ಸಕಲ ಇಂದ್ರಿಯಗಳ ದ್ವಾರಾ ವಿಕಾರಿಸುತ್ತಿರುವ ಮನಸ್ಸನ್ನು ವಿಷಯಗಳತ್ತಣಿಂದ ಸೆಳೆದು ಅರ್ಥಾತ್ ವಿಷಯಗಳಿಂದ ವಿಮುಖಗೊಳಿಸಿ ಯಾವನು ಜೀವನ ಸಾಗಿಸುತ್ತಾನೆಯೋ ಅವನೇ ಸುಖಿಯು. ಇದರಂತೆ ಇಂದ್ರಿಯಗಳ ಇಚ್ಛೆಯಲ್ಲಿ ಸಿಲುಕಿ ಯಾವನ ಮನಸ್ಸು ವಿಷಯಗಳಲ್ಲಿಯೇ ಮುಳುಗುವದೋ ಅವನೇ ನಿಜವಾದ ದುಃಖಿಯು. ಸುಖ-ದುಃಖಗಳು ಬಾಹ್ಯ ವಸ್ತುಗಳನ್ನು ಅವಲಂಬಿಸಿಲ್ಲ. ವಿಷಯಗಳನ್ನು ಭೋಗಿಸುತ್ತ ಹೋದಂತೆ ಮನಸ್ಸಿಗೆ ನೆಮ್ಮದಿಯೆನಿಸುವದರ ಬದಲು ನೋವೇ ಹೆಚ್ಚಾಗುತ್ತ ನಡೆದು, ಮನುಷ್ಯನು ನವೆದು ನವೆದು ಸಾವಿಗೆ ತುತ್ತಾಗುತ್ತಾನೆ. ಆದಕ್ಕಾಗಿಯೇ ಬಸವಣ್ಣನವರು,

ವಿಷಯವೆಂಬ ಹಸುರನೆನ್ನ ಮುಂದೆ ಪಸರಿಸಿದೆಯಯ್ಯ.
ಪಶುವೇನ ಬಲ್ಲದು ? ಹಸುರೆಂದೆಳಸುವದು !
ವಿಷಯರಹಿತನ ಮಾಡಿ ಭಕ್ತಿರಸವ ದಣಿಯೆ ಮೇಯಿಸಿ,
ಸುಬುದ್ಧಿಯೆಂಬ ಉದಕವನೆರೆದು, ನೋಡಿ ಸಲುಹಯ್ಯಾ,
ಕೂಡಲ ಸಂಗಮದೇವ.

ಎಂದು ಅಂಗಲಾಚಿ ಬೇಡಿಕೊಳ್ಳುತ್ತಾರೆ. 'ಒಂದು ಪಶುವಿನೆದುರು ಹಸುರು ಮುರಿಯುತ್ತಿರುವ ಹುಲ್ಲನ್ನು ಹಾಕಿದರೆ ಅದು ಆ ಹಸುರಾದ ಹುಲ್ಲನ್ನು ತಿನ್ನ-ಲೆಳಸುವದಲ್ಲದೆ ಅದಕ್ಕೆ ಮತ್ತೊಂದು ಮಾಡಲು ಸಾಧ್ಯವೆ? ಹಾಗೆಯೇ ನನ್ನ ಗತಿಯಾಗಿದೆ. ವಿಷಯಗಳ ಪ್ರಸಾರವನ್ನು ಕಂಡು ಎನ್ನ ಮನಸ್ಸು ಅತ್ತ ಧಾವಿಸುತ್ತಿದೆ. ಆದುದರಿಂದ ನನ್ನನ್ನು ವಿಷಯಗಳಿಂದ ವಿಮುಕ್ತನನ್ನಾಗಿ ಮಾಡು; ವಿಮುಖಗೊಳಿಸು. ಭಕ್ತಿರಸವೆಂಬ ಹಸುರ ಹುಲ್ಲನ್ನು ನಾನು ದಣಿ-ಯುವಂತೆ ಮೇಯಿಸು. ಸುಬುದ್ಧಿ, ಸುವಿಚಾರ, ಸುವಿವೇಕವೆಂಬ ಜಲಪಾನವ ಮಾಡಿಸು.' —ಎಂದು ಹೇಳುವ ಬಸವಣ್ಣನವರು ಜನಸಾಮಾನ್ಯರ ಮನಸ್ಸಿನ ಸ್ಥಿತಿಯನ್ನು ಚಿತ್ರಿಸುತ್ತಾರೆ. ಮೇಲೆ ಆದಯ್ಯನು ವಚನದಲ್ಲಿ ಹೇಳಿದಂತೆ, ವಿಷ-ಯಾಸಕ್ತಿಯಿಂದ ದುಃಖವನ್ನೂ ವಿಷಯವಿರಕ್ತಿಯಿಂದ ಸುಖವನ್ನೂ ಮಾನವನ ಮನಸ್ಸು ಅನುಭವಿಸುತ್ತದೆ ಎಂಬ ಮಾತೆ ಇಲ್ಲಿ ಇನ್ನೊಂದು ವಿಧವಾಗಿ ವರ್ಣಿತ-ವಾಗಿವೆ. ವಿಷಯಭೋಗಾಸಕ್ತಿಯಿಂದ ಮನವು ವಿಪ್ಲವಗೊಳ್ಳುತ್ತದೆ; ಜೀವನವು

ತೊಡಕಿನದಾಗುತ್ತದೆ. ಅಂದರೆ ಕೊರತೆಗಳು ಹೆಚ್ಚಾಗುತ್ತಲಿವೆ; ಅವುಗಳಿಗೆ ತಕ್ಕಂತೆ ಭರತಿಯು ದೊರೆಯುವದಿಲ್ಲ; ಇದರಿಂದಾಗಿ ಕೊರಗೂ ಹೆಚ್ಚಾಗುತ್ತಲಿದೆ. ಇದನ್ನೇ ಅವರು ಮುಂದುವರಿಸಿ ಬೇರೆ ಶಬ್ದಗಳಲ್ಲಿ ಬಹು ಸುಂದರವಾಗಿ ಹೇಳುತ್ತಾರೆ. ಮನಸ್ಸು ಬಹಿರ್ಮುಖವಾಗಲು, ಹೊರಗಡೆಗೇ ಅದು ಹರಿಯುತ್ತಿರಲು ಮಾನವನು ಮಾಯೆಯ ಬಲೆಯಲ್ಲಿ ಬೀಳುತ್ತಾನೆ. ಆದರೆ ಅಂತರ್ಮುಖವಾದ ಆ ಮನಸ್ಸನ್ನು, ಒಳಗಡೆ ತಿರುಗಿದ ಆ ಮನಸ್ಸನ್ನು ಆತನು ಪಡೆದರೆ ಅವನಿಗೆ ಅವಿರಳವಾದ ಜ್ಞಾನಾಮೃತದ ಸುಖಸಾರವು ಸಿಕ್ಕುತ್ತದೆ. ಇಲ್ಲಿ ಅಂತರ್ಮುಖ ಹಾಗು ಬಹಿರ್ಮುಖ ಎಂದರೇನೆಂಬುದನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಆಗ ವಚನಕಾರನು ಹೇಳುವ 'ಮಾಯಾಪ್ರಪಂಚ' ಮತ್ತು 'ಅವಿರಳ ಜ್ಞಾನಿ' ಎಂಬ ಪದಪ್ರಯೋಗಗಳ ಸೂಕ್ತತೆಯು ಸರಿಯಾಗಿ ಮನದಟ್ಟಾಗುವದು. ಮಾನವನ ಮನವು ಹೀಗೆ ಬಹಿರ್ಮುಖವಾಗಿರುತ್ತದೆ ಇಲ್ಲವೆ ಅಂತರ್ಮುಖಿಯಾಗಿರುತ್ತದೆ ಎಂದು ಹೇಳುವ ಮಾತನ್ನೇ ಬೇರೆ ಶಬ್ದಗಳಲ್ಲಿ ಈ ರೀತಿಯಾಗಿ ಹೇಳುತ್ತಾರೆ: ಮಾನವನ ಮನಸ್ಸು ಸ್ವಾಭಾವಿಕವಾಗಿ ಅಧಃಪ್ರವೃತ್ತಿಯುಳ್ಳದು. ಅದನ್ನು ಊರ್ಧ್ವಪ್ರವೃತ್ತಿಯುಳ್ಳದ್ದನ್ನಾಗಿ ಮಾಡುವದರಲ್ಲಿಯೇ ಸಾಧನದ ಆವಶ್ಯಕತೆಯು ಇದೆ ಎನಿಸುತ್ತದೆ. ಮಾನವನ ಮನಸ್ಸನ್ನು ನೀರಿಗೆ ಹೋಲಿಸಲಾಗುತ್ತದೆ. ನೀರು ಸದಾ ತನ್ನ ಸಮಪಾತಳಿಯನ್ನು ಕಾಯ್ದುಕೊಳ್ಳಲು ಆತರಗೊಳ್ಳುತ್ತದೆ. ಅಂದರೆ ಅದು ಸ್ವಭಾವತಃ ಅಧೋಮುಖವಾಗಿರುತ್ತದೆ; ಕೆಳಗಡೆಗೆ ಹರಿಯುತ್ತದೆ. ಆದರೆ, ಅದನ್ನು ನೀರಿನ ಪಂಪಿನ ಸಹಾಯದಿಂದ ಮೇಲಕ್ಕೆತ್ತಲಿಕ್ಕೂ ಬರುತ್ತದೆ; ಊರ್ಧ್ವಮುಖಗೊಳಿಸಲು ಶಕ್ಯವಿರುತ್ತದೆ. ಹಾಗೆಯೇ ಸ್ವಭಾವತಃ ಅಧೋಗಾಮಿಯಾಗಿದ್ದರೂ ಆ ಮನಸ್ಸನ್ನು ಸಾಧನದ ಮುಖಾಂತರ ಊರ್ಧ್ವಗಾಮಿಯನ್ನಾಗಿ ಮಾಡಲು ಶಕ್ಯವೂ ಇದೆ, ಸಾಧ್ಯವೂ ಇದೆ. ಮನಸ್ಸು ನೀರಿನಂತೆ ಎಂದು ಹೇಳುವ ಔಚಿತ್ಯವು ಕೇವಲ ಮೇಲಿನ ಕಾರಣಕ್ಕಷ್ಟೇ ಪರಿಮಿತವಾಗಿಲ್ಲ. ಇನ್ನೊಂದು ಅತ್ಯಂತ ಮಹತ್ವದ ಕಾರಣವು ಇದೆ ಹಾಗೆ ಹೇಳಲಿಕ್ಕೆ. ನೀರನ್ನು ನಾವು ಯಾವ ಪಾತ್ರೆಯಲ್ಲಿ ಹಾಕುತ್ತೇವೆಯೋ ಅದು ಆ ಪಾತ್ರೆಯ ಆಕಾರವನ್ನು ತಳೆಯುತ್ತದೆ; ಅದು ತದಾಕಾರವಾಗಿ ಕಾಣುತ್ತದೆ. ಅದೇ ಪ್ರಕಾರ ಮನಸ್ಸೂ ಕೂಡ ಯಾವ ವಸ್ತುವಿನ ಚಿಂತನೆಯನ್ನು ಮಾಡುತ್ತದೆಯೋ ಅದೇ ಆಕಾರದ್ದಾಗುತ್ತದೆ. ಮನಸ್ಸಿನ ಈ ಮಹತ್ವದ ಗುಣವನ್ನು, ಅದು ಹೊಂದುವ ತದಾಕಾರವೃತ್ತಿಯನ್ನು

ಮನಶ್ಶಾಸ್ತ್ರಜ್ಞರು ಬಹುವಾಗಿ ಹೊಗಳುತ್ತಾರೆ. ಶಿಕ್ಷಣದ ಬಿತ್ತನೆಯಾಗಲಿ, ಸಂಸ್ಕೃತಿಯ ಉಳಿವಾಗಲಿ ಇಲ್ಲವೆ ನಾಗರಿಕತೆಯ ಬೆಳವಣಿಗೆಯಾಗಲಿ ಎಲ್ಲವೂ ಮಾನವನ ಮನದ ಈ ಮಹತ್ವದ ಗುಣವಾದ ತದಾಕಾರವೃತ್ತಿಯನ್ನೇ ಅವಲಂಬಿಸಿದೆ. ಮನಸ್ಸಿಗೆ ಈ ಗುಣವಿರದಿದ್ದರೆ ನಾವು ಅನಾಗರಿಕ ಅಶಿಕ್ಷಿತ ಅಸಂಸ್ಕೃತ ವೃತ್ತಿಯ ಭಯಂಕರವಾದ ಬಲೆಯಿಂದ ಪಾರಾಗಲು ಸಾಧ್ಯವಿರುತ್ತಿದ್ದಿಲ್ಲ. ಆಗ ಭೂಮ್ಯಾಕಾಶಗಳಿರುವ ವರೆಗೂ ಕಾಡು ಸ್ಥಿತಿಯೇ ನಮಗೆ ಮೇಲು ಗತಿಯಾಗಿ ಪರಿಣಮಿಸುತ್ತಿತ್ತು. ಅದರ ತದಾಕಾರವೃತ್ತಿಯಿಂದಾಗಿಯೇ ವಿಷಯ-ಗ್ರಹಣವು ಸಾಧ್ಯ. ನಮ್ಮ ಮನಸ್ಸು ಆಯಾ ವಿಷಯಾಕಾರವಾಗದೆ ನಮಗೆ ಅದರ ಜ್ಞಾನವಾಗದು. ಇದನ್ನು ಮನವಂದೇ ಅಧ್ಯಾತ್ಮ ಸಾಧಕರಿಗೆ ಸಿದ್ಧರು ಸತ್ಪುರುಷರು ಶರಣರು ಸಂತರು ಪದೇಪದೇ ಹೇಳುವದೇನಂದರೆ— ನಿಮ್ಮ ಮನಸ್ಸು ವಿಷಯಗಳ ಚಿಂತನೆಯನ್ನು ಮಾಡುತ್ತಿದರೆ ಅದು ವಿಷಯಾಕಾರವಾಗಿ ದುಃಖಕ್ಕೆಡೆಯಾಗುತ್ತದೆ. ಆಗ ನೀವು 'ಮಾಯಾ ಪ್ರಪಂಚಿ' ಗಳಾಗುತ್ತೀರಿ. ಆದರೆ ನಿಮ್ಮ ಮನಸ್ಸು ಬ್ರಹ್ಮವನ್ನು ಇಲ್ಲವೆ ಪ್ರಭುವನ್ನು ಕುರಿತು ಚಿಂತಿಸು-ತ್ತಿದ್ದರೆ ಅದು ಬ್ರಹ್ಮದ ಆಕಾರವಾಗಿ ಸುಖಕ್ಕೆ ಸ್ಥಾನವಾಗುತ್ತದೆ. ಇಂತಾಗಲು ನೀವು 'ಅವಿರಳ ಜ್ಞಾನಿ' ಗಳಾಗುತ್ತೀರಿ— ಎಂದು. ಆದುದರಿಂದಲೆ ಇನ್ನೊಂದು ಕಡೆ ಹೇಳಿದಂತೆ, ಅಂತರ್ಮುಖವೃತ್ತಿಯೇ ಅಧ್ಯಾತ್ಮಸೋಪಾನದ ಮೆಟ್ಟಲು-ಗಳನ್ನೇರಬಯಸುವ ಸಾಧಕನ ಪ್ರಥಮ ಲಕ್ಷಣವಾಗಿದೆ.

ಮನಸ್ಸು ಮಹತ್ತಿನಲ್ಲಿ ಇಲ್ಲವೆ ಬೃಹತ್ತಿನಲ್ಲಿ ಕರಗೊಂಡು ನಿಂದೊಡೆ ಮುಕ್ತಿಯು ಸಾಧ್ಯ. ಈಗ ಮನಸ್ಸು ಸುಖ–ದುಃಖಗಳೆಂಬ ದಂದುಗವನ್ನು ಮೀರಿ ನಿಲ್ಲುತ್ತದೆ. ಇಲ್ಲಿ ನಿರವಯವ, ನಿರಾಲಂಬ ಮನಃಸ್ಥಿತಿಯು ಪ್ರಾಪ್ತ-ವಾಗುತ್ತದೆ. ದುಃಖವಂತೂ ಸನಿಹಕ್ಕೆ ಸುಳಿಯುವದೇ ಇಲ್ಲ, ದುಃಖದ ಮಾತೇ ಇಲ್ಲಿಲ್ಲ. ಇನ್ನು ಸುಖವಾದರೋ, ಅದು ಯಾವುದನ್ನೂ ಅವಲಂಬಿಸಿರುವದಿಲ್ಲ. ಕೊನೆಯ ಹಂತದಲ್ಲಿ ಮನವು ಮಹದಲ್ಲಿ ಲಯವಾಗಿ ಬಿಡುವುದರಿಂದ ಅಲ್ಲಿ ಅಭೇದಸ್ಥಿತಿಯು ಸಾಧಿಸುತ್ತದೆ; 'ನಾನು ನೀನೆಂಬುದಕ್ಕೆ ತೆರಹಿಲ್ಲ!' ಯಾವು-ದರ ಅರಿವೂ ಅಲ್ಲಿ ಸುಳಿಯುವದಿಲ್ಲ. ಮುಕ್ತನಾಗಿದ್ದೇನೆ, ಹಾಗೆ, ಹೀಗೆ ಎಂಬ ಯಾವದೂ ಅಲ್ಲಿ ಜಾಗೃತವಿರುವದಿಲ್ಲ. ಇದಕ್ಕೆ ಅಮನಸ್ಕಯೋಗವೆಂದು ಕರೆ-ಯುತ್ತಾರೆ. ಇಂತಹ ಅವಸ್ಥೆಯನ್ನು ಅನುಭವಿಸುವ ಆನಂದವು ಅವಿರಳವಾ-ಗಿರುವದು. 'ಲೀಲೆಯಾದೊಡೆ ಉಮಾಪತಿ, ಲೀಲೆ ತಪ್ಪಿದೊಡೆ ಸ್ವಯಂಭೂ!'

ಎಂದು ಹೇಳಿರುವರಲ್ಲವೇ ? ಈ ಸ್ವಯಂಭೂ ಸ್ಥಿತಿಯೇ ಅಭೇದ ಸ್ಥಿತಿ; ಅಮನಸ್ಕಯೋಗ.

ಮೇಲಿನ ಆಪಸ್ತ್ಯನ ವಚನದ ವಿವರಣೆಯ ವಿವೇಚನೆಯಿಂದ ಮಾನವನು ಹರಿದಾಡುವ, ವಿಕಾರವಶವಾಗುವ, ಕೀಳುಗೊಳ್ಳುವ ತನ್ನ ಮನಸ್ಸನ್ನು ಸೆಳೆದು ಸಾಧಿಸಿ ನಿಗ್ರಹಿಸಿ ನಿಂದಾಗಲೇ ಅವನಿಗೆ ಅಧ್ಯಾತ್ಮದ ಮೊದಲನೆಯ ಮೆಟ್ಟಲು ಕರಗತವಾದಂತೆ ಎಂದು ತಿಳಿದುಬರುವದು. ಸಂಯಮದಿಂದಲೇ ಅವಿರಳ ಸಾಮರಸ್ಯ ಸಾಧಿಸುವದು, ತಾದಾತ್ಮ್ಯವೃತ್ತಿಯು ಲಭಿಸುವದು. ಇಂತಹ ಸಂಯಮವು ಸಾಧ್ಯವಾಗಬೇಕಾದರೆ ಮಾನವನು ಅಪ್ರಮತ್ತನಾಗಿರಬೇಕು. ಪ್ರಮಾದರಹಿತ ಜೀವನವನ್ನು ಸಾಗಿಸಬೇಕು. ಎಂದೂ, ಎಂಥ ಪ್ರಸಂಗದಲ್ಲಿಯೂ ಪ್ರಮಾದಕ್ಕೀಡಾಗದಿರಬೇಕು; ಅರ್ಥಾತ್ ಯಾವಾಗಲೂ ಎಚ್ಚರದಿಂದಿರಬೇಕು.

ಪ್ರಣವೋ ಧನುಃ ಶರೋ ಹಿ ಆತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ ಶರವತ್ ತನ್ಮಯೋ ಭವೇತ್ ॥

" ಓಂಕಾರವೇ ಬಿಲ್ಲು, ಆತ್ಮವೇ ಬಾಣ, ಬ್ರಹ್ಮವೇ ಅದರ ಗುರಿಯಾಗಿರುತ್ತದೆ. ಅದನ್ನು ಅಪ್ರಮಾದದಿಂದ ವೇಧಿಸಬೇಕು. ಬಾಣದಂತೆ ತನ್ಮಯವಾಗಿರಬೇಕು." ಈ ಪ್ರಮಾದರಹಿತ ಜೀವನವೇ ಅವಶ್ಯವಾಗಿ ಬೇಕೆಂದು ಕಠೋಪನಿಷತ್ತು ಒತ್ತಿ ಹೇಳುತ್ತದೆ. 'ಉತ್ತಿಷ್ಠತ, ಜಾಗ್ರತ, ಪ್ರಾಪ್ಯ ವರಾನ್ನಿಬೋಧತ'– "ಏಳಿರಿ, ಎಚ್ಚರಾಗಿರಿ, ಗುರಿಯನ್ನು ಮುಟ್ಟುವ ವರೆಗೆ ಮುನ್ನುಗ್ಗಿರಿ." ಇದರಿಂದ ಕಠೋಪನಿಷತ್ತು ಹೇಡಿಗಳಾಗಿರಿ, ಅಲಸಿಗರಾಗಿರಿ, ಪ್ರಾರಬ್ಧದ ಮೇಲೆ ಕೈ ಯಿಟ್ಟಿರಿ ಪರಾವಲಂಬಿಗಳಾಗಿರಿ ಎಂದು ಹೇಳುವದಿಲ್ಲ. ಸಡ್ಡು ಹೊಡೆದು ಲಡ್ಡು ಕಟೆದು ಅಡ್ಡ ಬರುವ ಅಡ್ಡಿ ಆತಂಕಗಳನ್ನು ತುಂಡರಿಸಿ ಆಲಸ್ಯ–ಔದಾಸೀನ್ಯಗಳಿಗೆ ತುತ್ತಾಗದೆ ಮುನ್ನಡೆಯಿರಿ, ಮುನ್ನುಗ್ಗಿರಿ— ಎಂದು ಅದು ಹೇಳುವದು.

ಇನ್ನಾದರೂ ಕೇಳಿರೋ, ಇನ್ನಾದರೂ ಕೇಳಿರೋ !
'ವಿಧಿವಶ, ಬ್ರಹ್ಮಲಿಖಿತ, ಪೂರ್ವಾರ್ಜಿತ'
ಇಂತೆಂಬ ಹೇಡಿತನದ ಮಾತುಗಳ ತೊರೆಯಿರೋ !
'ಕ್ರಿಯಾವಶ, ಆತ್ಮಲಿಖಿತ, ಸ್ವಯಾರ್ಜಿತ'
ಇಂತೆಂಬ ಮಾತುಗಳ ನುಡಿಯಿರೋ !

ಇನ್ನಾದರೂ ಕೇಳಿರೋ, ಬಸವೇಶ್ವರನ ಸೃಷ್ಟಿಯೊಳು
ಧೀರತನಕ್ಕೆ ಜಯವಲ್ಲದೆ ಹೇಡಿತನಕ್ಕೆ ಜಯವಿಲ್ಲೆಂಬ
ಸತ್ಯವ ತಿಳಿದು ನಿತ್ಯದಿ ನಡೆಯಿರೋ !

ಇಲ್ಲಿಯವರೆಗೂ ಹಣೆಗೆ ಕೈ ಹಚ್ಚಿಕೊಂಡು ಕುಳಿತು ಮೇಲೆ ಕೈ ಮಾಡಿ 'ಎಲ್ಲವೂ ಆ ವಿಧಿವಶವಾದುದು. ಯಾರೇನು ಮಾಡುವರು ?' ಎಂದು ಹಣೆ ಹಣೆ ಬಡಿದುಕೊಂಡು 'ಎಲ್ಲವೂ ನನ್ನ ಪೂರ್ವಜನ್ಮದ ಕರ್ಮಫಲ' ಎನ್ನುತ್ತ ಹೇಡಿತನದಿಂದ ಅಳುತ್ತ ಕುಳಿತದ್ದು ಸಾಕು– ಬೇಕಾದಷ್ಟು ಆಗಿದೆ ! ಇಂತಹ ಹೇಡಿತನದ ಪರಿತಾಪವನ್ನು ಅನುಭವಿಸಿಯೂ ಆಗಿದೆ ! ಭಾರತಮಾತೆಯೂ ಇದರ ಪರಿಣಾಮವಾಗಿಯೇ ಪಾರತಂತ್ರ್ಯದ ಪಾಶದಲ್ಲಿ ಸಿಕ್ಕುಬಿದ್ದು ಒದ್ದಾಡಿದ್ದಾಳೆ. ಈ ಅನುಭವವು ಇನ್ನಾದರೂ ನಮಗೆ ಬುದ್ಧಿಯನ್ನು ಕಲಿಸಲಿ. ಹೇಡಿತನದಿಂದ ಜೀವನದಲ್ಲಿ ಜಯವಷ್ಟೇ ಏಕೆ, ಜೀವನವೇ ಇಲ್ಲ ಎಂಬುದನ್ನು ತಿಳಿಯಲಿ. ಇಲ್ಲಿ–ಅಲ್ಲಿ ಎಂಬ ಬಣ್ಣದ ಮಾತುಗಳು ಅಳಿಯಲಿ. 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ !' ಎಂಬೊಂದೇ ನುಡಿಯು ನಮ್ಮ ನಿತ್ಯ ಜೀವನದ ಮಂತ್ರವಾಗಲಿ. ಇಲ್ಲಿ ನಾವು ಮಾಡದೆ, ಧೀರತನದಿಂದ ಜೀವನವನ್ನು ಸಾಗಿಸದೆ ಸುಪ್ಪತ್ತಿಗೆಯಲ್ಲಿ ಬಿದ್ದು ಆಡಂಬರದ ಮಾತುಗಳನ್ನಾಡಿದರೆ ಆಗಬೇಕಾದುದೇನು ? ದೇಹವಾದಿಗಳಾಗಿ ಬದುಕದೆ, ಧ್ಯೇಯವಾದಿಗಳಾಗಿ ಬದುಕಿರಿ. ಧ್ಯೇಯ ಸಾಧನೆಯತ್ತ ನಿಮ್ಮ ಲಕ್ಷ್ಯವಿರಬೇಕಲ್ಲದೆ ನಡುವೆ ಬರುವ ಅನೇಕ ವಸ್ತುಗಳ ಕಡೆಗೆ ಅದು ಹರಿಯದಿರಲಿ. ಇಂತಾದರೆ ಮಾತ್ರ ಭವಿಷ್ಯವು ಉಜ್ವಲವಿದೆ, ಇಲ್ಲದೆ ಹೋದರೆ ಎಲ್ಲವೂ ಮಸಕು, ಮಸಕು; ಮಂಜು, ಮಂಜು ! ಇದುವೆ ಕಠೋಪನಿಷತ್ತಿನ ಬೋಧನೆಯ ಸಾರಸರ್ವಸ್ವವಾಗಿದೆ. ಇದುವೆ ಮೋಕ್ಷ ಧರ್ಮದ ಮುಖ್ಯ ತಿರುಳಾಗಿದೆ. ಇದುವೆ ಆತ್ಮಕಲ್ಯಾಣದ ಆತ್ಯಂತಿಕ ಗುರಿಯಾಗಿದೆ. ಯಮರಾಜನು ನಚಿಕೇತನಿಗೆ ಬೋಧಿಸಿದ ತತ್ವಸಾರವಾದರೂ ಇದುವೇ ಆಗಿದೆ.

ಹಿಂದಕ್ಕೆ ವಾಜಶ್ರವಸ ಎಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಬಹಳ ಬಡವನಾಗಿದ್ದನು. ಎಷ್ಟು ಬಡವನಾಗಿದ್ದನೋ ಅಷ್ಟೇ ಕೀರ್ತಿಕಾಮನೂ ಆಗಿದ್ದನು. ಅವನು ಯಾವಯಾವದನ್ನು ಮಾಡಿದರೆ ತನಗೆ ಕೀರ್ತಿಯು ಲಭಿಸುವದೋ ಅದೆಲ್ಲವನ್ನೂ ಮಾಡುವ ಮಹತ್ವಾಕಾಂಕ್ಷಿಯಾಗಿದ್ದನು. ಯಜ್ಞಗಳನ್ನು ಮಾಡಿದರೆ

ಕೀರ್ತಿಯು ಯಥೇಚ್ಛವಾಗಿ ದೊರಕುವದೆಂದು ಕೇಳಿದ್ದನು. ಎಲ್ಲ ಯಜ್ಞಗಳಲ್ಲಿಯೂ ವಿಶ್ವಜಿತ್ ಎಂಬ ಯಜ್ಞವು ಅತ್ಯಂತ ಶ್ರೇಷ್ಠವಾದುದು. ಅದನ್ನು ಎಸಗಿದವರಿಗೆ ಅಜರಾಮರವಾದ, ಅವಿನಾಶಿಯಾದ ಕೀರ್ತಿಯು ಲಭಿಸುವದೆಂಬುದನ್ನೂ ಅವನು ಅರಿತಿದ್ದನು. ತಾನು ಕಡು ದರಿದ್ರನಾಗಿದ್ದರೂ ಒಂದು ಸಲ, ಆ ವಿಶ್ವಜಿತ್ ಯಜ್ಞವನ್ನು ಹೂಡಿದನು. ಸರ್ವ ಸಂಪತ್ತನ್ನೂ ದಾನ ಮಾಡಿ ಬಿಡುವದೇ ಆ ಯಜ್ಞದ ಗುರಿ ಹಾಗು ಯಜ್ಞಕರ್ತಾರನ ಕರ್ತವ್ಯ. ಆದರೆ ವಾಜಸ್ರವಸನು ನಿರುಪಯುಕ್ತ ಆಕಳುಗಳನ್ನು ದಾನ ಮಾಡಿದನು. ಆದರೆ ಇದು ಅವನ ಮಗನಾದ ನಚಿಕೇತನಿಗೆ ಸರಿಯೆನಿಸಲಿಲ್ಲ. 'ಎಲಾ! ನನ್ನ ತಂದೆಯು ಇಂಥ ದಾನದಿಂದ ಅದಾವ ಪುಣ್ಯವನ್ನು ಪಡೆಯುತ್ತಿದ್ದಾನೆ! ಇದರಿಂದ ಅವನಿಗೆ ನಿಜವಾದ ಕೀರ್ತಿಯಾದರೂ ಹೇಗೆ ಲಭಿಸಬೇಕು?' ಎಂದು ಮುಂತಾಗಿ ಮನದಲ್ಲಿ ಚಿಂತಿಸಿದನು. ಯೋಚಿಸಿ ಯೋಚಿಸಿ ಅವನು ಕೊನೆಗೊಂದು ನಿರ್ಣಯಕ್ಕೆ ಬಂದನು. ತಾನು ತನ್ನ ತಂದೆಯ ಹತ್ತಿರ ಹೋಗಬೇಕು. ಹಾಗು ತನ್ನನ್ನು ದಾನವಾಗಿ ಕೊಡಲು ತಂದೆಯನ್ನು ಬಿನ್ನಯಿಸಿಕೊಳ್ಳಬೇಕು ಎಂದು ವಿಚಾರಿಸಿದನು. ಇಂಥದೊಂದು ನಿರ್ಣಯದೊಡನೆ ತಂದೆಯ ಬಳಿಸಾರ್ದು, 'ತಂದೆಯೇ, ನಿಮಗೆ ನಿಜವಾಗಿಯೂ ಪುಣ್ಯ ಬರಬೇಕೆಂದಿದ್ದರೆ ಹಾಗು ನೀವು ನಿಜವಾದ ಕೀರ್ತಿಯನ್ನು ಪಡೆಯಬೇಕೆಂದಿದ್ದರೆ ಪುಷ್ಟನಾದ ನನ್ನನ್ನು ದಾನವಾಗಿ ಕೊಡಿರಿ' ಎಂದು ಕೈ ಮುಗಿದು ಬೇಡಿಕೊಂಡನು. ಆಗ ವಾಜಸ್ರವಸನಿಗೆ ಮಗನ ಈ ಮಾತನ್ನು ಕೇಳಿ ಬಹಳ ಸಿಟ್ಟು ಬಂದಿತು. ದನಕರುಗಳನ್ನು ದಾನ ಮಾಡುವಂತೆ ಮಕ್ಕಳನ್ನು ಮನುಷ್ಯರನ್ನು ದಾನ ಮಾಡುವದೇ?! ಅವನ ತಲೆ ತಿರುಗಿತು. ಅವನು ಸಿಟ್ಟಿನಿಂದಲೇ ಮಗನಿಗೆ 'ನಿನ್ನನ್ನು ಯಮನಿಗೆ ದಾನವಾಗಿ ಕೊಟ್ಟಿದ್ದೇನೆ, ಹೋಗು' ಎಂದನು. ಪಿತೃವಚನವನ್ನು ಪಾಲಿಸುವದು ಸುಪುತ್ರನ ಕರ್ತವ್ಯ. ನಚಿಕೇತನು ಹಾಗೆಯೇ ಆಗಲೆಂದು ತಂದೆಗೆ ಹೇಳಿ ಯಮರಾಜನ ಕಡೆಗೆ ಹೋಗುವನು. ಇವನು ಹೋದಾಗ ಯಮರಾಜನು ತನ್ನ ಪುರದಲ್ಲಿ ಇದ್ದಿರಲಿಲ್ಲ. ಆದುದರಿಂದ ಈ ಬಾಲಕನು ಯಮರಾಜನ ದಾರೀ ಕಾಯುತ್ತ ಕುಳಿತುಕೊಳ್ಳಬೇಕಾಯಿತು. ಹೀಗೆಯೇ ಅವನು ಮೂರು ದಿನಗಳ ವರೆಗೂ ದಾರೀ ಕಾಯುತ್ತ ಕುಳಿತುಕೊಂಡನು. ಆ ಮೇಲೆ ಮೂರು ದಿನಗಳ ನಂತರ ತಿರುಗಿ ಬಂದ ಯಮನು ನಚಿಕೇತನಿಗೆ ಅತಿಥಿಸತ್ಕಾರವನ್ನು ಮಾಡಿದನು. ಮತ್ತು ಮೂರು

ದಿನಗಳ ವರೆಗೂ ನಿನ್ನನ್ನು ಹಾದಿ ನೋಡಿಸಿದ್ದಕ್ಕಾಗಿ ನೀನು ಬೇಕಾದ ಮೂರು ವರಗಳನ್ನು ಬೇಡಿಕೋ ಎಂದು ನಚಿಕೇತನಿಗೆ ಕೇಳಿಕೊಂಡನು. ಆಗ ನಚಿಕೇತನು ವಿಚಾರ ಮಾಡಿ ಕೆಳಗಿನ ಮೂರು ವರಗಳನ್ನು ಕೇಳಿದನು: (೧) "ನನ್ನನ್ನು ನೋಡಿ ನನ್ನ ತಂದೆಯು ಪ್ರಸನ್ನನಾಗಬೇಕು" ಇದು ಮೊದಲನೆಯ ವರ. ಬಾಲಕನು ಯಮಪುರಕ್ಕೆ ಬರುವಾಗ ಆತನ ತಂದೆಯ ಮೋರೆಯು ಕೋಪದಿಂದ ಕೆಂಪಡರಿತ್ತು; ಕಣ್ಣುಗಳು ಕಿಡಿಯನ್ನುಗುಳುತ್ತಿದ್ದವು. ಸರಿ; ಯಮರಾಜನು ಸಂತೋಷದಿಂದ ಈ ವರವನ್ನು ಪೂರೈಸಲು ಒಪ್ಪಿಕೊಂಡನು. (೨) "ಯಜ್ಞದಿಂದ ಸ್ವರ್ಗವು ಸಿಗುವದಷ್ಟೆ! ಅಲ್ಲಿ ದೊರೆಯುವ ಅಮೃತವೆಂಬ ಐಶ್ವರ್ಯವು ಪ್ರಾಪ್ತವಾಗಬೇಕು." ಎಂಬುದು ಎರಡನೆಯ ವರ. ಈ ವರದ ಔಚಿತ್ಯವಿದು: ಯಜ್ಞ ಮಾಡುತ್ತಿದ್ದ ತನ್ನ ಬಡ ತಂದೆಯು ಹತ್ತಿರ ಸರಿಯಾಗಿ ಮತ್ತು ಸಾಕಷ್ಟು ದಾನ ಮಾಡಲು ಸಂಪತ್ತಿರಲಿಲ್ಲ. ಅವನಿಗೂ ಯಜ್ಞದಿಂದ ಅಮೃತಫಲವು ಸಿಗಬೇಕಾಗಿತ್ತು. ಆದ್ದರಿಂದ ಇದಕ್ಕೆ ಯಮರಾಜನು ಬಹು ಸಂತೋಷದಿಂದ 'ತಥಾಸ್ತು!' ಎಂದನು. (೩) "ಸತ್ತಮೇಲೆ ಜೀವನು ಇರುವನೆಂದು ಕೆಲವರು, ಇರುವದಿಲ್ಲವೆಂದು ಹಲವರು ಹೀಗೆ ಬೇರೆ ಬೇರೆ ಜನರು ಬೇರೆ ಬೇರೆ ರೀತಿಯಲ್ಲಿ ಹೇಳುತ್ತಿದ್ದಾರೆ. ಇದರಲ್ಲಿ ಯಾವದು ನಿಜ?" ಇದು ಮೂರನೆಯ ವರ! ಈ ವರವನ್ನು ಕೇಳಿದ ಕೂಡಲೇ ಯಮನ ಮುಖವು ಮುದುಡಿತು. ತನ್ನ ಮೋರೆಯನ್ನು ಕಿವುಚಿಕೊಂಡು, ಹುಬ್ಬುಗಂಟಿಕ್ಕಿ ಯಮರಾಜನು ದೀರ್ಘಾಲೋಚನೆಯಲ್ಲಿ ತೊಡಗಿದನು. "ಬೇಕಾದ ಮೂರು ವರಗಳನ್ನು ಬೇಡಲಿಕ್ಕೆ ಈತನಿಗೆ ಹೇಳಿದ್ದೇನೆ. ಇವನಾದರೋ ಈ ವರವನ್ನು ಬೇಡಿದನಲ್ಲ! ಈಗ ಏನು ಮಾಡುವದು?" ಎಂದು ಯೋಚನೆ ಮಾಡಿ, ಕೊನೆಗೆ "ಈ ವರವನ್ನು ಬಿಟ್ಟು ಇನ್ನುಳಿದ ಬೇಕಾದ ವರವನ್ನು ಬೇಡು. ನಾನು ನಿನಗೆ ಇಲ್ಲೆನದೆ ಪೂರೈಸಿ ಕೊಡುವೆ" ಎಂದು ನಚಿಕೇತನಿಗೆ ಕೇಳಿಕೊಂಡನು. ಆದರೆ ಹದಿನಾರು ವರುಷದ ಹುಡುಗ ಅದೇ ವರವನ್ನು ತನಗೆ ದಯಪಾಲಿಸಬೇಕೆಂದು ಹಟ ಹಿಡಿದನು. ಯಮರಾಜನು ಅವನ ಮನಸ್ಸನ್ನು ಸೆಳೆಯುವ-ಸೆಳೆಯಬಲ್ಲ ಅನೇಕ ಆಕರ್ಷಕ ಹಾಗು ಮೋಹಕ ವರಗಳ ಸಂಗ್ರಹವನ್ನೇ ಅವನ ಮುಂದಿಟ್ಟರೂ ಹುಡುಗನ ಹಟದ ಮುಂದೆ ಈತನ ಪ್ರಚೋದನೆಯೆಲ್ಲ ನಿಷ್ಫಲವಾಯಿತು. ನಿರುಪಾಯನಾಗಿ ಯಮನು ಒಪ್ಪಲೇಬೇಕಾಯಿತು. ಆಗ ಅವನು ಹುಡುಗನ ಹವ್ಯಾಸಕ್ಕೆ

ಒಂದು ಸಲ ಶೈಲ ಎಂಬವನು ಬುದ್ಧನ ಬಳಿಗೆ ಬಂದು, "ಗೌತಮಾ! ನಿನ್ನಂತಹನು ಈ ರೀತಿ ಭಿಕ್ಷುಕನಾಗುವದು ತರವಲ್ಲ. ನೀನು ರಾಜನಾಗ-ಬೇಕಾಗಿತ್ತು, ರಾಜ!" ಎಂದನು. ಆಗ ಬುದ್ಧನು ಹೀಗೆ ಹೇಳಿದನು: "ನಾನು ರಾಜನಾಗಿದ್ದೇನೆ, ಶೈಲಾ, ನಾನು ರಾಜನೇ ಆಗಿದ್ದೇನೆ; ನಾನು ಧರ್ಮರಾಜ ನಾಗಿದ್ದೇನೆ. ಧರ್ಮದಿಂದ ಚಕ್ರವನ್ನು ಉರುಳಿಸಿಕೊಂಡು ಹೋಗುತ್ತೇನೆ. ಈ ಚಕ್ರವು ಹಿಂವಕ್ಕೆ ಉರುಳುವಂತಹವಲ್ಲ. ಇದು ಎಂದೆಂದೂ ಮುಂದೆ, ಮುಂದೆ ಉರುಳುವಂತಹದು! ಈ ಧರ್ಮಚಕ್ರ ಪ್ರವರ್ತನಕ್ಕಾಗಿಯೇ ನನ್ನೆಲ್ಲ ಆಯುಷ್ಯ ವನ್ನೂ ನಾನು ಮೀಸಲಾಗಿರಿಸಿದ್ದೇನೆ. ಈ ಧರ್ಮಚಕ್ರ ಪ್ರವರ್ತನೆಗಾಗಿಯೇ ನಾನು ಕಾಶೀ ನಗರಕ್ಕೆ ಹೋಗುತ್ತೇನೆ. ಲೋಕದಲ್ಲಿ ಅಮೃತ ದುಂದುಭಿಯನ್ನು ಮೊಳಗಿಸುತ್ತೇನೆ." ಹೀಗೆ ಬುದ್ಧನು ಧರ್ಮ ದುಂದುಭಿಯನ್ನು ಮೊಳಗಿಸಿದನು· ಅವನು ಹೋದಲ್ಲೆಲ್ಲ 'ಉತ್ತಿಟ್ಠೆ ನಪ್ಪಮಜ್ಜೆಯ್ಯ ಧಮ್ಮಂ ಚರೆ ಸುಚರಿಯಂ।' 'ಎದ್ದೇಳು, ಪ್ರಮಾದ ಬೇಡ. ಸುಚರಿತವಾದ ಧರ್ಮವನ್ನು ಆಚರಿಸು' ಎಂದು ಜನತೆಗೆ ಬೋಧಿಸಿದನು. ಅವನು ಇಂತಹ ಧರ್ಮಚಕ್ರಕ್ಕೆ ಎರಡು ಮುಖಗಳಿವೆಯೆಂದೂ ಹೇಳಿದನು. ಒಂದು ಅಪ್ರಮಾದ, ಇನ್ನೊಂದು ಅತಾಪ. ಅಪ್ರಮಾದವೆಂದರೆ ಅಪ್ರತಿಹತ ಶೌರ್ಯ ಇಲ್ಲವೆ ಸತತ ಪ್ರಯತ್ನ, ನತತಾ-ಭ್ಯಾಸ. ಮಾಡುವ ಮಾಟದಲ್ಲಿ ತುಸುವಾದರೂ ಚ್ಯುತಿ ಬಂದರೆ ಅದು ಪ್ರಮಾದ. ಹಿಡಿದ ನೇಮವನೆಡೆವಿಡದ ಅತಿ ಛಲವೇ ಅಪ್ರಮಾದ. ಅತಾಪವೆಂದರೆ ಪರಾಕ್ರಮ ಇಲ್ಲವೆ ವೀರ ವೈರಾಗ್ಯ. ಲೌಕಿಕವಾದುದಾವುದಕ್ಕೂ ಮೋಹಿತ-ನಾಗದೆ ಧೀರತನದಿಂದ ನಡೆಯುವದೇ ಅತಾಪ. ಎಡರಡಿಸಿದ ವೇಳೆಯೊಳು ಧೈರ್ಯವಿದ್ದರೆ ಅದೇ ಅತಾಪ! 'ಅಪ್ಪಮಾದೇನ ಮಘವಾ ದೇವಾನಂ ಸೆಟ್ಟತಂ ಗತೋ।' ಅಪ್ರಮಾದದಿಂದ ಇಂದ್ರನು ದೇವತೆಗಳಲ್ಲಿ ಶ್ರೇಷ್ಠನಾದನು. 'ಅತ್ತದೀಪಾ ವಿರಹಥ, ಅಪ್ಪಮಾದೇನ ಸಂಪಾದೇಥ।' ಆತ್ಮನನ್ನು ದೀಪ-ವಾಗಿಟ್ಟುಕೊಂಡವರಾಗಿ ವಿಹರಿಸಿರಿ. ಅಪ್ರಮಾದದಿಂದ ಸಂಪಾದಿಸಿರಿ. ಅಂದರೆ 'ಆತ್ಮದ ಬೆಳವಣಿಗೆಯನ್ನು ಸದಾ ಕಣ್ಮುಂದೆ ಇಟ್ಟುಕೊಂಡು ನಡತೆಯನ್ನು ತಿದ್ದಿಕೊಳ್ಳಿರಿ. ಹೀಗೆ ಆತ್ಮಪ್ರಕಾಶವನ್ನು ಬೆಳಸಿಕೊಂಡ ನಂತರ ಎಚ್ಚರದಪ್ಪದೆ ಲೋಕದ ಹಿತವನ್ನು ಸಾಧಿಸಿರಿ.' ಇಲ್ಲಿ ಮಹತ್ವವಾದುದೊಂದು ಸಂಗತಿಯನ್ನು ನೆನಪಿನಲ್ಲಿಡಬೇಕು. ಸಾಧಕನು ಒಮ್ಮೆ ತನ್ನ ಸಾಧನೆಯ ನಂತರದಲ್ಲಿ ಆತ್ಮಸಾಕ್ಷಾತ್ಕಾರವನ್ನು ಸಾಧಿಸಿಕೊಂಡು ನಿರಂತರವೂ ನಿಜಾನಂದದಲ್ಲಿ

ಲೋಲಾಡುತ್ತ ಕುಳಿತುಕೊಳ್ಳಬಹುದು. ಆದರೆ, ಇದು ಸರಿಯಾದುದಲ್ಲ, ತಪ್ಪು. ಒಮ್ಮೆ ನೀನು ಆತ್ಮಸಾಕ್ಷಾತ್ಕಾರವನ್ನು ಪಡೆದುಬಿಟ್ಟರೆ ಅಲ್ಲಿಗೆ ನಿನ್ನ ಕೆಲಸ ಮುಗಿಯಲಿಲ್ಲ. ಹಾಗೆ ಮುಗಿಯಿತೆಂದು ತಿಳಿದರೆ ನಿನ್ನಂತಹ ಸ್ವಾರ್ಥಿಗಳು ಮತ್ತೆ ಬೇರಿನ್ನಾರು ? ಆತ್ಮಸಾಕ್ಷಾತ್ಕಾರದ ತರುವಾಯ ನೀನು ಮಾಡಬೇಕಾಗಿದ್ದುದು ನಿಜವಾಗಿಯೂ ಅತ್ಯಂತ ಮಹತ್ವದ್ದು. ನಿನ್ನಂತೆಯೇ ಈ ಲೋಕದಲ್ಲಿ ಆತ್ಮಸಾಕ್ಷಾತ್ಕಾರಕ್ಕಾಗಿ ಬಳಲುತ್ತಿರುವ ಅದೆಷ್ಟೋ ಸಾವಿರಾರು ಜನರುಂಟು. ಅವರ ಉದ್ಧಾರವನ್ನು ನೀನು ಮಾಡಬೇಕಾಗಿದೆ. ಆತ್ಮಸಾಕ್ಷಾತ್ಕಾರದಿಂದ ಆತ್ಮಕಲ್ಯಾಣವನ್ನು ಸಾಧಿಸುವುದು ಮುಂದಿರುವ ಮಹಾಕಾರ್ಯಕ್ಕೆ ಅವಶ್ಯವಾಗಿ ಬೇಕಾದ ಒಂದು ಸಾಧನವು ಮಾತ್ರ. ನೀನು ಆತ್ಮಕಲ್ಯಾಣವನ್ನು ಸಾಧಿಸಿದಂತೆಯೇ ಲೋಕಕಲ್ಯಾಣವನ್ನು ಸಾಧಿಸಬೇಕಾಗಿದೆ. ಅದುವೇ ನಿನ್ನ ಸಾಧನದ ಆತ್ಯಂತಿಕ ಗುರಿಯಾಗಿದೆ. ಆದುದರಿಂದ Come down to the earth-plane. ಈ ಕರ್ಮಭೂಮಿಗೆ ಪುನಃ ಬಾ. ಬಂದು ಈ ಮಹತ್ಕಾರ್ಯವನ್ನೆಸಗು. ಈ ರೀತಿ ಕಠೋಪನಿಷತ್ತು ಬುದ್ಧನ ಮೇಲೆ ಗಂಭೀರವಾದ ಮತ್ತು ಮಹುಳಿಸದ ಪರಿಣಾಮವನ್ನು ಉಂಟುಮಾಡಿದೆ ಎಂಬುದನ್ನು ಅರಿಯಬಹುದು.

ಮತ್ತೆ ಬುದ್ಧನು ಹೀಗೆ ಹೇಳುತ್ತಾನೆ: ಧರ್ಮಚಕ್ರದಿಂದ ಕೂಡಿದ ರಥವು ವಕ್ರವಾಗಿ ಹೋಗದು. ಈ ರಥದ ಗಮನವನ್ನು ಕ್ರಮಗೊಳಿಸುವಂತಹ ಸಾಧನೆಯು ಲಜ್ಜೆಯಾಗಿದೆ. ಒಳಗಿರುವದನ್ನು ಬೀಳದಂತೆ ರಕ್ಷಿಸುವ ಆವರಣವೇ ಸತ್ಯವಾಗಿದೆ. ಧರ್ಮವನ್ನು ನಾನು ಸಾರಥಿಯೆಂದು ಹೇಳುತ್ತೇನೆ. ಸಮ್ಯಗ್‌ದೃಷ್ಟಿಯೇ ಮುಂದೆ ವೇಗವಾಗಿ ಓಡುವ ಕುದುರೆಗಳು. ಸ್ತ್ರೀಯಾಗಲಿ, ಪುರುಷನಾಗಲಿ, ಯಾರಿಗೆ ಈ ರೀತಿಯ ಯಾನವಿರುವದೋ ಅವರೇ ಈ ಯಾನದ ಸಹಾಯದಿಂದ ನಿರ್ವಾಣದ ಸಮೀಪಕ್ಕೆ ಹೋಗುವರು.' ಇಲ್ಲಿ ಬುದ್ಧನು ಪುನಃ ಧರ್ಮದ ಸ್ವರೂಪವನ್ನೇ ನಮಗೆ ತೋರಿಸಿಕೊಡುತ್ತಾನೆ. ಧರ್ಮವೆಂತಹುದು ? ಅದು ಸಾರಥಿಯಂತಿದೆ ಅರ್ಥಾತ್ ಅದುವೇ ಮಾನವನ ತಾರಕ ಗುರುವಾಗಿದೆ. ಅವನನ್ನು ಭವಸಾಗರದಿಂದ ಪಾರು ಮಾಡುವ ನಿಪುಣ ನಾವಿಕನಂತಿದೆ. ಈ ಎಲ್ಲ ವಿವೇಚನೆಯಿಂದ ಧರ್ಮವೆಂದರೇನು ? ಎಂಬುದು ಸರ್ವಾಂಗೀಣವಾಗಿ ಸ್ಪಷ್ಟವಾಗುವದಿಲ್ಲವೆ ?

ಇನ್ನುಳಿದುದು 'ಚಕ್ರ'! ಚಕ್ರದ ವಿವೇಚನೆಯು ನಿಜವಾಗಿಯೂ ಚಕ್ರದಲ್ಲಿ ಕೆಡುವುವಂತಹದೇ ಆಗಿದೆ. ಈ 'ಚಕ್ರ' ಎಂಬ ಶಬ್ದವು ಹತ್ತಾರು ಅರ್ಥಗಳಲ್ಲಿ ರೂಢಿಯಲ್ಲಿದೆ. ಮತ್ತು ಅದು ಬಹಳ ವ್ಯಾಪಕವಾದ ಅರ್ಥವುಳ್ಳುದಾಗಿದೆ; ಅನೇಕ ಭಾವನಹಚರ್ಯೆಗಳನ್ನೂ ಹೊಂದಿದೆ. ಕುಲಾಲ ಚಕ್ರ, ರಥ ಚಕ್ರ, ಕಾಲಚಕ್ರ, ಭಾಗ್ಯಚಕ್ರ, ಷಟ್‌ಚಕ್ರ, ಅಶೋಕಚಕ್ರ, ಗೀತೆಯಲ್ಲಿಯ ಯಜ್ಞಚಕ್ರ, ವಿಶ್ವಚಕ್ರ, ಸುದರ್ಶನ ಚಕ್ರ, ಯೋಗಿಗಳ ಕುಂಡಲಿನೀಚಕ್ರ, ಧರ್ಮಚಕ್ರ— ಹೀಗೆ ಚಕ್ರವು ಹಲವು ಬಗೆಯಾಗಿದೆ. 'ಧರ್ಮಚಕ್ರ'ವನ್ನು ನೋಡುವ ಮೊದಲು ಕೆಲವು ಚಕ್ರಗಳನ್ನು ಮಾದರಿಗಾಗಿ ನೋಡುವಾ. ಅವುಗಳಲ್ಲಿ ಮೊದಲನೆಯದಾಗಿ ನಾವು ಅಶೋಕ ಚಕ್ರವನ್ನು ತೆಗೆದುಕೊಳ್ಳೋಣ.

ಅಶೋಕಚಕ್ರ: ಈ ಅಶೋಕಚಕ್ರವು ನಮ್ಮ ರಾಷ್ಟ್ರಧ್ವಜದಲ್ಲಿ ಕಂಡುಬರುತ್ತದೆ. ಅದು ನಮ್ಮ ರಾಷ್ಟ್ರೀಯ ಚಿನ್ಹವಾಗಿದೆ. ಅಶೋಕನು ಬುದ್ಧನ ಅನುಯಾಯಿ. ಅವನಿಗೆ ಇದ್ದಿರಬಹುದಾದ— ಅದೇಕೆ? ಇರಬೇಕಾದ —ಚಕ್ರವು 'ಬುದ್ಧನ ಚಕ್ರ'ವೇ ಆಗಿರಬೇಕು. ಅವನ್ನೊಪ್ಪಿಕೊಂಡರೆ ಬುದ್ಧನ ಚಕ್ರವು ಸೃಷ್ಟಿಯ ಹುಟ್ಟು–ಕೊನೆಗಳಿಗೆ ಕಾರಣವಾದ ಹನ್ನೆರಡು ನಿಧಾನಗಳ ಪ್ರತೀಕವಾಗಿದೆ. ಅಂದರೆ ಬುದ್ಧನ ಚಕ್ರವು ಕಾರ್ಯ–ಕಾರಣಗಳ ಪರಂಪರೆಯನ್ನು ತೋರಿಸುವಂತಹದಾಗಿದೆ. ಈ ಅರ್ಥದಲ್ಲಿ ಇಂದು ನಾವು ನಮ್ಮ ರಾಷ್ಟ್ರಧ್ವಜದ ಮೇಲಿರುವ ಚಕ್ರವನ್ನು ಅರಿತುಕೊಳ್ಳುವದಿಲ್ಲ, ಹಾಗಾದರೆ, ಅಶೋಕಚಕ್ರವೆಂದರೆ ನಿಜವಾಗಿಯೂ ಏನು? 'ಅಶೋಕ' ಎಂದರೆ ಶೋಕರಹಿತ ಎಂದು ಅರ್ಥವಾಗುತ್ತದೆ. ಇದರಿಂದ 'ಅಶೋಕಚಕ್ರ'ವೆಂದರೆ ಶೋಕರಹಿತ ಚಕ್ರವೆಂದು ಅರ್ಥವಾಯಿತು. ನಮ್ಮಲ್ಲಿ ಜ್ಞಾನದೃಷ್ಟಿಯು ಅರಳುತ್ತ ಹೋದಂತೆ, ನಮ್ಮ ಎಡೆವಿಡದ ಆತ್ಮಾನುಸಂಧಾನವು ಪರಿಪಕ್ವಗೊಳ್ಳುತ್ತ ಸಾಗಿದಂತೆ ನಮ್ಮಲ್ಲಿ, ನಿಜಗುಣರು ಹೇಳುವಂತೆ, 'ಶೋಕನಿವೃತ್ತಿ' ಎಂಬೊಂದು ಅವಸ್ಥೆಯು ಪ್ರಾಪ್ತವಾಗುತ್ತದೆ. 'ಎಲ್ಲರೊಳು ತಾನು, ತನ್ನೊಳಗೆಲ್ಲರು' ಎಂಬ ಅಭೇದ ದೃಷ್ಟಿಯಿಂದ ಶೋಕರಹಿತ ಸ್ಥಿತಿಯು ಸಿದ್ಧಿಸುತ್ತದೆ. ಇದೇ ಮಾತನ್ನು ಈಶೋಪನಿಷತ್ತು ಹೀಗೆ ಹೇಳುತ್ತದೆ:

ಯಸ್ಮಿನ್ ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ ।
ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥

ಜ್ಞಾನಿಯಾದವನಿಗೆ ಸರ್ವಾತ್ಮಕ ದೃಷ್ಟಿಯು ಸಾಧಿಸುತ್ತದೆ. ಆಗ ಅವನಿಗೆ ಎಲ್ಲದರಲ್ಲೂ ಏಕತ್ವವು ಕಾಣುವದು. ಅಂತಹ ಅವನಿಗೆ ಅದಾವ ಮೋಹವು, ಅದಾವ ಶೋಕವು ಇರಲಿಕ್ಕೆ ಶಕ್ಯವಿದೆ? ಹೀಗೆ ಇಂತಹದೊಂದು ಅಭೇದ ದೃಷ್ಟಿಯನ್ನು ಸಾಧಿಸಿದವನಿಗೆ ಸರ್ವಸಮಾನ ಭಾವ, ಅಶೋಕವೃತ್ತಿಗಳು ಸಾಧಿಸುತ್ತವೆ. ಇದುವೇ ರಾಷ್ಟ್ರದ ಹೆಗ್ಗುರುತಾಗಿರುವವರ ಜೊತೆಗೆ ಹೆಗ್ಗುರಿಯೂ ಆಗಿದೆ. ಇಂತಹ ಅಭೇದ ದೃಷ್ಟಿಯು ಕೇವಲ ಜ್ಞಾನತೃಷೆಯಿಂದಲೇ ಸಾಧ್ಯ-ವೆಂದು ಗ್ರಹಿಸುವದು ತಪ್ಪು. ಭಕ್ತಿದೃಷ್ಟಿಯಿಂದಲೂ ಇದು ಸಾಧ್ಯವಿದೆ. ಆತ್ಮನು ಪರಮಾತ್ಮನಲ್ಲಿ ಸಮರಸವಾಗುವದೇ ಭಕ್ತನ ಅಂತಿಮ ಗುರಿಯಲ್ಲವೆ? ಹೀಗೆ ಅಶೋಕಚಕ್ರವು ಭಾರತದ ಆತ್ಯಂತಿಕ ಹಾಗೂ ಉದಾತ್ತ ರಾಷ್ಟ್ರವಾಗ-ಬೇಕೆಂಬ ಹಂಬಲದ ಚಿನ್ಹವಾಗಿದೆ.

ಯಜ್ಞಚಕ್ರ : ಗೀತೆಯಲ್ಲಿಯೂ ಒಂದು ವಿಶಿಷ್ಟವಾದ ಚಕ್ರದ ವಿವರಣೆಯು ಬರುತ್ತದೆ. ಅದಕ್ಕೆ 'ಯಜ್ಞಚಕ್ರ'ವೆಂದು ನಾವು ಹೆಸರಿಡಬಹುದು. ಈ ಮಾತು ಕೆಳಗಿನ ಶ್ಲೋಕಗಳನ್ನು ಮನವಿಟ್ಟು ನೋಡಿದರೆ ತಿಳಿಯದಿರಲಾರದು :

> ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
> ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥
>
> ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ ।
> ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ ॥

ಅನ್ನದಿಂದ ಸರ್ವ ಭೂತಗಳು ಜನಿಸುತ್ತವೆ; ಅನ್ನವು ಮಳೆಯಿಂದ ಹುಟ್ಟುತ್ತದೆ; ಮಳೆಯು ಯಜ್ಞದಿಂದ ಆಗುತ್ತದೆ; ಯಜ್ಞವು ಕರ್ತವ್ಯಕರ್ಮಗಳನ್ನು ಗೈಯ್ಯು-ವದರಿಂದಾಗುತ್ತದೆ, ಕರ್ಮವು ಬ್ರಹ್ಮನಿಂದಲೇ ಹುಟ್ಟುತ್ತದೆ; ಬ್ರಹ್ಮನು ಅಕ್ಷರ ದಿಂದ ಉದ್ಭವವಾಗುತ್ತಾನೆ. ಆದುದರಿಂದ ಬ್ರಹ್ಮನು ಸರ್ವಾತ್ಮಕನಾಗಿಯೂ ನಿತ್ಯ ಯಜ್ಞದಲ್ಲಿ ಪ್ರತಿಷ್ಠಿತನಾಗಿಯೂ ಇದ್ದಾನೆಂದು ತಿಳಿ. ಯಜ್ಞವೆಂದರೆ ಸಾಮಾನ್ಯವಾಗಿ ಆಹುತಿ ಎಂದು ಅರ್ಥವಾಗುತ್ತದೆ. ಆದರೆ ಇದು ತೀರ ಸ್ಥೂಲ ವಾದ ಅರ್ಥವಾಗಿದೆ. ಹೀನವಾದುದನ್ನು ಶ್ರೇಷ್ಠವಾದುದರ ಸಲುವಾಗಿ, ಕನಿಷ್ಠ-ವಾದುದನ್ನು ಉತ್ಕೃಷ್ಟವಾದುದರ ಸಲುವಾಗಿ, ತುಚ್ಛ ಇಲ್ಲವೆ ನೀಚವಾದು-ದನ್ನು ಉಚ್ಚವಾದುದರ ಸಲುವಾಗಿ ತ್ಯಾಗ ಮಾಡುವದೇ ಯಜ್ಞದ ನಿಜವಾದ

ಅರ್ಥ. ವಿಷಯಾನಂದವನ್ನು ಕಾವ್ಯಾನಂದಕ್ಕಾಗಿ ತ್ಯಾಗ ಮಾಡಿದರೆ ಅದು ಯಜ್ಞ; ಕೀರ್ತಿವಾರ್ತೆಗಳನ್ನು ಆಧ್ಯಾತ್ಮಿಕ ಅನುಭವಕ್ಕಾಗಿ ತ್ಯಾಗ ಮಾಡುವದು ಯಜ್ಞ. ಹೀಗೆ ವ್ಯಾಪಕವಾದ ಅರ್ಥದಲ್ಲಿ ಯಜ್ಞವನ್ನು ತೆಗೆದುಕೊಂಡಾಗ ಸೃಷ್ಟಿಯಲ್ಲಿಯ ಸರ್ವವೂ ಯಜ್ಞದಲ್ಲಿಯೇ ಕೊನೆಗೊಳ್ಳುತ್ತದೆ. ಆದುದರಿಂದ ಇದು ಯಜ್ಞಚಕ್ರವೆಂದು ಪ್ರಸಿದ್ಧವಿದೆ.

ಸುದರ್ಶನ ಚಕ್ರ : 'ಸು–ದರ್ಶನ'—ದಲ್ಲಿಯ 'ಸು' ಎಂದರೆ ಒಳ್ಳೆಯದು, 'ದರ್ಶನ' ವೆಂದರೆ ಕಾಣುವದು. ಪ್ರತಿಯೊಬ್ಬನೂ ತನ್ನ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಂಡ ಮೇಲೆ ಅದನ್ನೇ ಸರ್ವರಲ್ಲೂ ಕಾಣಹತ್ತುತ್ತಾನೆ. ಅವನಿಗೆ ಎಲ್ಲದರಲ್ಲೂ ಒಳ್ಳೆಯದರ ದರ್ಶನವಾಗುತ್ತದೆ. ಹೀಗೆ ಕಾಣುವದೇ ಸುದರ್ಶನ. ಇದು ಸುದರ್ಶನಚಕ್ರದ ಅರ್ಥವು.

ಇದೇ ರೀತಿಯಾಗಿ ನಾವು ಬೇರೆ ಬೇರೆ ಚಕ್ರಗಳನ್ನು ವಿವರಿಸುತ್ತ ಹೋಗಬಹುದು. ಚಕ್ರದ ವಿಧ ವಿಧವಾದ ಭೌತಸಹಚರ್ಯೆಯನ್ನೂ, ಅದರ ಉಪಯುಕ್ತತೆಯನ್ನೂ ನಾವು ಬಹುರೀತಿಯಾಗಿ ಹೇಳಬಹುದು. ಆದರೆ, ಅದೆಲ್ಲವೂ ನಮಗೀಗ ಅಪ್ರಸ್ತುತ. ಈಗ ಧರ್ಮಚಕ್ರವೆಂದರೇನು ? ಎಂಬುದನ್ನಷ್ಟು ನೋಡಿದರೆ ಸಾಕು;

ಸತ್ಯವು ಯಾವಾಗಲೂ ಮುಂಡಗಿನ ಆಕಾರದ್ದಾಗಿರುವದು. ಪೂರ್ಣ ಸತ್ಯವನ್ನು, ಪರಾತ್ಪರ ತತ್ವವನ್ನು ನಿರ್ಣಯಿಸುವದಕ್ಕಾಗಿ, ಅದನ್ನು ಕುರುಹಿಟ್ಟು ಹೇಳುವದಕ್ಕಾಗಿ ಅನುಭಾವಿಗಳು ಯಾವಾಗಲೂ ವರ್ತುಲದ ಉದಾಹರಣೆಯನ್ನೇ ಕೊಡುತ್ತ ಬಂದಿದ್ದಾರೆ. ಸತ್ಯವು ಹೇಗಿದೆ ? – ಎಂದು ಕೇಳಿದರೆ ಅದು ವರ್ತುಲಾಕಾರವಾಗಿದೆಯೆಂದು ಸಾಕಾರ ರೂಪದಿಂದ ಹೇಳಬಹುದು. ಇದನ್ನೇ ಯೋಗಿಗಳು ಕುಂಡಲಾಕಾರವಾಗಿದೆ ಎಂದು ಹೇಳುತ್ತಾರೆ. ಕುಂಡಲಾಕಾರವಾಗಿದೆಯೆಂದರೂ ವರ್ತುಲಾಕಾರವಾಗಿದೆಯೆಂದೇ ಅರ್ಥವಾಗುತ್ತದೆ. ಅವರು ಈ ಸಂದರ್ಭದಲ್ಲಿ ಸರ್ಪದ ದೃಷ್ಟಾಂತವನ್ನು ಕೊಡುತ್ತಾರೆ. ಸರ್ಪವು ಕುಂಡಲಾಕಾರವಾಗಿ ಮಲಗಿಕೊಳ್ಳುತ್ತದೆ. ಅದು ಹಾಗೆ ಮಲಗಿದಾಗ ತನ್ನ ಬಾಲವನ್ನು ಬಾಯಿಯಲ್ಲಿಟ್ಟುಕೊಂಡು ಮಲಗಿರುತ್ತದೆ. ಹಾಗೆಯೇ ಆತ್ಯಂತಿಕ ಸತ್ಯದಲ್ಲಿ ಆದಿ–ಅಂತ್ಯಗಳೆರಡು ಒಂದುಗೂಡುವವು. ಯಾವುದರಲ್ಲಿ ಆದಿ–ಅಂತ್ಯಗಳೆರಡೂ ಒಂದುಗೂಡುವವೋ ಅದು ವರ್ತುಲಾಕಾರವಾಗಿರಲೇ ಬೇಕು.

ಅದೇ ಪ್ರಕಾರ ಧರ್ಮದಲ್ಲಿ ಆತ್ಮ–ಪರಮಾತ್ಮಗಳೆರಡೂ ಒಂದಾಗುವವು. ಆತ್ಮ–ಪರಮಾತ್ಮ ಎಂಬ ದ್ವೈತವನೊಪ್ಪದವರು ಆತ್ಮನು ಸರ್ವವ್ಯಾಪಿಯಾಗಿ ಎಲ್ಲದರಲ್ಲೂ ಅಂತರ್ಗತನಾಗಿರುವನೆಂದು ಹೇಳಲಿ, ತಪ್ಪಿಲ್ಲ, ಇಂತು ಆತ್ಮನ ಸರ್ವ-ವ್ಯಾಪಕತ್ವದ ಅನುಭವವನ್ನು ವರ್ತನದಿಂದಲೇ ನಿರ್ದೇಶಿಸಬೇಕು. ಅದನ್ನು ಬಿಟ್ಟು ಗತಿಯೇನು? ಈ ಸತ್ಯವಾದ ಮಾತಿನ ಇತ್ಯರ್ಥವನ್ನು ಹೀಗೆ ಹೇಳ-ಬಹುದು: ನಾವು ಆಡಿದ ಒಂದು ನುಡಿಯು ತನ್ನ ಸ್ವಭಾವಕ್ಕನುಗುಣವಾದ ಪರಿಣಾಮವನ್ನು ಇನ್ನೊಬ್ಬರ ಮೇಲೆ ಮಾಡುತ್ತದೆ. ಅದರ ಪರಿಣಾಮವು ಸೂಕ್ಷ್ಮವಾಗಿದ್ದುಕೊಂಡು ತಿರುಗಿ ನಮಗೇ ಆಗುತ್ತದೆ. ನಮ್ಮ ನಮ್ಮ ಅನು-ಭವಗಳನ್ನು ವಿಭಜಿಸಿ ನೋಡಿದರೆ ಈ ಸತ್ಯವು ತನ್ನ ತಾನೇ ಹೊಳೆಯುವದು. ಅನ್ಯರನ್ನು ದ್ವೇಷ ಮಾಡುವವರಲ್ಲಿ ನಾನು ನನ್ನನ್ನೇ ದ್ವೇಷಿಸಿಕೊಳ್ಳುತ್ತೇನೆ; ಅನ್ಯರನ್ನು ಪ್ರೀತಿಸುವದರಲ್ಲಿ ನಾನು ನನ್ನನ್ನೇ ಪ್ರೀತಿಸುತ್ತೇನೆ. ಇಲ್ಲಿ ಅಹಂಭಾವದ ಅಣುತ್ವವು ಅಳಿದು ಆತ್ಮಭಾವದ ವಿಭುತ್ವವು ಉಳಿಯುವದು. ಘನ ಗಂಭೀರವಾದ ವಿಭುತ್ವವು ಬೆಳೆದು ಘನಕ್ಕೆ ಘನವಾಗುವದು:

ಘನ ಗಂಭೀರ ಮಹಾಘನಮೊಳಗಣ ಘನಕ್ಕೆ ಘನವಾಗಿರ್ದೆನಯ್ಯಾ
ಕೂಡಲ ಸಂಗಮದೇವನೆಂಬ ಬೆಳಗಿನೊಳಗೆ ಬೆಳಗಾಗಿರ್ದು
ಶಬ್ದಮುಗ್ಧವಾದುದನೇನೆಂಬೆನಯ್ಯಾ, ಎಂತೆಂಬೆನಯ್ಯಾ?

ಎಂದು ಬಸವಣ್ಣನವರು ಆ ನಿಲುವನ್ನು ಬಹು ಸುಂದರವಾಗಿ ಈ ವಚನದಲ್ಲಿ ವರ್ಣಿಸಿದ್ದಾರೆ. ಆ ಅವಸ್ಥೆಯಲ್ಲಿದ್ದಾಗ 'ಶಬ್ದಮುಗ್ಧ' ಸ್ಥಿತಿಯು ಪ್ರಾಪ್ತ-ವಾಗುತ್ತದೆ. ಇಲ್ಲಿ ಶಬ್ದಗಳ ಆಟವು ನಡೆಯದು. ಇಂಥ ಆದಿ–ಅಂತ್ಯಗಳೆರಡು, ಕುಡಿ–ಕಡೆಗಳೆರಡು ಒಡವೆರೆದು ಒಂದುಗೂಡುವ ಆ ಆತ್ಯಂತಿಕ ಸತ್ಯದ ನಿಲವನ್ನು ಇನ್ನು ಬೇರೆ ಶಬ್ದಗಳಲ್ಲಿ ಹೇಳಬೇಕೆ? ಪರಮತ ಸಹಿಷ್ಣುತೆಗಿಂತ ಹೆಚ್ಚಿನ ಸಾಧುತ್ವವಿಲ್ಲ. ಲೋಕಹಿತಕ್ಕಿಂತ ಹೆಚ್ಚಿನ ಕಾರ್ಯವಿಲ್ಲ. ಪ್ರೇಮದಿಂದ ಸಾಧಿಸುವ ವಿಷಯಕ್ಕಿಂತ ಮೀರಿದ ವಿಷಯವಿಲ್ಲ. ಇದೇ ಧರ್ಮಚಕ್ರದ ವರ್ಮ, ಕಾಲಚಕ್ರದ ಮರ್ಮ.

# ‘ ವ್ರೂ–ಫಾ ’

‘ವ್ರೂ–ಫಾ’ ಇದು ಕನ್ನಡ ಶಬ್ದವಲ್ಲ. ಹಾಗೆಯೇ ಇದು ಒಂದೇ ಶಬ್ದವೂ ಅಲ್ಲ. ಇದು ಒಂದು ಸಂಯುಕ್ತ ಶಬ್ದವಾಗಿದೆ. ‘ವ್ರೂ’ ಹಾಗು ‘ಫಾ’ ಇವೆ-ರಡೂ ಶಬ್ದಗಳು ಚೀನೀ ಭಾಷೆಗೆ ಸಂಬಂಧಪಟ್ಟವುಗಳು. ಚೀನೀ ಭಾಷೆಯಲ್ಲಿ ‘ವ್ರೂ’ ಎಂದರೆ ‘ ಪ್ರಜ್ಞಾ ’ ಅಥವಾ ‘ ಬೋಧಿ ’ ಎಂಬರ್ಥವಾಗುತ್ತದೆ. ‘ ಫಾ ’ ಇಲ್ಲವೆ ‘ಫಾಂಗ್’ ಎಂದರೆ ಉಪಾಯ ಎಂಬ ಅರ್ಥವಾಗುವದು. ಆದ್ದರಿಂದ ‘ವ್ರೂ–ಫಾ’ ಎಂಬುದಕ್ಕೆ ‘ ಪ್ರಜ್ಞೆ ’ ಹಾಗು ‘ ಉಪಾಯ ’ ಎಂದು ಅರ್ಥವಾಗು-ತ್ತದೆ. ಬೌದ್ಧಮತದ ಸಾರವನ್ನು, ಅದರ ಸಿದ್ಧಾಂತ ಹಾಗು ಸಾಧನೆಗಳ ತಿರುಳನ್ನು ‘ವ್ರೂ–ಫಾ’ ಇಲ್ಲವೆ ‘ಪ್ರಜ್ಞಾ ಹಾಗು ಉಪಾಯ’ ಎಂಬೆರಡೇ ಎರಡು ಶಬ್ದಗಳಲ್ಲಿ ಹೇಳಿಬಿಡಬಹುದು. ‘ ಪ್ರಜ್ಞಾ ಹಾಗು ಉಪಾಯ ’ ಇವೆರಡೂ ಸಂಸ್ಕೃತ ಶಬ್ದಗಳೇ. ಬೌದ್ಧಮತವು ಇವೆರಡನ್ನು ಹಿಂದೂ ಧರ್ಮದಿಂದ ತೆಗೆದುಕೊಂಡಿರುವದು. ‘ಪ್ರಜ್ಞಾ’ ಎಂದರೇನು ? ಪ್ರಜ್ಞಾ ಎಂದರೆ ಅರುಹು, ಜ್ಞಾನ, ವಿದ್ಯೆ. ‘ ಪ್ರಜ್ಞಾನಂ ಬ್ರಹ್ಮ ’ ಎಂದು ಉಪನಿಷತ್ತು ಹೇಳುವದು. ‘ ಕರ್ಮಣಾ ಬಧ್ಯತೆ ಜಂತುಃ ವಿದ್ಯಯಾ ತು ಪ್ರಮುಚ್ಯತೆ। ’ ಮಾನವನು ಕರ್ಮದಿಂದ ಬದ್ಧನಾಗುತ್ತಾನೆ. ಆದರೆ ವಿದ್ಯೆಯಿಂದ ಅವನು ಮುಕ್ತನಾಗು-ತ್ತಾನೆ. ‘ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ।’ ಪರಬ್ರಹ್ಮದ ಜ್ಞಾನವಾದ ಬಳಿಕ ಅವನ ಕರ್ಮಗಳೆಲ್ಲ ಕ್ಷಯವಾಗುತ್ತವೆ. ‘ ವಿದ್ಯಯಾಮೃತತ್ವಮಶ್ನುತೇ । ’ ವಿದ್ಯೆಯಿಂದ ಅಮೃತತ್ವವು ದೊರಕುತ್ತದೆ. ಜ್ಞಾನದ ಮಹಿಮೆಯನ್ನು ಹೊಗಳುವ ಇಂತಹ ಅನೇಕ ವಚನಗಳು ಉಪನಿಷತ್ತು ಗಳಲ್ಲಿ ದೊರಕುತ್ತವೆ. ಕನ್ನಡದಲ್ಲಿ ಈ ಜ್ಞಾನಕ್ಕೆ ಅರಿವು ಎಂದು ಕರೆಯುವರು. ಕನ್ನಡ ವಚನಕಾರರು ‘ಅರಿವು’ ಶಬ್ದವನ್ನು ತಮ್ಮ ವಚನಗಳಲ್ಲಿ ಧಾರಾಳವಾಗಿ ಬಳಸಿಕೊಂಡಿರುವರು. ಶ್ರೀ ನಿಜಗುಣ ಶಿವಯೋಗಿಗಳು ತಮ್ಮ ಕೈವಲ್ಯ-ಪದ್ಧತಿಯ ಜ್ಞಾನ ಪ್ರತಿಪಾದನ ಸ್ಥಲವಲ್ಲಿ ಈ ಅರಿವಿನ, ಈ ಜ್ಞಾನದ ಮಹತಿ-ಯನ್ನು ಕುರಿತು ಅತ್ಯಂತ ಮನೋಹರವಾಗಿ ಹಾಡಿಕೊಂಡಿದ್ದಾರೆ. ಅರಿವೆ ಪರಬ್ರಹ್ಮವು, ಅದು ನಿತ್ಯ ನಿರ್ಮಲವಾಗಿರುವದು. ನಿರ್ಗುಣ ನಿರ್ವಿಕಾರ ಕೃತಿ ಯೆಂದರೂ ಅದುವೆ. ಅರಿವಿಲ್ಲದುದು ಜಡವೆನಿಸಿಕೊಳ್ಳುವದು. ಅರಿವು ಆನಂದ

ಸ್ವರೂಪವು, ಸ್ವಯಂಜ್ಯೋತಿ. ಅರಿವಿನಲ್ಲಿ ಮರೆವು ಎಂದೂ ಪ್ರವೇಶಿಸದು. ವಿಶ್ವಕ್ಕೆಲ್ಲ ಆಶ್ರಯವಾದುದೂ ಅರಿವೇ. ಅದು ಸಕಲ ಶಾಸ್ತ್ರಮತವೂ ಜ್ಞಾತೃ ಜ್ಞಾನ ಜ್ಞೇಯವೆಂಬ ತ್ರಿಪುಟಿಗೆ ಆದಿಯೂ ಆಗಿರುತ್ತವೆ. ಕಣ್ಣುಗಳಿಗೆ ಕುರುಹಾಗಿರುವದೂ, ಸತ್ಕ್ರಿಯೆಗಳಿಗೆ ಪ್ರಾಣವಾಗಿರುವದೂ ಅರಿವು. ಅರಿವು ಅಥವಾ ಜ್ಞಾನವು ಶ್ರೇಷ್ಠವಾಗಿರುತಿಹ ಮೋಕ್ಷದ ಯಥಾರ್ಥ ಸ್ಥಿತಿಯು. ತಾನು ಮತ್ತು ಪರವಸ್ತು ಎಲ್ಲವೂ ಅರಿವಿನ ಸ್ವರೂಪವು. ಅರಿವಿನಲ್ಲಿ ಅನ್ಯ ಕಲ್ಪನೆಗಳೇ ಇಲ್ಲ. —ಎಂದು ಆ ಶ್ರೀ ನಿಜಗುಣ ಶಿವಯೋಗಿಗಳು ಅರಿವನ್ನು ವಿವಿಧ ರೀತಿಯಿಂದ ವಿವರಿಸಿರುವರು. ಇಂತಹ ಅರಿವನ್ನು ಅಂಗಕ್ಕಳವಡಿಸಿಕೊಂಡವನೇ ಅರಿವಿನ ಮಹಂತನು. ಇಂತಹ ಬೋಧಿಯನ್ನು ಬಲಗೊಂಡವನೇ ಬುದ್ಧನು. ಇಂತಹ ಜ್ಞಾನವನ್ನು ಸಾಕ್ಷಾತ್ಕರಿಸಿಕೊಂಡವನೇ ಅಪರೋಕ್ಷಜ್ಞಾನಿಯು.

ಅರುಹು ಅಂಗಕ್ಕಳವಡಬೇಕಾದರೆ ಉಪಾಯವೇನು? ಆದಾವ ಉಪಾಯದಿಂದ ಪ್ರಜ್ಞೆಯು ಪ್ರಾಣಗತವಾಗುವದು, ಅರುಹು ಕರಗತವಾಗುವದು? ಉಪಾಯವೆಂದರೆ ಮಾರ್ಗ, ನಿಷ್ಠೆ, ಯೋಗ. ಬೌದ್ಧ ಗ್ರಂಥಗಳಲ್ಲಿ ಯೋಗವೆಂಬ ಶಬ್ದವು ಉಪಾಯವೆಂಬ ಅರ್ಥದಲ್ಲಿ ಬಳಕೆಯಲ್ಲಿದೆ. 'ಮಿಲಿಂದ ಪ್ರಶ್ನೆ' ಎಂಬ ಪಾಲೀ ಗ್ರಂಥದಲ್ಲಿ (ಕ್ರಿ. ಪೂ. ೨೦೦) 'ಪುಬ್ಬಯೋಗ' ಎಂಬ ಶಬ್ದ ಪ್ರಯೋಗವು ಬಂದಿದ್ದು ಅದಕ್ಕೆ ಪೂರ್ವಕರ್ಮವೆಂದು ಅರ್ಥ ಮಾಡಲಾಗಿದೆ. ಪೂರ್ವಯೋಗ (ಪುಬ್ಬಯೋಗ) – ಉತ್ತರಯೋಗ, ಪ್ರವೃತ್ತಿ ಮಾರ್ಗ–ನಿವೃತ್ತಿಮಾರ್ಗ, ಕರ್ಮನಿಷ್ಠೆ–ಸನ್ಯಾಸನಿಷ್ಠೆ ಮುಂತಾದ ಪದಪ್ರಯೋಗಗಳು ರೂಢಿಯಲ್ಲಿ ಇರುತ್ತವೆ. ಈ ಉಪಾಯ ಇಲ್ಲವೆ ಮಾರ್ಗವೇ 'ಯಾನ' ಪದದಿಂದ ಸೂಚಿತವಾಗಿ ಬೌದ್ಧರಲ್ಲಿ ಪ್ರಚಾರದಲ್ಲಿದೆ. ಹಿಂದುಗಳ ಪ್ರವೃತ್ತಿ ನಿವೃತ್ತಿ ಮಾರ್ಗಗಳು ಬೌದ್ಧಮತದಲ್ಲಿ ಹೀನಯಾನ, ಮಹಾಯಾನ ಪಂಗಡಗಳಾಗಿ ಪರಿಣಮಿಸಿದವು.

'ವೃತ್ತಿ'ಯೆಂದರೇನು? 'ವೃತ್ತಿಸಾರೂಪ್ಯಮಿತರತ್ರ' ಎಂದು ಪಾತಂಜಲೀ ಯೋಗಸೂತ್ರದಲ್ಲಿ ಹೇಳಿದೆ. ದೃಷ್ಟಾ–ದೃಶ್ಯಗಳ, ಜ್ಞಾತಾ–ಜ್ಞೇಯಗಳ ಸಂಬಂಧವೇ ವೃತ್ತಿ. ದೃಷ್ಟಾ, ತಾನು ದೃಶ್ಯದ ಸಂಬಂಧದಲ್ಲಿ ಬಂದಾಗ, ಅದರೊಡನೆ ತಾದಾತ್ಮ್ಯವನ್ನು ತಳೆಯುತ್ತಾನೆ. ಹೀಗೆ ಪುರುಷನು ಪ್ರಕೃತಿಯೊಡನೆ ಸಂಬಂಧವನ್ನು ತಳೆಯುವದೇ ವೃತ್ತಿಯಾಗಿದೆ. ನಿಜವಾಗಿಯೂ

ಪುರುಷನು ನಿರ್ವಿಕಾರಿಯಾಗಿದ್ದಾನೆ. ಆದರೆ ವಿಕಾರಮಯೀ ಪ್ರಕೃತಿಯೊಡನೆ ತಾದಾತ್ಮ್ಯವನ್ನು ಹೊಂದಿದಾಗ ತಾನೂ ವಿಕಾರವಶನಾದಂತೆ ಕಾಣುತ್ತಾನೆ. ಒಬ್ಬ ಬಡವನಿರುವನೆಂದು ಭಾವಿಸಿರಿ. ಅವನು ರಾಜನ ಪಾತ್ರವನ್ನು ಧರಿಸಿ ರಂಗಭೂಮಿಯ ಮೇಲೆ ಬಂದಾಗ ಅವನ ಬುದ್ಧಿಯು ಸಂಪೂರ್ಣವಾಗಿ ಆ ರಾಜನ ಪಾತ್ರದೊಡನೆ ತಾದಾತ್ಮ್ಯವನ್ನು ಹೊಂದುತ್ತದೆ. ಆಗ ಅವನ ವೃತ್ತಿಯು ರಾಜನ ವೃತ್ತಿಯೇ ಆಗುತ್ತದೆ. ಇದು ವೃತ್ತಿಯ ನಿಜವಾದ ಅರ್ಥವು. ನಾವು 'ಪ್ರವೃತ್ತಿ' ಹಾಗು 'ನಿವೃತ್ತಿ' ಎಂಬೆರಡು ಶಬ್ದಗಳನ್ನು ಕುರಿತು ಆಲೋಚಿಸಿದರೆ ಇವೆರಡರಲ್ಲಿ 'ವೃತ್ತಿ'ಯೆಂಬುದು ಸಾಮಾನ್ಯ ಶಬ್ದವಾಗಿದೆ. 'ಪ್ರವೃತ್ತಿ'ಯೆಂದರೆ ಸಂಸಾರದಲ್ಲಿದ್ದುಕೊಂಡು ಅನೇಕ ಲೌಕಿಕ ವ್ಯವಹಾರಗಳನ್ನು ಮಾಡುತ್ತ ಸುಖ-ದುಃಖಗಳಿಗೊಳಗಾಗಿರುವದು. 'ನಿವೃತ್ತಿ' ಯೆಂದರೆ ಈ ಸಂಸಾರವು ಸುಳ್ಳೆಂದು ತಿಳಿದು ಇದನ್ನು ತ್ಯಜಿಸಿ ಕೇವಲ ಆ ಪರಬ್ರಹ್ಮದಲ್ಲಿ ಅಂತಃಕರಣಗಳು ನೆಲೆಗೊಳ್ಳುವಂತೆ ಇಲ್ಲವೆ ಕರಗಿಗೊಂಡು ನಿಲ್ಲುವಂತೆ ಮಾಡುವದು. ಯಾವ ವಸ್ತುವನ್ನು ಅರಿತುಕೊಳ್ಳುವದಿದೆಯೋ ಆ ವಸ್ತುವಿನ ಸ್ವರೂಪವನ್ನೇ ತಳೆಯುವದು ಬುದ್ಧಿ. ಹೀಗೆ ಆ ವಸ್ತುವಿನ ಸ್ವರೂಪವನ್ನು ತಳೆಯದೆ ಸ್ವಸ್ವರೂಪದಲ್ಲಿ ತನ್ನ ಸ್ವಭಾವದಲ್ಲಿ ನಿಲುಕಡೆಯನ್ನು ಅವಸ್ಥಾನ-ವನ್ನು ಹೊಂದುವದಕ್ಕೇ ಮುಕ್ತಿಯೆಂದು ಹೆಸರು. ಇದುವೆ ನಿವೃತ್ತಿ. ಸಾಂಖ್ಯರ ಪ್ರಕಾರ ಜ್ಞಾತಾ (ಪುರುಷ) ಹಾಗು ಜ್ಞೇಯ (ಪ್ರಕೃತಿ) ಗಳೆರಡರ ಯೋಗವೇ ಪ್ರವೃತ್ತಿ; ಅವೆರಡರ ವಿಯೋಗವೇ ನಿವೃತ್ತಿ; ಅದುವೆ ಮುಕ್ತಿ; ಅದುವೇ ಕೈವಲ್ಯ. ಆದರೆ ಆಗಮಗಳ ಅಭಿಪ್ರಾಯದ ಮೇರೆಗೆ ಇವೆರಡರ ಅರ್ಥವು ಬಹಳ ಸುಂದರ-ವಾಗಿದೆ ಹಾಗು ಸೂಕ್ಷ್ಮವೂ ಆಗಿದೆ. ಆತ್ಮನಿಂದ ಇಲ್ಲವೆ ಶಿವನಿಂದ ಪ್ರಕಟವಾದ ಜಗತ್ತು ಅವನಿಂದ ಅನ್ಯವಲ್ಲೆಂದು ಬಗೆದು ಎಲ್ಲವೂ ಆತನ ಲೀಲೆ, ಶಿವಪ್ರಸಾದ ವೆಂದು ಅರಿತು ಆನಂದದಿಂದ ವ್ಯವಹರಿಸುವದೇ ಪ್ರವೃತ್ತಿ. ಇಲ್ಲಿ ನಿವೃತ್ತಿಯೇ ಸನ್ಯಾಸಯೋಗವಾಯಿತು. ಪ್ರವೃತ್ತಿಯೇ ಕರ್ಮಯೋಗವಾಯಿತು :

ಪ್ರವೃತ್ತಿಲಕ್ಷಣೋ ಯೋಗಃ |
ಜ್ಞಾನಂ ಸನ್ಯಾಸ ಲಕ್ಷಣಂ ||

ಆತ್ಮಜ್ಞಾನವುಂಟಾದ ಬಳಿಕ ಜ್ಞಾನಿಯಾದವನು ಮುಂದೆ ಎರಡು ನಿಷ್ಠೆ ಗಳನ್ನು ಇಲ್ಲವೆ ಮಾರ್ಗಗಳನ್ನು ಅನುಸರಿಸಬಹುದು. ಒಂದನೆಯದು ಸನ್ಯಾಸ

ಅಥವಾ ಸಾಂಖ್ಯ ಮಾರ್ಗ; ಎಂದರೆ, ಜ್ಞಾನೋತ್ತರದಲ್ಲಿ ಜಗತ್ತಿನೊಳಗಿನ ಸರ್ವ ಕರ್ಮಗಳನ್ನು ತ್ಯಜಿಸಿ ವಿರಕ್ತನಾಗುವದು. ಎರಡನೆಯದು, ಯೋಗ ಅಥವಾ ಕರ್ಮಯೋಗ ಮಾರ್ಗ; ಎಂದರೆ ಕರ್ಮವನ್ನು ತ್ಯಜಿಸದೆ ತನ್ನ ಸ್ವರೂಪ ಜ್ಞಾನಕ್ಕೆ ಚ್ಯುತಿ ಬಾರದ ರೀತಿಯಲ್ಲಿ ಯುಕ್ತಿಯಿಂದ ಅವುಗಳನ್ನು ಮಾಡುತ್ತಲೇ ಇರುವದು. ಸನ್ಯಾಸ ಮತ್ತು ತ್ಯಾಗ ಇವುಗಳ ಸಮನ್ವಯವೇ ಆ ಯುಕ್ತಿಯು. ತ್ಯಾಗವೆಂದರೆ ಕರ್ಮಗಳ ತ್ಯಾಗವೆಂದಲ್ಲ; ಫಲಾಪೇಕ್ಷೆಯ ತ್ಯಾಗ ಮಾಡಬೇಕೆಂದು ಅರ್ಥವಾಗುವದು. ಸನ್ಯಾಸವೆಂದರೆ ಸಕಲ ಕರ್ಮಗಳನ್ನು ದೇವನಿಗೆ ಅರ್ಪಿಸು-ವದು. ಮೇಲೆ ಹೇಳಿದಂತೆ ಬೌದ್ಧರಲ್ಲಿಯ ಹೀನಯಾನವು ನಿವೃತ್ತಿಪರವಾದ ಸನ್ಯಾಸ ಮಾರ್ಗವನ್ನೂ, ಮಹಾಯಾನವು ಪ್ರವೃತ್ತಿಪರವಾದ ಕರ್ಮಮಾರ್ಗ-ವನ್ನೂ ಅಂದರೆ ಲೋಕಸಂಗ್ರಹವನ್ನೂ ಬೋಧಿಸುತ್ತವೆ. ಎರಡೂ ಮಾರ್ಗ-ಗಳಲ್ಲಿ ಪ್ರಜ್ಞೆಯು ಅವಶ್ಯವಾಗಿ ಬೇಕಾಗುವದರಿಂದ ಅವನ್ನು ಉಪಾಯದಿಂದ ಎಂದರೆ ಯೋಗದಿಂದ ಹೊಂದಬೇಕಾಗುವದು.

ಉಪನಿಷತ್ತಿನ ದರ್ಶನವನ್ನೇ ಬುದ್ಧನು ಪ್ರಸ್ಥಾಪಿಸಿದನೆಂದು ಹೇಳುವ ವಾಡಿಕೆಯುಂಟು. ಬುದ್ಧನು ಒಂದೆಡೆ ಹೇಳಿರುವ 'ನಗರಸೂತ್ರ' ಎಂಬ ರೂಪಕ ದಲ್ಲಿ ಈ ಮಾತಿಗೆ ಪುಷ್ಟಿಯು ದೊರೆಯುತ್ತದೆ. "ಒಬ್ಬ ಮನುಷ್ಯನು ಒಂದು ಅರಣ್ಯದಲ್ಲಿ ಮಾರ್ಗಕ್ರಮಣ ಮಾಡುತ್ತಿದ್ದಾಗ ಅವನಿಗೆ ಹಳೆಯದಾದೊಂದು ಹಾದಿಯು ಕಾಣಿಸುತ್ತಿದೆ. ಆಗ ಅವನು ಅದನ್ನು ಹಿಡಿದು ಮುಂದೆ ಮುಂದೆ ಸಾಗಲನುವಾಗುವನು. ಆ ಹಾದಿಯಿಂದ ಕೆಲವೊಂದು ದೂರದ ವರೆಗೆ ಸಾಗಿ ಹೋದ ಮೇಲೆ ಅಲ್ಲಿ ಒಂದು ಪುರಾತನ ನಗರವು ಅವನ ಕಣ್ಣಿಗೆ ಕಾಣಿಸುವದು. ಅವನಿಗೆ ಅದಾವುದೋ ಒಂದು ಹಳೆಯ ಕಾಲದ ರಾಜಧಾನಿಯಿರಬೇಕೆಂದು ಭಾನವಾಗುತ್ತದೆ. ಆಗ ಆ ಮನುಷ್ಯನು ತನ್ನ ರಾಜನ ಬಳಿಗೆ ಹೋಗಿ— 'ಪ್ರಭುವೆ, ನಾನು ಇಂತಿಂತಹ ಒಂದು ಕಾಡಿನಲ್ಲಿ ಹೋಗುತ್ತಿರುವಾಗ ಒಂದು ಪುರಾತನ ದಾರಿಯನ್ನು ಕಂಡೆನು. ಅಲ್ಲಿಯೇ ಒಂದು ಹಳೆಯ ರಾಜಧಾನಿ-ಯನ್ನೂ ಕಂಡೆನು. ಆದರೆ ಆ ನಗರವು ಹಾಳು ಬಿದ್ದದ್ದರಿಂದ ತಾವು ಅದರ ಜೀರ್ಣೋದ್ಧಾರವನ್ನು ಮಾಡಬೇಕು' ಎಂದು ಬೇಡಿಕೊಳ್ಳುತ್ತಾನೆ. ರಾಜನು ಆ ನಗರದ ಜೀರ್ಣೋದ್ಧಾರವನ್ನು ಕೈಕೊಳ್ಳುತ್ತಾನೆ. ಅಂದಿನಿಂದ ಆ ನಗರವು ಸಂಪತ್–ಸಮೃದ್ಧವಾಗಿ, ಜನ–ಧನಬಲಗಳಿಂದ ಕೂಡಿ ಮೆರೆಯುತ್ತದೆ. ಅದರ ಹಾಗೆಯೇ ನಾನೂ ಪುರಾತನ ಕಾಲದ ಸಮ್ಯಕ್ ಜ್ಞಾನಿಗಳು ನಡೆದು ಹೋದ

ಹಾದಿಯನ್ನು ಕಂಡಿದ್ದೇನೆ; ಮತ್ತು ಅದೇ ದಾರಿಯನ್ನೇ ನಾನಾದರೂ ತುಳಿಯುತ್ತಿದ್ದೇನೆ. ಅದನ್ನೇ ನಿಮಗೆ ಬೋಧಿಸುತ್ತೇನೆ." ಈ ಸೂತ್ರದಿಂದ ಸಮ್ಯಕ್‌ಜ್ಞಾನಿಗಳ ಬೋಧವೇ ಬುದ್ಧನ ಬೋಧವೆಂದು ವ್ಯಕ್ತವಾಗುತ್ತದೆ. ಇದರಿಂದ ಬುದ್ಧನು ಬೋಧಿಸಿದ ಮಾರ್ಗವು ಜ್ಞಾನಮಾರ್ಗವೆಂದ ಹಾಗಾಯಿತು. ಉಪನಿಷತ್ತುಗಳೂ ಜ್ಞಾನಮಾರ್ಗವನ್ನೇ ಬೋಧಿಸುತ್ತವೆ. ಐತಿಹಾಸಿಕ ದೃಷ್ಟಿಯಿಂದ ಪ್ರಾಚೀನವಾದ ದಶೋಪನಿಷತ್ತುಗಳು ಬುದ್ಧನಿಗಿಂತ ಪೂರ್ವದವೆಂದು ಈಗಾಗಲೇ ಸಿದ್ಧವಾದ ಮಾತಾಗಿದೆ. ಛಾಂದೋಗ್ಯ ಹಾಗು ಬೃಹದಾರಣ್ಯಕೋಪನಿಷತ್ತುಗಳೆರಡೂ ಬುದ್ಧನಿಗಿಂತಲೂ ೫೦೦ ವರುಷಗಳಷ್ಟು ಹಿಂದಿನವಾಗಿವೆ. ವೇದಕಾಲದ ಯಜ್ಞಮಾರ್ಗವನ್ನೂ ಹಾಗು ಕರ್ಮಕಾಂಡವನ್ನೂ ಖಂಡಿಸಿ ಈ ಉಪನಿಷತ್ತುಗಳು ಜ್ಞಾನಮಾರ್ಗವನ್ನು ಬೋಧಿಸಿದವು. 'ಇಂದ್ರ ವರುಣ ಅಗ್ನಿ ಯಮ ಮುಂತಾದ ದೇವತೆಗಳ ಕಡೆಯಿಂದ ಯಾವ ಅನುಗ್ರಹವನ್ನೂ ಯಾಚಿಸಬೇಡ. ನೀನು ಪೂಜಿಸುವ ದೇವತೆಗಳೆಲ್ಲ ನಿಜವಾದ ದೇವತೆಗಳಲ್ಲ. ಈ ವಿಶ್ವದ ಸ್ಥಿತಿಯನ್ನು ಸ್ಥಿರವಾಗಿಡುವವನು ಈ ವಿಶ್ವದ ಹೊರಗಿಲ್ಲ. ಸ್ವಾಭಾವಿಕ ಹಾಗು ನೈತಿಕ ವ್ಯವಸ್ಥೆಯ ಉಗಮವು ನಿನ್ನಿಂದ ಹೊರಗಿಲ್ಲ. ಅಂತರ್ಬಾಹ್ಯಗಳ ಸಮನ್ವಯವಾದ ಆತ್ಮನಲ್ಲಿಯೇ ಎಲ್ಲವುಗಳ ಉಗಮವಿದೆ. ಸಮತೆಯು, ತೂಕವು ತಪ್ಪದಂತೆ ಸೃಷ್ಟಿಯನ್ನು ಅವನೇ ಧರಿಸುವನು. ಈ ಸ್ವೈರ ಪ್ರಪಂಚದ ಪ್ರವಾಹವನ್ನು ಮೀರದಪ್ಪದಂತೆ ಒಡ್ಡು ಹಾಕಿ ಅಡ್ಡಗಟ್ಟಿ ನಿಲ್ಲಿಸುವವನು ಅವನೇ!' ಇದು ಉಪನಿಷತ್ತುಗಳ ಉಪದೇಶವು.

ಜ್ಞಾನವು ಪರಾವಿದ್ಯೆ ಅಪರಾವಿದ್ಯೆಯೆಂದು ಎರಡು ಬಗೆಯಾಗಿರುವದೆಂದು ಹೇಳಿ, ಅಪರಾ ವಿದ್ಯೆಯಿಂದ ಆತ್ಮಸಾಕ್ಷಾತ್ಕಾರವು ಸಾಧ್ಯವಿಲ್ಲೆಂದು ಸಾರಿ, ಪರಾ ವಿದ್ಯೆಯ ಪರಾಕಾಷ್ಠೆಯನ್ನು ಪ್ರಸ್ಥಾಪಿಸಿದವು ಉಪನಿಷತ್ತುಗಳು. ಇಂತಹ ಜ್ಞಾನಸಾಧನೆಗೆ ನೀತಿನಿರ್ಭರವಾದ ನಡತೆಯೂ, ಆತ್ಮೈಕ್ಯ ಭಾವನೆಯೂ ಮುಖ್ಯವೆಂದು ಅವು ಸಾರಿದವು. ಇದರಿಂದ ಉಪನಿಷತ್ತುಗಳಲ್ಲಿ ಆತ್ಮನ ಕಲ್ಪನೆಯಿದೆ; ಕರ್ಮದ ವರ್ಮವಿದೆ; ಪುನರ್ಜನ್ಮದ ಮರ್ಮವಿದೆ; ವೈರಾಗ್ಯದ ಏರಾಟವಿದೆ, ಶ್ರುತಿಯ ಸುಳಿದಾಟವಿದೆ. ಇಂತು ಆತ್ಮ, ಕರ್ಮ, ಪುನರ್ಜನ್ಮ, ವೈರಾಗ್ಯ, ಶ್ರುತಿ —ಈ ಐದರ ಐಸಿರಿಯಿದೆ ಉಪನಿಷತ್ತುಗಳಲ್ಲಿ ಎಂದು ಹೇಳಬಹುದು.

ಬುದ್ಧನ ಬೋಧೆಗೆ ಉಪನಿಷತ್ತಿನ ಜ್ಞಾನವೇ ಹಿನ್ನೆಲೆಯಾಗಿದ್ದರೆ ಉಪನಿಷತ್ತಿನ ಈ ಐದು ಕಲ್ಪನೆಗಳನ್ನು ಬುದ್ಧನು ಪೂರ್ಣತಃ ಸ್ವೀಕರಿಸಿದನೇ ಇಲ್ಲವೆ ಅಂಶತಃ ಉಪಯೋಗಿಸಿದನೆ ? ಇಲ್ಲಿ ಬಹಳ ಜನ ಪಂಡಿತರು ಅಂಶತಃ ಸ್ವೀಕರಿಸಿದನೆಂದು ಒಪ್ಪುತ್ತಾರೆ. ಬುದ್ಧನು ಉಪನಿಷತ್ತಿನ ಐದು ಕಲ್ಪನೆಗಳಲ್ಲಿ ಆತ್ಮ ಹಾಗು ಪ್ರತಿ—ಇವೆರಡನ್ನು ಬಿಟ್ಟು ಉಳಿದ ಮೂರನ್ನು ಸ್ವೀಕರಿಸಿದನು. ನೀತಿಗೆ ಪ್ರಾಧಾನ್ಯವನ್ನು ಕೊಟ್ಟು ಆತನು ಕರ್ಮ, ಪುನರ್ಜನ್ಮ ಹಾಗು ಸನ್ಯಾಸಗಳನ್ನು ಎತ್ತಿಹಿಡಿದನು. ಹಾಗಾದರೆ ಬುದ್ಧ ದರ್ಶನದಲ್ಲಿ ಆತ್ಮನ ಕಲ್ಪನೆಯಿಲ್ಲವೆ ? ಈ ವಿಷಯದ ಬಗೆಗೆ ಪಂಡಿತರಲ್ಲಿ ಭಿನ್ನಾಭಿಪ್ರಾಯವಿದೆ. ಬುದ್ಧನು ಆತ್ಮನ ಅಸ್ತಿತ್ವವನ್ನು ಒಪ್ಪಿದ್ದರೂ ಅದನ್ನು ತಿಳಿಸಿ ಹೇಳಲಿಕ್ಕೆ ಬಾರದ್ದರಿಂದ ಅಂತಹ ಆತ್ಮನ ವಿವರಣೆಯ ಗೊಡವೆಗೆ ಹೋಗದೆ 'ಅಭ್ಯಾಸದಿಂದಲೂ, ವೈರಾಗ್ಯದಿಂದಲೂ ಮನಸ್ಸನ್ನು ನಿಷ್ಕಾಮಕ ಮನಃಸ್ಥೈರ್ಯದಲ್ಲಿರಿಸುವ ಉದ್ಯೋಗಕ್ಕೆ ತೊಡಗಿರಿ' ಎಂದು ಆತನು ಉಪದೇಶಿಸಿದನು. ಆತ್ಮನು ಇರಲಿ, ಇರದಿರಲಿ ಮನೋನಿಗ್ರಹವೇ ಮುಖ್ಯವೆಂದು ಹೇಳುವದೇ ಅವನ ಉದ್ದೇಶವಾಗಿತ್ತೆಂದು ಕೆಲವು ಪಂಡಿತರು ವಾದ ಮಾಡುತ್ತಾರೆ. ಆತ್ಮ ಅಥವಾ ಬ್ರಹ್ಮ ಇವುಗಳಲ್ಲಿ ಯಾವದೂ ನಿತ್ಯವಾದ ವಸ್ತುವಲ್ಲ. ಜಗತ್ತಿಗೆ ಆಧಾರವಾದುದು ಏನೂ ಇಲ್ಲ. ಕಣ್ಣಿಗೆ ಕಾಣುವದೆಲ್ಲವೂ ಕ್ಷಣಿಕವಾದದ್ದು ಇರುತ್ತದೆ. ಕಾಣುವದೆಲ್ಲವೂ ಜ್ಞಾನವೇ; ಅದರ ಹೊರತು ಮಿಕ್ಕ ರೂಪ ಪದಾರ್ಥವೂ ಇಲ್ಲವೇ ಇಲ್ಲ. ಈ ಬಗೆಯ ವಿಚಾರ ಸರಣಿಯು ಬೌದ್ಧ ಗ್ರಂಥಗಳಲ್ಲಿಯೇ ವಿಪುಲವಾಗಿ ಸಿಗುವದರಿಂದ ಬೌದ್ಧ ಮತವು ನಿರಾತ್ಮವಾದಿಯಾದುದೆಂದೂ, ನಿವೃತ್ತಿಪರವಾದುದೆಂದೂ ವಾದಿಸುತ್ತಾರೆ ಬೇರೆ ಕೆಲವು ವಿದ್ವಜ್ಜನರು. ಇವೆರಡೂ ಪಕ್ಷಗಳನ್ನು ಬಿಟ್ಟು ನಾವೀಗ ಸ್ವತಂತ್ರವಾಗಿ ವಿಚಾರಿಸುವಾ. 'ಧಮ್ಮಪದ'ದಲ್ಲಿ 'ಅತ್ತವಗ್ಗ' ಎಂಬೊಂದು ಅಧ್ಯಾಯವಿದೆ. ಇದಕ್ಕೆ ಎಂದರೆ 'ಆತ್ಮವರ್ಗ'ವೆಂದು ಅರ್ಥವಾಗುವದು. ಸಂಸ್ಕೃತ ' ಆತ್ಮ ' ಶಬ್ದವು ಪ್ರಾಕೃತ ಭಾಷೆಯಲ್ಲಿ 'ಅತ್ತ' ಎಂದು ಆಗುವದು. ಆತ್ಮವರ್ಗದ ಅಧ್ಯಾಯದಲ್ಲಿ ಹತ್ತು ಶ್ಲೋಕಗಳಿವೆ. ಅದರಲ್ಲಿಯ ಒಂದು ಶ್ಲೋಕವು ಹೀಗೆ ಇದೆ :

ಅತ್ತಾ ಹಿ ಅತ್ತನೋ ನಾಥೋ ಕೋ ಹಿ ನಾಥೋ ಪರೋಸಿಯಾ ।
ಅತ್ತನಾ ಹಿ ಸುದಂತೇನ ನಾಥಂ ಲಭತಿ ದುಲ್ಲಭಂ ॥

‘ ತಾನು ತನಗೆ ಒಡೆಯನು. ತನ್ನ ಬಿಟ್ಟು ಅನ್ಯರು ತನಗಾರು ಒಡೆಯರಾಗ-ಬಲ್ಲರು ?, ಸದಾಚಾರದಿಂದ ತಾನು ತನ್ನೊಡೆಯನಾಗಬೇಕು. ಹೀಗಾಗುವದು ಬಹಳ ದುರ್ಲಭವಾದುದು, ಅಪರೂಪವಾದುದು. ’ ಧಮ್ಮಪದವು ಆತ್ಮವನ್ನು ಒಪ್ಪುತ್ತದೆಂದು ನಾವಾದರೂ ಕೆಲ ಹೊತ್ತು ಒಪ್ಪಿಕೊಳ್ಳುವಾ. ಆಗ ಆತ್ಮದ ನಿಜವಾದ ಕಲ್ಪನೆಯು ಬೌದ್ಧರಲ್ಲಿತ್ತೋ ಅಥವಾ ಆತ್ಮದ ಬಗೆಗೆ ಅವರಿಗಿದ್ದ ಕಲ್ಪನೆಯೇ ಬೇರೆಯೋ ಎಂಬ ಮಾತು ವಿಚಾರಾರ್ಹವಾಗಿದೆ. ಬುದ್ಧನು ಶುದ್ಧ ಬುದ್ಧಿಗೆ ಇಲ್ಲವೆ ವ್ಯವಸಾಯಾತ್ಮಿಕ ಬುದ್ಧಿಗೆ ಆತ್ಮವೆಂದು ಕರೆದಿರುತ್ತಾನೆ. ಬುದ್ಧಿಯೂ ಜಡವಿದ್ದು ಆತ್ಮನಿಂದಲೇ ಅದಕ್ಕೆ ಸ್ವಾತಂತ್ರ್ಯ ಹಾಗು ಪ್ರಕಾಶ-ಗಳೆರಡೂ ಲಭಿಸುವವೆಂಬ ಮಾತು ಅವನಿಗೆ ಸಮ್ಮತವಿಲ್ಲ. ಇದುವೆ ಸಾಂಖ್ಯ ಇಲ್ಲವೆ ವೇದಾಂತ ಹಾಗು ಬೌದ್ಧ ಮತಗಳಲ್ಲಿರುವ ಭೇದವಾಗಿದೆ. ‘ ಬುದ್ಧಿಯೇ ಆತ್ಮನೆಂಬರು ಬೌದ್ಧರು ’ ಎಂದು ಶ್ರೀ ನಿಜಗುಣ ಶಿವಯೋಗಿಗಳು ತಮ್ಮ ‘ವಿವೇಕಚಿಂತಾಮಣಿ’ಯಲ್ಲಿ ಹೇಳಿರುತ್ತಾರೆ. ‘ ಬುದ್ಧಿ ಕಡೆಯಾದ ತ್ರಯೋ-ವಿಂಶತಿ ತತ್ವಾತ್ಮಕ ಪ್ರಪಂಚವೆಲ್ಲ ದೀಪ ಜ್ವಾಲೆಗಳಂತೆ ಕ್ಷಣಿಕವೆಂದು ಸಂವಾ-ದಿಸುತ್ತದೆ’ ಬೌದ್ಧಮತವು. ಪೃಥ್ವಿಯಿಂದ ಮಹತ್ ತತ್ವದ ವರೆಗಿನ ೨೩ ತತ್ವಗಳು ಕ್ಷಣಿಕವಾದರೂ ಶುದ್ಧ ಬುದ್ಧಿಯಿಂದ ವಾಸನಾಕ್ಷಯವನ್ನು ಸಾಧಿಸಿ-ಕೊಂಡು ನಿರ್ವಾಣವನ್ನು ಹೊಂದಲಿಕ್ಕೆ ಬರುತ್ತದೆಂದು ಬೌದ್ಧಧರ್ಮವು ಹೇಳು ತ್ತದೆ. ಇಂದಿನ ‘ನವ ಮಾನವತಾವಾದ’ವು (New Humanism) ಕೂಡ ಇವನ್ನೇ ಹೇಳುತ್ತದೆ. ಮಾನವತಾ ವಾದಕ್ಕೆ ಅಧ್ಯಾತ್ಮವಾದವು ಮಾನ್ಯವಿಲ್ಲ-ದಿದ್ದರೂ ಪ್ರಯತ್ನದಿಂದ, ಶುದ್ಧ ಬುದ್ಧಿ ಬಲದಿಂದ ಮನುಷ್ಯನಿಗೆ ತನ್ನ ಆಚರಣೆ ಯನ್ನು ತಿದ್ದುಕೊಳ್ಳಲಿಕ್ಕೆ ಬರುವವೆಂದೂ ಅದರಿಂದ ಅವನು ಉನ್ನತಿಯನ್ನು ಹೊಂದಬಲ್ಲನೆಂದೂ ಅದು ಹೇಳುತ್ತದೆ.

ಇನ್ನು ಹಿಂದು ದರ್ಶನದಲ್ಲಿ ಆತ್ಮನ ಕಲ್ಪನೆಯು ಹೇಗಿದೆ? ಎಂಬುದನ್ನು ನೋಡುವಾ: ಶ್ರೀ ಶಂಕರಾಚಾರ್ಯರು ‘ ಅಂಚತಿ, ಪ್ರಕಾಶತೆ ಇತಿ ಆತ್ಮಾ’ ಎಂದು ವ್ಯಾಖ್ಯಾನಿಸಿರುವರು. ಅವರೆನ್ನುವಂತೆ ನಿತ್ಯದಲ್ಲಿಯೂ ತನ್ನ ಪ್ರಭೆ-ಯಿಂದಲೇ ಬೆಳಗುತ್ತಿರುವ ಸ್ವಯಂಪ್ರಕಾಶವುಳ್ಳ ವಸ್ತುವೇ ಆತ್ಮವಾಗಿದೆ. ಇದೇ ಅರ್ಥದ ಆತ್ಮನ ನೈಜವಾದ ಹಾಗು ಸುಂದರವಾದ ವರ್ಣನೆಯು ಅಲ್ಲಮ ಪ್ರಭುವಿನ ಕೆಳಗಿನ ವಚನಗಳೆರಡರಲ್ಲಿ ಸುಮನೋಹರವಾಗಿ ಬಂದಿದೆಯೆಂಬುದನ್ನು ಮನಗಾಣಬಹುದು :




ಎಲೆ ಮನವೆ! ನೀ ನಿನ್ನ ನಿಜವ ತಿಳಿವಡೆ
ಆ ನಿನ್ನ ನಿಜವ ಹೇಳುವೆ ಕೇಳು :
ಅದು ಕೇವಲ ಜ್ಯೋತಿ, ಅದು ವರ್ಣನಾತೀತ !
ಅದೀಗ ನಿನ್ನ ಪರಿಪೂರ್ಣತ್ವದ ನೆಲೆ !
ಅದೇ ಸಮ್ಯಕ್‌ಜ್ಞಾನದ ತೋರಿಕೆ !!
ಆ ತೋರಿಕೆಯ ಅಖಂಡ ಬೆಳಗಿನ ಹೊಳಹಿನೊಳಗೆ
ನೀ ನಮ್ಮ ಗುಹೇಶ್ವರಲಿಂಗದ ಚರಣವನರಸಿಕೊಂಡು
ನಿಶ್ಚಿಂತನಾಗೆಲೆ ಮರುಳೇ.

ಎಲೆ ಮನವೆ ! ಎಲ್ಲಿ ಹವಣಿಸಬಾರದ
ಅಖಂಡ ಬೆಳಗು ತೋರುತ್ತಿಹುದು, ಅದೀಗ ನಿನ್ನ ನಿಜ !
ಎಲೆ ಮನವೆ ! ಆವಲ್ಲಿ ನೀನೆಂಬ ಸೆರೆ ಹಿಂಗಿ
ತಾನೆ ತೋರುತ್ತಿಹುದು; ಅದೀಗ ನಿನ್ನ ನಿಜ.

.... .... .... .... .... .... .... .... .... .... ....

ಪ್ರಭುದೇವರ ಶಬ್ದಗಳಲ್ಲಿ ಆತ್ಮನು 'ಕೇವಲ ಜ್ಯೋತಿ', 'ಪರಿಪೂರ್ಣತ್ವದ ನೆಲೆ', 'ಅಖಂಡ ಬೆಳಗು' 'ವರ್ಣಾತೀತ', 'ಸಮ್ಯಕ್‌ಜ್ಞಾನ'ದ ತೋರಿಕೆ ಆಗಿದ್ದಾನೆ. ಅಹಹ! ಆತ್ಮಕಲ್ಪನೆಯು ಅದೆಷ್ಟು ಸುಂದರವಾಗಿ, ಸ್ಫುಟವಾಗಿ ಪ್ರಭುವಿನ ವಾಣಿಯಲ್ಲಿ ಒಡಮೂಡಿದೆಯೆಂಬುವನ್ನು ನೋಡಬೇಕು ! ಶ್ರೀ ಸ್ವಾಮೀ ದಯಾನಂದರು, 'ಯಃ ಅತತಿ ವ್ಯಾಪ್ನೋತಿ ಇತಿ ಆತ್ಮಾ' ಎಂದು ಹೇಳಿರುವರು. ಅವರ ಅಭಿಪ್ರಾಯದಂತೆ ಸಮಸ್ತ ಜೀವರಲ್ಲಿ ವಾಸಿಸುತ್ತಿರುವನು ಯಾವನೋ ಅವನು ಆತ್ಮನಾಗಿದ್ದಾನೆ. ಶ್ರೀ ವಿದ್ಯಾರಣ್ಯರು ಪಂಚದಶಿಯಲ್ಲಿ ಆತ್ಮನ ವ್ಯಾಖ್ಯೆಯನ್ನು ಹೀಗೆ ಮಾಡಿದ್ದಾರೆ :

ಯಚ್ಚಾಪ್ನೋತಿ ಯದಾದತ್ತೆ ಯಚ್ಚಾತ್ತಿ ವಿಷಯಾನಿಹ
ಯಚ್ಚಾಸ್ಯ ಸಂತತೋಭಾವಸ್ತಸ್ಮಾದಾತ್ಮೇತಿ ಕೀರ್ತಿತಃ ||

ಈ ಶ್ಲೋಕದಲ್ಲಿ ಆತ್ಮನ ವ್ಯಾಖ್ಯೆಯನ್ನು ನಾಲ್ಕು ಅವಸ್ಥೆಗಳಿಗನುಗುಣವಾಗಿ ನಾಲ್ಕು ಧಾತುಗಳಿಂದ ವಿವರಿಸಲಾಗಿದೆ. 'ಅದ್' ಎಂಬ ಧಾತು 'ತಿನ್ನು' ಎಂಬ ಅರ್ಥದಲ್ಲಿದೆ. ಜಾಗ್ರದವಸ್ಥೆಯಲ್ಲಿಯ ವಿಷಯಗಳನ್ನು ತಿನ್ನುವದರಿಂದ ಆತ್ಮ; ಎಂದರೆ ಆತ್ಮನು ಜಾಗ್ರದವಸ್ಥೆಯಲ್ಲಿ ವೈಶ್ವಾನರನಾಗಿ ಬಾಹ್ಯ ವಿಷಯಗಳನ್ನು

ಭೋಗಿಸುತ್ತಾನೆಂದು ಹೇಳಲಾಗುತ್ತದೆ. 'ಆದಾ' ಮೂಲ ಸಂಸ್ಕೃತ ಧಾತುವಿಗೆ 'ಸ್ವೀಕರಿಸು' ಎಂದು ಅರ್ಥವಾಗುತ್ತದೆ. ಸ್ವಪ್ನಾವಸ್ಥೆಯ ಸೂಕ್ಷ್ಮ ವಾಸನೆಗಳನ್ನು ತೈಜಸನಾಗಿ ಸ್ವೀಕರಿಸುವದರಿಂದ ಆತ್ಮನೆಂದು ಕರೆಯಲ್ಪಡುತ್ತಾನೆ. 'ಆಪ್' ಧಾತು 'ದೊರಕಿಸು' ಎಂಬರ್ಥದಲ್ಲಿದೆ. ಸುಷುಪ್ತಿಯಲ್ಲಿ ಆನಂದ ಭೋಗವನ್ನು ಪ್ರಾಜ್ಞನೆಂಬ ಹೆಸರುವಳಿದು ದೊರಕಿಸುತ್ತಾನೆ; ಆದುದರಿಂದ ಆತ್ಮನೆಂದು ಕರೆಯಲ್ಪಡುತ್ತಾನೆ; 'ಅತ್' ಧಾತು, 'ವ್ಯಾಪಿಸು' ಎಂದರ್ಥವುಳ್ಳದ್ದಿರುತ್ತದೆ. ಎಡೆಬಿಡದೆ ಎಲ್ಲೆಡೆಗೂ ವ್ಯಾಪಿಸಿರುವದರಿಂದ ಆತ್ಮನೆಂದು ಕರೆಯಲ್ಪಡುತ್ತಾನೆ. ಈ ಸಂದರ್ಭದಲ್ಲಿ ಮಾಂಡೂಕ್ಯೋಪನಿಷತ್ತಿನ ಆತ್ಮನ ಚತುರ್ವಿಧ ಅವಸ್ಥೆಗಳ ವರ್ಣನೆಯು ನೆನಪಿಗೆ ಬರುತ್ತದೆ.

ಫಾದರ್ ಹೆರಾಸರು ಮಾತ್ರ 'ಆತ್ಮ' ಶಬ್ದವು ಮೂಲ ಸಂಸ್ಕೃತವಲ್ಲವೆಂದೂ, ಅದು ಪ್ರಾಕೃತ ಇಲ್ಲವೆ ದ್ರಾವಿಡ ಭಾಷೆಗೆ ಸೇರಿದ್ದೆಂದೂ ಹೇಳುತ್ತಾರೆ. ಹಳೆಯ ದ್ರಾವಿಡ ಭಾಷೆಯಲ್ಲಿ 'ಅತಮಾನ' ಎಂಬ ಶಬ್ದವು ಪ್ರಯೋಗವಾಗಿರುವದು ಕಂಡುಬರುತ್ತದೆ. 'ಅತಂ+ಆನ್' ಎಂಬೆರಡು ಶಬ್ದಗಳು ಕೂಡಿ 'ಅತಮಾನ್' ಎಂಬ ಸಂಯುಕ್ತ ಶಬ್ದವು ನಿರ್ಮಾಣವಾಗಿದೆ. 'ಅತಂ' ಎಂದರೆ ಅಧೋಲೋಕವೆಂದೂ 'ಆನ್' ಎಂದರೆ ಒಡೆಯನೆಂದೂ ಅರ್ಥವಾಗುವವು. ಅತಮಾನ್ ಪದಕ್ಕೆ ಅಧೋಲೋಕದ ಒಡೆಯನೆಂದಾಗುವದು. ಈ ಶಬ್ದವು ದ್ರಾವಿಡ ಭಾಷೆಯಿಂದ ಸಂಸ್ಕೃತದಲ್ಲಿ ನುಸುಳುವಾಗ ಗುಣವೃದ್ಧಿಯನ್ನೂ, ಲೋಪವನ್ನೂ ಹೊಂದಿ 'ಆತ್ಮನ್' ಎಂದು ಆಗಿರಬೇಕೆಂದು ಅವರು ಅಭಿಪ್ರಾಯಪಡುತ್ತಾರೆ. ಇದು ನಿಜವಾಗಿಯೂ ವಿಚಾರಾರ್ಹವಾದ ಪ್ರಶ್ನೆಯಾಗಿದೆ.

"In the old Dravidian language the word very likely was *ataman*, a compound word *atam-an*. Now *Atam* in ancient Tamil means 'underworld' and '*an*' means 'lords'. *Ataman*, therefore, means lord of the underworld. This word, while passing into Sanskrit lost the second short 'a' and, by a natural reaction, lenghtened the first 'a'— thus becoming *Atman*." ಇವು ಫಾದರ ಹೆರಾಸರು ತಿಳಿಸುವ ಅಭಿಪ್ರಾಯಗಳು.

ಬೌದ್ಧ ಮತದಲ್ಲಿ 'ಆತ್ಮ' ಶಬ್ದವನ್ನು ಆತ್ಮಾ ಎಂದು ಸಂಬೋಧಿಸಲಾಗಿದೆಯೆಂಬುದನ್ನು ಹೇಳಿದೆಯಷ್ಟೇ! ವಿಜ್ಞಾನಕ್ಕಿಂತಲೂ ಬೇರಾವ ಆತ್ಮನೂ ಇಲ್ಲ. ವಿಜ್ಞಾನವೇ ಆತ್ಮನು. ವಿಜ್ಞಾನವೆಂದರೆ ಶುದ್ಧಬುದ್ಧಿ. ದೇಹ, ಇಂದ್ರಿಯ, ಮನಸ್ಸು, ವೇದನೆ, ಬುದ್ಧಿ ಇವುಗಳ ಸಂಘಾತದಲ್ಲಿ 'ಅಹಂ' ಹುಟ್ಟುತ್ತದೆ. ಅಹಂಕಾರವು ಸ್ವತಂತ್ರ ವಸ್ತುವಲ್ಲ. ಅದು ಕೇವಲ ಮೇಲೆ ಹೇಳಿದ ಸಂಘಾತದ ಒಟ್ಟು ಪರಿಣಾಮವಾಗಿದೆ. ಆ ಸಂಘಾತವಳಿದರೆ ಅಹಂಕಾರವೂ ಅಳಿಯುವದು. ಆಗ ಕೇವಲ ನಿರ್ವಾಣವೊಂದೇ ಉಳಿಯುವದು. ಆದುದರಿಂದಲೇ ಬೌದ್ಧರು ಆತ್ಮನು ಶುದ್ಧನೂ, ಅಪಾಪವಿದ್ಧನೂ, ಏಕಾತ್ಮಪ್ರತ್ಯಯಸಾರನೂ ಆಗಿದ್ದಾನೆಂದು ಹೇಳುತ್ತಾರೆ. ಆದರೆ ಉಪನಿಷತ್ತುಗಳಲ್ಲಿ ಆತ್ಮನ ಬಗೆಗೆ ಇದ್ದ ಆಳವಾದ ಅಪಾರವಾದ ಅರ್ಥವಾಗಲಿ, ಆತ್ಮನೇ ಎಲ್ಲಕ್ಕೂ ಆಧಾರವಾಗಿದ್ದಾನೆಂಬ ಅಭಿಪ್ರಾಯವಾಗಲಿ ಬೌದ್ಧ ಮತದಲ್ಲಿಲ್ಲ. ಉಪನಿಷತ್ತುಗಳಲ್ಲಿಯ ಆತ್ಮನ ಕಲ್ಪನೆಯೇ ಎಲ್ಲ ತತ್ವವಿಚಾರಕ್ಕೂ ಮೂಲವಾಗಿದೆ. ಇಂತಹ ಆತ್ಮನ ಕಲ್ಪನೆಯು ಬೌದ್ಧ ಮತದಲ್ಲಿಲ್ಲದ್ದರಿಂದ ಅದು ನಿರಾತ್ಮವಾದಿಯಾಯಿತು.

ಉಪನಿಷತ್ತುಗಳಾಗಲಿ ವೇದಾಂತವಾಗಲಿ ಮೂರು ಪ್ರಮಾಣಗಳನ್ನು ಒಪ್ಪುತ್ತವೆ. ಪ್ರತ್ಯಕ್ಷ ಪ್ರಮಾಣ, ಅನುಮಾನ ಪ್ರಮಾಣ ಹಾಗು ಆಗಮಪ್ರಮಾಣ ಇಲ್ಲವೆ ಆಪ್ತವಚನ— ಇವೇ ಆ ಮೂರು ಪ್ರಮಾಣಗಳು. ಬೌದ್ಧ ಮತವು ಪ್ರತ್ಯಕ್ಷ ಮತ್ತು ಅನುಮಾನಗಳೆಂಬ ಎರಡೇ ಎರಡು ಪ್ರಮಾಣಗಳನ್ನು ಒಪ್ಪುತ್ತದೆ. ಆಪ್ತವಚನ, ಆಗಮಪ್ರಮಾಣ ಅಥವಾ ಶ್ರುತಿಪ್ರಮಾಣವನ್ನು ಅದು ಅಲ್ಲಗಳೆಯುತ್ತದೆ. ಆಪ್ತವಚನವೆಂದರೆ ನಂಬಿಗಸ್ಥರು ಇಲ್ಲವೆ ನಂಬಲರ್ಹರಾದವರು ಹೇಳಿದ ಮಾತು. ವ್ಯವಹಾರದಲ್ಲಿಯೂ ಆಯಾ ವಿಷಯದಲ್ಲಿ ತಜ್ಞರಾದವರ ಅಭಿಪ್ರಾಯ ಇಲ್ಲವೆ ಮಾತುಗಳನ್ನು ಕೇಳಿ ಅವುಗಳನ್ನು ನಂಬಿ ನಾವು ನಡೆಯುವದಿಲ್ಲವೆ? ಹಾಗೆ ನಡೆದು ಅನೇಕ ಕಾರ್ಯಗಳನ್ನು ಕೈಗೂಡಿಸಿಕೊಂಡು ಲಾಭವನ್ನೂ, ಯಶಸ್ಸನ್ನೂ ಪಡೆಯುವದಿಲ್ಲವೆ? ಹಾಗೆಯೇ ಅನುಭವ ಮಾರ್ಗದಲ್ಲಿಯೂ ಕೂಡ ತಜ್ಞರಾದವರ ಅಭಿಪ್ರಾಯದ ಮೇರೆಗೆ ನಡೆದುಕೊಳ್ಳುತ್ತೇವೆ; ಅರಿವಿನ ಮಹಾಂತರು ನಡೆದು ಹೋದ ಮಾರ್ಗದಲ್ಲಿಯೇ ನಾವೂ ಸಾಗುತ್ತೇವೆ; ಶರಣರ ಅನುಭಾವಿಗಳ ವಚನಗಳನ್ನು ನಂಬಿ ಮುನ್ನಡೆಯಿಡುತ್ತೇವೆ. ಇದೇ ಅರ್ಥದಲ್ಲಿ 'ಬುದ್ಧಿಯನ್ನು ಹೇಳುವದಕ್ಕೆ ಆದ್ಯರುಗಳ

ವಚನವುಂಟು ' ಎಂದು ಮುಪ್ಪಿನ ಷಡಕ್ಷರಿ ಮೊದಲಾದ ಶಿವಯೋಗಿಗಳು ತಮ್ಮದೇ ಆದ ರೀತಿಯಲ್ಲಿ ಹೇಳಿಕೊಂಡಿದ್ದಾರೆ. ಇಂಥ ಅರಿವಿನ ಮಹಾಂತರ ಅನುಭಾವಿಗಳ ಶರಣರ ಆದ್ಯರ ಆದೇಶಗಳೇ, ಅವರ ನುಡಿಗಳೇ ಆಗಮ-ಪ್ರಮಾಣ ಅಥವಾ ಶ್ರುತಿಪ್ರಮಾಣವೆಂದು ಕರೆಯಿಸಿಕೊಳ್ಳುತ್ತವೆ. ಇಂಥವರ ನಿರ್ಮಲವಾದ ಅಂತಃಕರಣದಲ್ಲಿ ಸ್ಫುರಿಸಿದ ವಾಣಿಯೇ ಶ್ರುತಿ. It is the revealed word. ಶ್ರುತಿಯೆಂದರೆ ಹೊರಗಿನಿಂದ ಬಂದ ಸಂದೇಶವಲ್ಲ, ಒಳಗಿನಿಂದ ಸ್ಫುರಿಸಿದ ದೈವೀವಾಣಿ; ಶ್ರುತಿಯೆಂದರೆ ದೈವೀಸ್ಫೂರ್ತಿಯ ಪ್ರಕಟನೆಯೆಂದು ಉಪನಿಷತ್ತುಗಳು ಹೇಳುವವು. ಈ ಸ್ಫೂರ್ತಿಯ ಕೈಯಲ್ಲಿ ಋಷಿಗಳು ನಿಮಿತ್ತ-ಮಾತ್ರವಾಗಿದ್ದಂತೆ ಭಾಸವಾಗುತ್ತದೆ. ಆದುದರಿಂದ ಉಪನಿಷತ್ತುಗಳನ್ನು ಶ್ರುತಿಪ್ರಮಾಣವನ್ನು ಪ್ರಸ್ಥಾಪಿಸುವಾಗ ಒಂದು ಬಗೆಯ 'ನಿಮಿತ್ತವಾದ' ವೇ ಪ್ರತಿಪಾದಿತವಾಗಿವೆ. ಮತ್ತು ಇದನ್ನೇ ಮುಂದಿಟ್ಟುಕೊಂಡು ಶ್ರುತಿಗಳು ಅಪೌರುಷೇಯವೆಂದು ಕರೆದಂತೆ ತೋರುತ್ತದೆ. ಈ ಶ್ರುತಿಪ್ರಮಾಣವಾಗಲಿ, ನಿಮಿತ್ತವಾದ (Occasionalism) ವಾಗಲಿ ಬೌದ್ಧಮತಕ್ಕೆ ಸಮ್ಮತವಿಲ್ಲ. ಅವರು ಪ್ರತ್ಯಕ್ಷ ಅನುಮಾನಗಳೆಂಬ ಎರಡೇ ಪ್ರಮಾಣಗಳನ್ನು ಒಪ್ಪುತ್ತಿದ್ದರೂ, ಇಂದ್ರಿಯಮೂಲಕವಾಗಿಯೇ ಯುಕ್ತಿಯೆಂಬ ಅನುಮಾನವೂ ಭಾಷೆಯೆಂಬ ಶಬ್ದವೂ ಇರುವದರಿಂದ ಪ್ರತ್ಯಕ್ಷವೊಂದೇ ಅವರ ಮುಖ್ಯ ಪ್ರಮಾಣ-ವಾಯಿತು. ಈ ಪ್ರತ್ಯಕ್ಷವು ನಾಲ್ಕುಪ್ರಕಾರವಾಗಿದೆಯೆಂದು ಬೌದ್ಧರು ಹೇಳು-ತ್ತಾರೆ. (೧) ಇಂದ್ರಿಯಜ, (೨) ಪ್ರತ್ಯಯಜ, (೩) ಮಾನಸಜ ಮತ್ತು (೪) ಭಾವನಾಬಲಜ ಎಂಬುವುಗಳೇ ಆ ನಾಲ್ಕು ಪ್ರಕಾರಗಳು. ಇಲ್ಲಿ ಒಂದು ಅತ್ಯಂತ ಮಹತ್ವದ ಮಾತು ನಮಗೆ ಸಿಗುತ್ತದೆ. ಭಾವನಾಬಲವನ್ನು ಬೌದ್ಧರು ಒಪ್ಪಿಕೊಳ್ಳುತ್ತಾರೆ. ಭಾವನಾಬಲದಿಂದ ಅಥವಾ ಧ್ಯಾನದಿಂದ ಅಪರೋಕ್ಷಜ್ಞಾನವುಂಟಾಗುವದು. ಅದನ್ನು ಪಡೆದವರೇ ಯೋಗಿಗಳು, ಬುದ್ಧರು. ಜಗದನುಗ್ರಹಕ್ಕಾಗಿಯೇ ಅವರು ಇರುವರೆಂಬುದನ್ನು ಬೌದ್ಧಮತವು ಒಪ್ಪುತ್ತದೆ. ಧ್ಯಾನಬಲದಿಂದ ಹುಟ್ಟಿದ ಪ್ರತ್ಯಕ್ಷವೇ ಅಪರೋಕ್ಷವೆಂದ ಹಾಗಾ-ಯಿತು. ಉಪನಿಷತ್ತಿನ ಶ್ರುತಿಪ್ರಮಾಣ ಇಲ್ಲವೆ 'ನಿಮಿತ್ತವಾದ'ವು ಭಕ್ತಿಮಾರ್ಗದ ಕಡೆಗೆ ಒಲಿದರೆ ಬೌದ್ಧರ ಭಾವನಾಬಲಜ ಪ್ರತ್ಯಕ್ಷವು ಜ್ಞಾನಮಾರ್ಗದ ಕಡೆಗೆ ಒಲಿಯುತ್ತದೆ. ಧ್ಯಾನಬಲದಿಂದ ಅಪರೋಕ್ಷ ಜ್ಞಾನವನ್ನು ಪಡೆದು ಅರುಹಿನ ಮಹಾಂತರು ಬುದ್ಧರಾಗಬಲ್ಲರೆಂಬುದನ್ನು ಬೌದ್ಧರೂ ಸಾಂಖ್ಯರೂ ವೇದಾಂತಿ

ಗಳೂ ಅನುಭಾವಿಗಳೂ— ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಇದೇ ಅರ್ಥ-ದಲ್ಲಿರುವ ಪ್ರಭುದೇವರ ವಚನವು ಎಷ್ಟು ಮಾರ್ಮಿಕವಾಗಿದೆಯೆಂಬುದನ್ನು ನೋಡಬಹುದು :

ಅಜ್ಞಾನಿಯಾದವಂಗೆ ಅರುಹು ತಾನೆಲ್ಲಿಹುದೋ ?
ಸುಜ್ಞಾನಿಯಾದವಂಗೆ ಮರುಹು ತಾನೆಲ್ಲಿಹುದೋ ?
ಅರಿದೆನೆಂಬಾತ ಇದಿರು ಕೇಳಲುಂಟೇ ?
ಭ್ರಾಂತಿಯು ಭ್ರಮೆಯೊಳಗೆ ಬಳಲುತ್ತಿರಲು
ಮಾತಿನ ಮಾಲೆಯೊಳಗೆ ಅರಿವೆಂಬುದುಂಟೇ ?
ಸೂತಕ ಹಿಂಗದೆ, ಸಂದೇಹವಳಿಯದೆ
ಮುಂದಣ ಸೂಕ್ಷ್ಮವ ಕಾಂಬ ಪರಿಯೆಂತೋ ?
ಜ್ಯೋತಿಯು ಬಸಿರೊಳಗೆ ಜನಿಸಿದ
ಕಾಂತಿಯು ಪ್ರಭೆಯು ಬೆಳಗು ಗುಹೇಶ್ವರಾ, ನಿಮ್ಮ ಶರಣ.

ಉಪನಿಷತ್ತುಗಳು ವೈರಾಗ್ಯವನ್ನು ಬೋಧಿಸುವವು. ಎಂದರೆ ಸನ್ಯಾಸ ಧರ್ಮವನ್ನು ಎತ್ತಿ ಹಿಡಿಯುವವು. ಸನ್ಯಾಸಧರ್ಮವನ್ನು ಎತ್ತಿ ಹಿಡಿಯುವದ-ರಲ್ಲಿ ಅವುಗಳ ವಿಚಾರಸರಣಿಯು ಹೀಗಿದೆ : 'ಕರ್ಮವು ಸೃಷ್ಟಿಯೊಳಗಿನ ವ್ಯವಹಾರವೆಲ್ಲವು ತೃಷ್ಣಾಮೂಲಕವಾಗಿಯೇ ಅಂದರೆ ವಾಸನೆಯ ಮೂಲಕ-ವಾಗಿಯೇ ಸಾಗುವದು. ಜನನ–ಮರಣ ರೂಪವಾದ ಈ ಸಂಸಾರವು ದುಃಖ ಮಯವಾಗಿದೆ. ಇದರಿಂದ ಬಿಡುಗಡೆಯನ್ನು ಹೊಂದಬೇಕಾದರೆ ಮನಸ್ಸನ್ನು ನಿಷ್ಕಾಮವನ್ನಾಗಿಯೂ ನಿರ್ವೈರವನ್ನಾಗಿಯೂ ಮಾಡಿ, ಅದನ್ನು ಈ ನಾಮ-ರೂಪಾತ್ಮಕವಾದ ಜಗತ್ತಿಗೆ ಆಧಾರವಾದ ಆತ್ಮನಲ್ಲಿ ಸ್ಥಿರಗೊಳಿಸಿ, ಸಾಂಸಾರಿಕ ಕರ್ಮಗಳನ್ನು ತ್ಯಜಿಸಿ ಆತ್ಮನಿಷ್ಠ ಸ್ಥಿತಿಯಲ್ಲಿಯೇ ರಮಿಸಬೇಕು. ಇದುವೆ ಸನ್ಯಾಸ; ಇದುವೆ ವೈರಾಗ್ಯ.' ಈ ದೃಶ್ಯಸೃಷ್ಟಿಯು ನಾಮರೂಪಾತ್ಮಕವೂ, ನಶ್ವರವೂ ಆಗಿದ್ದು ಕರ್ಮವಿಪಾಕದ ದೆಸೆಯಿಂದಲೇ ಅದರ ವ್ಯಾಪಾರವು ಅವ್ಯಾಹತವಾಗಿ ನಡೆದಿವೆ ಎಂಬ ಸಂಗತಿಯು ಬುದ್ಧನಿಗೆ ಮಾನ್ಯವಿದೆ. ಇದಕ್ಕೆ ಅವನ ಈ ವಚನವೇ ಸಾಕ್ಷಿ:

ಕಮ್ಮನಾ ವತ್ತತಿ ಲೋಕೋ ಕಮ್ಮನಾ ವತ್ತತಿ ಪ್ರಜಾ ।
ಕಮ್ಮನಿಬಂಧನಾಸತ್ತಾ ರಥಸ್ಸಾಣೀವಯಾಯತೋ ॥

ಕರ್ಮದಿಂದಲೇ ಲೋಕಕ್ಕೂ ಪ್ರಜೆಗಳಿಗೂ ಚೋದನೆಯು ದೊರೆಯುತ್ತದೆ. ಹೇಗೆ ರಥದ ಗಾಲಿಯು ಕೀಲಿನಿಂದ ನಿಯಂತ್ರಿತವಾಗಿರುತ್ತದೆಯೋ ಹಾಗೆಯೇ ಪ್ರಾಣಿಗಳು ಕರ್ಮದಿಂದ ಬದ್ಧರಾಗಿದ್ದಾರೆ. ಆದರೆ ದೃಶ್ಯ ಸೃಷ್ಟಿಗೆ ಆಧಾರವಾಗಿ ಆತ್ಮತತ್ವವಿದೆಯೆಂಬ ಉಪನಿಷತ್ಕಾರರ ಸಿದ್ಧಾಂತವು ಬುದ್ಧನಿಗೆ ಸಮ್ಮತವಿಲ್ಲ. ಇದುವೆ ಹಿಂದು ಹಾಗು ಬೌದ್ಧ ಮತಗಳೊಳಗೆ ಎದ್ದು ಕಾಣುವ ಭೇದವು. ಆತ್ಮ ಅಥವಾ ಬ್ರಹ್ಮವೆಂಬುದು ನಿಜವಾದ ವಸ್ತುವಿರದೆ ಅದು ಭ್ರಾಮಕವಾಗಿರುವದರಿಂದ ಆತ್ಮಾನಾತ್ಮ ವಿಚಾರ ಇಲ್ಲವೆ ಬ್ರಹ್ಮಚಿಂತನವೆಂಬ ಶುಷ್ಕವಾದದಲ್ಲಿ ವೇಳೆಯನ್ನು ವ್ಯರ್ಥವಾಗಿ ವೆಚ್ಚಮಾಡಬಾರದೆಂದು 'ಸುಬ್ಬಾಸವ' ಸೂತ್ರದಲ್ಲಿ ಬುದ್ಧನು ಸ್ಪಷ್ಟವಾಗಿ ಹೇಳಿರುವನು. ಆತ್ಮತತ್ವವು ಮಾನ್ಯವಿಲ್ಲದಿದ್ದ ಮೇಲೆ ಅವನು ತನ್ನ ದರ್ಶನದ ಉಪಪತ್ತಿಯನ್ನು ಯಾವ ರೀತಿಯಲ್ಲಿ ಹೇಳಿರುವನೆಂಬುದನ್ನು ಆಲೋಚಿಸಬೇಕು.

ಕರ್ಮವಿಪಾಕದ ದೆಸೆಯಿಂದ ನಾಮರೂಪಾತ್ಮಕ ದೇಹಕ್ಕೆ ಕ್ಷಣಶಃ ಪರಿವರ್ತನಶೀಲವಾದ ಜಗತ್ತಿನಲ್ಲಿ ಮತ್ತೆ ಮತ್ತೆ ಜನ್ಮ ತಾಳಬೇಕಾಗುತ್ತದೆ. ಈ ಪುನರ್ಜನ್ಮದ ತತ್ವವು ದುಃಖಮಯವಾಗಿದ್ದು ಅದರಿಂದ ತೀವ್ರ ಬಿಡುಗಡೆಯನ್ನು ಹೊಂದಿ ಆ ಮೂಲಕ ಶಾಶ್ವತವಾದ ಶಾಂತಿಯನ್ನು ಅಥವಾ ನಿರ್ವಾಣವನ್ನು ಹೊಂದುವದು ಅವಶ್ಯವಿದೆ. ರೋಗವನ್ನು ಕಳೆದುಕೊಳ್ಳಲಿಕ್ಕೆ ರೋಗದ ಮೂಲವನ್ನು ಶೋಧಿಸಿ ಅದಕ್ಕೆ ತಕ್ಕ ಉಪಾಯವನ್ನು ಮಾಡಬೇಕಾಗುತ್ತದೆ. ಹಾಗೆಯೆ ಸಾಂಸಾರಿಕ ದುಃಖದ ರೋಗವನ್ನು ದೂರ ಮಾಡುವದಕ್ಕೆ ಅದರ ಮೂಲವನ್ನು ಶೋಧಿಸಿ ತಕ್ಕ ಚಿಕಿತ್ಸೆಯನ್ನು ಮಾಡಬೇಕಾಗುತ್ತದೆ. ರೋಗದ ಕಾರಣವನ್ನು ವಿಚಾರ ಮಾಡಲಾಗಿ ತೃಷ್ಣೆ ಅಥವಾ ವಾಸನೆಯು ಸರ್ವ ದುಃಖಕ್ಕೆ ಮೂಲವೆಂದು ಕಾಣುವದು. ಒಂದು ನಾಮರೂಪಾತ್ಮಕ ದೇಹವು ನಾಶವಾದ ಬಳಿಕ ಅದರ ಹಿಂದೆ ಉಳಿಯುವ ವಾಸನಾತ್ಮಕ ಬೀಜದಿಂದಲೇ ಮತ್ತೊಂದು ದೇಹವು ಹುಟ್ಟಿ ಬರುವದು. ಆದುದರಿಂದ ಪುನರ್ಜನ್ಮದ ದುಃಖಮಯವಾದ ಬಂಧನದಿಂದ ಬಿಡುಗಡೆಯನ್ನು ಹೊಂದಲಿಕ್ಕೆ ಇಂದ್ರಿಯನಿಗ್ರಹದಿಂದಲೂ ಧ್ಯಾನದಿಂದಲೂ ವೈರಾಗ್ಯದಿಂದಲೂ ತೃಷ್ಣೆಯನ್ನು ಪೂರ್ಣವಾಗಿ ನಾಶಗೊಳಿಸಿ ಸನ್ಯಾಸಿ ಇಲ್ಲವೆ ಭಿಕ್ಷು ಆಗುವದೊಂದೇ ಮಾರ್ಗವೆಂದು ಬುದ್ಧನು ನಿಶ್ಚಯಿಸಿದನು. ಅವನ ಈ ನಿಶ್ಚಯದ ಪರಿಣಾಮವಾಗಿ ದುಃಖ, ಸಮುದಾಯ, ನಿರೋಧ, ಮಾರ್ಗವೆಂಬ ನಾಲ್ಕು ತತ್ವಗಳು ಆರ್ಯಸತ್ಯಗಳೆಂಬ ಹೆಸರಿನಿಂದ ಬೌದ್ಧ

ಮತದಲ್ಲಿ ಪ್ರಚಾರದಲ್ಲಿ ಬಂದವು. ಈ ಸಂಸಾರದಲ್ಲಿ ದುಃಖವಿದೆ. ಅದಕ್ಕೆ ಕಾರಣವೂ ಇದೆ. ಅದನ್ನು ನಿರೋಧ ಮಾಡಲಿಕ್ಕೆ ಶಕ್ಯವಿದೆ ಮತ್ತು ಅದಕ್ಕೆ ಮಾರ್ಗವೂ ಇದೆ. ಬುದ್ಧನು ಈ ನಾಲ್ಕು ಸಂಗತಿಗಳ ಮೇಲೆ ತನ್ನ ದರ್ಶನದ ಕಟ್ಟಡವನ್ನು ಕಟ್ಟಿದನು.

ಈ ವರೆಗಿನ ವಿವೇಚನೆಯಿಂದ ತಿಳಿದುಬರುವದೇನೆಂದರೆ— ಬುದ್ಧನು ಉಪನಿಷತ್ತುಗಳ ತೃಷ್ಣೆಯನ್ನೂ, ಕರ್ಮವನ್ನೂ, ಪೂರ್ವಜನ್ಮವನ್ನೂ ಒಪ್ಪಿ-ಕೊಂಡಿದ್ದಾನೆ. ಆದರೆ ಆತ್ಮತತ್ವವು ಅವನಿಗೆ ಸಮ್ಮತವಿಲ್ಲ. ಬ್ರಹ್ಮಾತ್ಮೈಕ್ಯ-ಸ್ಥಿತಿಗೆ ಎಂದರೆ ಪಿಂಡಗತ ಪ್ರತ್ಯಗಾತ್ಮನೂ, ಬ್ರಹ್ಮಾಂಡಗತ ಪರಮಾತ್ಮನೂ ಒಂದೇ ಎಂದು ತಿಳಿಯುವ ಮನಸ್ಸಿನ ನಿಷ್ಕಾಮ ಹಾಗು ನಿರ್ವಿಕಾರಾವಸ್ಥೆಗೆ ಆತ್ಮನಿಷ್ಠಾ ಅಥವಾ ಬ್ರಹ್ಮಸಂಸ್ಥಾ ಎಂಬ ಹೆಸರುಗಳನ್ನು ಉಪನಿಷತ್ಕಾರರು ಕೊಡುತ್ತಾರೆ. ಆತ್ಮನಿಷ್ಠಾ ಅಥವಾ ಬ್ರಹ್ಮಸಂಸ್ಥಾ ಎಂಬುದು ಆಧಾರದರ್ಶಕ-ವಾದ ಹೆಸರು. ಪ್ರತ್ಯಗಾತ್ಮ ( ಪಿಂಡಗತ ಆತ್ಮ ) ವಾಗಲಿ, ಪರಮಾತ್ಮ (ಬ್ರಹ್ಮಾಂಡಗತ ಆತ್ಮ ) ವಾಗಲಿ ಬುದ್ಧನಿಗೆ ಸಮ್ಮತವಿಲ್ಲದ್ದರಿಂದ, ಅವೆರಡರ ಐಕ್ಯವನ್ನು ಅವನು ಒಪ್ಪಲಿಲ್ಲ. ಅದಕ್ಕಾಗಿ ಅವನು ಆತ್ಮನಿಷ್ಠಾ ಎಂಬ ಆಧಾರ-ದರ್ಶಕ ಹೆಸರಿನ ಬದಲಾಗಿ ನಿರ್ವಾಣ ಎಂಬ ಕ್ರಿಯಾದರ್ಶಕವಾದ ಹೆಸರನ್ನು ಕೊಟ್ಟನು. ನಿರ್ವಾಣವೆಂದರೆ ವಿರಾಮಹೊಂದುವದು ಅಥವಾ ದೀಪವು ನಂದಿ-ಹೋಗುವ ತೆರದಲ್ಲಿ ವಾಸನೆಗಳೆಲ್ಲವೂ ನಷ್ಟಹೊಂದುವದು. ಎಣ್ಣೆ ತೀರಿದ ಮೇಲೆ ದೀಪವು ಆರಿ ಹೋಗುವ ಹಾಗೆ ವಿಜ್ಞಾನವೆಂಬ ಆತ್ಮನ ತೃಷ್ಣೆಯು ತೀರಿ ಹೋಗುವದೇ ನಿರ್ವಾಣವು. ನಿರ್ವಾಣವೆಂದರೆ ಶಾಂತವಾಗುವದು. ಇಲ್ಲಿ ಉಪನಿಷತ್ತಿನ ಮುಕ್ತಿಯ ಕಲ್ಪನೆಗೂ ಬುದ್ಧನ ನಿರ್ವಾಣಕ್ಕೂ ಬಹಳ ಅಂತರ-ವಿದೆಯೆಂಬುದನ್ನು ಮನಗಾಣಬಹುದು.

ಬೃಹದಾರಣ್ಯಕೋಪನಿಷತ್ತಿನಲ್ಲಿ ಯಾಜ್ಞ್ಯವಲ್ಕ್ಯನು ಜಾರತ್ಕಾರು ಆರ್ತ-ಭಾಗನಿಗೆ ಕರ್ಮತತ್ವವನ್ನು ಕುರಿತು ಹೀಗೆ ಹೇಳುತ್ತಾನೆ : ಮಾನವನು ಸುಕೃತ ಗಳಿಂದ ಪುಣ್ಯವಂತನಾಗಿಯೂ, ದುಷ್ಕೃತಗಳಿಂದ ದುಷ್ಟನಾಗಿಯೂ ಜನಿಸು-ತ್ತಾನೆ. ಎಲ್ಲಿಯವರೆಗೆ ಮಾನವನು ವಾಸನೆಯ ದಾಸನಾಗಿರುತ್ತಾನೆಯೋ ಅಲ್ಲಿಯ ವರೆಗೆ ಅವನ ಕರ್ಮವು ಬೀಜರೂಪದಿಂದ ಸಿಲುಕುವದು. ಈ ದೃಷ್ಟಿಯಲ್ಲಿ ಅವನು ಬಗೆಬಗೆಯ ಜನ್ಮಗಳನ್ನೆತ್ತಬೇಕಾಗುವದು. ಕರ್ಮತತ್ವದ ಫಲವೇ ಪುನರ್ಜನ್ಮ,

ಈ ಕರ್ಮಕೋಟಲೆಯೊಳಗಿಂದ ಪಾರಾಗುವ ಹಂಚಿಕೆಯನ್ನು ಉಪನಿಷತ್ತುಗಳು ಹೇಳುತ್ತವೆ. ಮಾನವನಿಗೆ ಅವಿದ್ಯೆಯು ಅಥವಾ ಅಜ್ಞಾನವು ಆವರಿಸಿತಾದರೆ ಅವನು ತನ್ನ ಸ್ವರೂಪವನ್ನು ಮರೆಯುವನು. ಈ ಸ್ವರೂಪವಿಸ್ಮೃತಿಯೇ ಮಲ. ಈ ಮಲಾವರಣದಿಂದ ಅವನ ದೃಷ್ಟಿಯು ಮನಕಾಗಿ ಭಿನ್ನದೃಷ್ಟಿಯಿಂದ ಅಥವಾ ಬಿದಿರುಗಣ್ಣಿನಿಂದ ಸೃಷ್ಟಿಯ ವ್ಯವಹಾರವನ್ನು ನೋಡಹತ್ತುವನು. ಆಗ ಅವನಿಗೆ ಸೃಷ್ಟಿಯು ಸಟೆಯಾಗಿ ತೋರಹತ್ತುವದು. ಇದೇ ಮಾಯಾಮಲ. ಇದರಿಂದಾಗಿ ಅವನು ಕರ್ಮದ ಯಥಾರ್ಥವಾದ ನಿಯಮವನ್ನರಿಯದೆ ಪಾಪಪುಣ್ಯಗಳ ದಂದುಗದಲ್ಲಿ ಸಿಲುಕಿ ಕರ್ಮ ಮಾಡಹತ್ತುವನು, ಇದೇ ಕರ್ಮಮಲ. ಇದರ ಪರಿಣಾಮವಾಗಿ ಅವನು ಪುನಃ ಪುನಃ ಜನ್ಮತಾಳುವನು. ಹೀಗಿದೆ ಪುನರ್ಜನ್ಮದ ಕೋಟಿಕ್ರಮವು. ಪುನರ್ಜನ್ಮವಳಿಯಬೇಕಾದರೆ ಕರ್ಮಮಲವಳಿಯಬೇಕು. ಕರ್ಮಮಲವಳಿಯಬೇಕಾದರೆ ಬಿದಿರುಗಣ್ಣು ಅಥವಾ ಭಿನ್ನದೃಷ್ಟಿಯು ನಷ್ಟವಾಗಬೇಕು. ಭಿನ್ನದೃಷ್ಟಿಯು ನಷ್ಟವಾಗಬೇಕಾದರೆ ಮಲಾವರಣವು ಹರಿಯಬೇಕು. ಮಲಾವರಣವು ಹರಿಯಬೇಕಾದರೆ ಸ್ವರೂಪಸಾಕ್ಷಾತ್ಕಾರವಾಗಬೇಕು. ಮಲ-ತ್ರಯದ ಉರುಳಿನೊಳಗಿಂದ ಪಾರಾಗಲಿಕ್ಕೂ, ಕರ್ಮ—ಪುನರ್ಜನ್ಮಗಳ ದಂದುಗದಿಂದ ಬಿಡುಗಡೆಯನ್ನು ಹೊಂದಲಿಕ್ಕೂ ಸ್ವರೂಪ ಸಾಕ್ಷಾತ್ಕಾರವೊಂದೇ ಒಂದು ರಾಜಮಾರ್ಗವೆಂದು ಉಪನಿಷತ್ತುಗಳು ಹೇಳುವವು. ಮರವೆಯ ಮುಸುಕು ಹರಿದು ಮಾನವನಲ್ಲಿ ಅರುಹು ಬೆಳಗುತ್ತ ಹೋದಂತೆ ಸ್ವರೂಪಸಾಕ್ಷಾತ್ಕಾರವಾಗುತ್ತ ಹೋಗುವದು. ಆಗ ಆನಂದವು ಆವಿರ್ಭವಿಸುವದು. ಸಾಕ್ಷಾತ್ಕಾರ ಹೊಂದಿದ ವ್ಯಕ್ತಿಯು ಆನಂದಪೂರ್ಣನಾಗಿ ನಿರ್ಭಯ ವೃತ್ತಿಯಿಂದ ವ್ಯವಹರಿಸುವನು. ಇಲ್ಲಿ ಪ್ರಜ್ಞೆಯೇ ಉಪಾಯವಾಗಿ ಪರಿಣಮಿಸುವದು. ಉಪನಿಷತ್ಕಾರರು ಹಾಗು ಬುದ್ಧನು ಪ್ರಜ್ಞೆ ಮತ್ತು ಉಪಾಯಗಳಿಂದ ತತ್ವಾನ್ವೇಷಣೆಯನ್ನು ಆರಂಭ ಮಾಡಿದರೂ ಅನುಭವದ ಆತ್ಯಂತಿಕ ದೃಷ್ಟಿಯಿಂದ ಅವರೀರ್ವರ ಸಿದ್ಧಾಂತಗಳು ಪರಸ್ಪರವಾಗಿ ವಿರೋಧವಾಗಿದೆ.. ಬೌದ್ಧ ಸಿದ್ಧಾಂತದಲ್ಲಿಯ ಚತುರ್ವಿಧ ಭಾವನೆಗಳನ್ನೂ ಉಪನಿಷತ್ತಿನ ಸಿದ್ಧಾಂತದಲ್ಲಿಯ ಭಾವನೆಗಳನ್ನೂ ಹೋಲಿಸಿ ನೋಡಿದಾಗ ಈ ಮಾತಿನ ಸತ್ಯತೆಯು ಇನ್ನೂ ಮನದಟ್ಟಾಗುವದು:

ಬೌದ್ಧ ಸಿದ್ಧಾಂತದಲ್ಲಿಯ ಚತುರ್ವಿಧ ಭಾವನೆಗಳ ವರ್ಣನೆಯು ಕೆಳಗಿನಂತಿದ್ದುದು ನಮಗೆ ಕಂಡುಬರುತ್ತದೆ:

(೧) ಸರ್ವಂ ಸ್ವಲಕ್ಷಣಂ, ಸ್ವಲಕ್ಷಣಂ: ಇದರರ್ಥವಿಷ್ಟೇ, ವಿಶ್ವದಲ್ಲಿ ಎಂತಹದೇ ಒಂದು ಅಸ್ತಿತ್ವವನ್ನು ಪಡೆದ ಯಾವದೇ ವಸ್ತುವಿರಲಿ, ಅದು ತನ್ನದೇ ಆದ ಒಂದು ವಿಶಿಷ್ಟ ಲಕ್ಷಣವನ್ನು ಪಡೆದುದಿರುತ್ತದೆ. ನಿಜವಾಗಿಯೂ ಸಾಮಾನ್ಯ ಲಕ್ಷಣವೆಂಬುದೊಂದು ವಸ್ತುವೇ ಇಲ್ಲ. ಅಂತೆಯೇ ಸತ್ತಾ-ಸಾಮಾನ್ಯವೆಂಬ ಆಧಾರವು ಈ ಜಗತ್ತಿಗಿದೆಯೆಂದು ನಾವು ಒಪ್ಪಿದರೆ, ಸಾಮಾನ್ಯ ಲಕ್ಷಣವುಳ್ಳ ಒಂದು ವಸ್ತುವಿದೆಯೆಂದು ನಾವು ಒಪ್ಪಲೇಬೇಕು; ಹಾಗೆ ಒಪ್ಪಿದ ಮೇಲೆ ಪ್ರತಿಯೊಂದಕ್ಕೂ ತನ್ನದೇ ಆದ ಒಂದು ವಿಶಿಷ್ಟ ಲಕ್ಷಣವಿದೆ ಅಥವಾ 'ಸರ್ವಂ ಸ್ವಲಕ್ಷಣಂ, ಸ್ವಲಕ್ಷಣಂ' ಎಂಬ ಮಾತು ಅಸತ್ಯವಾಗಿ ಪರಿಣಮಿಸುತ್ತದೆ. ಹೀಗಿರುವದರಿಂದ ಬೌದ್ಧರು ಸಾಮಾನ್ಯ ಲಕ್ಷಣವನ್ನು ಕಿತ್ತುಹಾಕುವವರ ಜೊತೆಗೆ ಸತ್ತಾಸಾಮಾನ್ಯವನ್ನೂ ಸ್ಪಷ್ಟವಾಗಿ ಅಲ್ಲಗಳೆದಿದ್ದಾರೆ.

ಇದೇ ಸಂದರ್ಭದಲ್ಲಿ ಒಂದು ಮಹತ್ವದ ವಿಷಯವನ್ನು ನಾವು ನೋಡಬಹುದು. ಯಾವ ವಸ್ತುವಿದ್ದರೂ ಬುದ್ಧಿಗೆ ಗೋಚರವಾಗದೆ ಇದ್ದರೆ, ಇದ್ದುದಕ್ಕೂ ಇಲ್ಲದಿರುವದಕ್ಕೂ ವ್ಯತ್ಯಾಸವಿಲ್ಲ. ವಸ್ತುವಿಲ್ಲದಿದ್ದರೂ ಭ್ರಾಂತನು ಹಗ್ಗವನ್ನು ಸರ್ಪವೆಂದು ತಿಳಿದು ಭಯಪಡುವನಲ್ಲವೆ? ಸ್ವಪ್ನದಲ್ಲಿ ನಿಜವಾದ ವಸ್ತುಗಳಿಲ್ಲದಿದ್ದರೂ ಬರಿಯ ಜ್ಞಾನದಿಂದ ಸಂತೋಷ–ವ್ಯಸನಗಳು ಉಂಟಾಗುವದಿಲ್ಲವೆ? ಆದುದರಿಂದ ಜ್ಞಾನವೇ ವಸ್ತು, ಬೇರೆ ಮತ್ತೊಂದು ವಸ್ತುವಿಲ್ಲ–ಎಂಬ 'ವಿಜ್ಞಾನವಾದ'ವು ಹುಟ್ಟಿತು. ಇಲ್ಲದಿರುವ ವಸ್ತುವನ್ನು ತೋರಿಸುವದೇ ಅವಿದ್ಯೆಯೆಂಬುದು ಬೌದ್ಧರ ಮತ. ಇಲ್ಲಿ ಇಲ್ಲದಿದ್ದರೂ ಬೇರೆ ಸ್ಥಲದಲ್ಲಿರುವ ವಸ್ತುಗಳನ್ನು ತೋರಿಸುವದು ಅವಿದ್ಯೆಯೆಂಬುದು ತಾರ್ಕಿಕರ ತರ್ಕ. ಮಿಥ್ಯಾ-ವಸ್ತುಗಳನ್ನು ತೋರಿಸುವಂತಹದು ಅವಿದ್ಯೆಯೆಂದು ಅದ್ವೈತಿಗಳ ಅನಿಸಿಕೆ–ಹೇಳಿಕೆಗಳು. ಕ್ಷಣವಾದಿಗಳು ವಸ್ತುಗಳ ಸ್ಥಿತಿಯನ್ನು ನೋಡಿ 'ಸರ್ವಂ ಕ್ಷಣಿಕಂ' ಎಂದರು. ವಿಜ್ಞಾನವಾದಿಗಳು ಜ್ಞಾನವಿಲ್ಲದೆ ಬರಿಯ ವಸ್ತುವಿಚಾರ-ದಿಂದ ಯಾವ ಉಪಯೋಗವೂ ಇಲ್ಲ; ಜ್ಞಾನವೇ ಮುಖ್ಯ ಎಂದು ವಸ್ತುವಿನ ಪೂರ್ವದಿಶೆಯನ್ನು ನೋಡಿ ವಿಜ್ಞಾನವಾದಿಗಳಾದರು. ಶೂನ್ಯವಾದಿಗಳು ವಸ್ತುವಿನ ಪರ್ಯವಸಾನವನ್ನು ನೋಡಿ 'ಸರ್ವಂ ಶೂನ್ಯಂ' ಎಂದು ತಿಳಿದರು. ಈ ಮಾರ್ಗಗಳು ಕೇವಲ ದೃಷ್ಟಿಯ ಭೇದದಿಂದ ಹುಟ್ಟಿರುವವು. ಅವು ತತ್ವದಲ್ಲಿ ಒಂದೇ ಆಗಿರುವವು. ಈ ಪ್ರಪಂಚವು ನಿತ್ಯವೆಂದು ಸಾಂಖ್ಯರು, ಸ್ಥಿರವೆಂದು ತಾರ್ಕಿಕರು, ಕ್ಷಣಿಕವೆಂದು ಬೌದ್ಧರು ಬೇರೆ ಬೇರೆಯಾಗಿ ಹೇಳುವರು.

ವಸ್ತುಗಳೆಲ್ಲವು ಸ್ವಲಕ್ಷಣವುಳ್ಳವು; ಸಾಮಾನ್ಯ ಲಕ್ಷಣವೆಂಬ ವಸ್ತುವೇ ಇಲ್ಲ ಎಂದು ಬೌದ್ಧರು ಹೇಳುತ್ತಿದ್ದರೆ ಸತ್ತಾಸಾಮಾನ್ಯವಾದವನ್ನು ಸಾಂಖ್ಯರು ಅಥವಾ ವೇದಾಂತಿಗಳು ಒಪ್ಪುತ್ತಾರೆ. ಆ ಸತ್ತಾಸಾಮಾನ್ಯವನ್ನೇ 'ಆತ್ಮ, ಬ್ರಹ್ಮ' ಎಂದು ಕರೆದರು.

(೨) ಸರ್ವ ಕ್ಷಣಿಕಂ, ಕ್ಷಣಿಕಂ: ಮೇಲೆ ಹೇಳಿದಂತೆ ಈ ಜಗತ್ತು ಕ್ಷಣಿಕವೆಂದು ಹೇಳುವ ಕ್ಷಣಿಕವಾದಿಗಳ ಮೂಲ ಸೂತ್ರವೇ ಬೌದ್ಧರ ದ್ವಿತೀಯ ಭಾವನೆಯಾದ ಇದರಲ್ಲಿ ಅಡಗಿರುತ್ತವೆಂದು ಕಂಡುಬರುತ್ತದೆ.

(೩) ಸರ್ವಂ ದುಃಖಂ, ದುಃಖಂ: ಇದು ನಿರಾಶೆಯ ತೀರ ತುದಿಯ ಮಾತಾಗಿದೆ. ಇದು ನಿಜವಾಗಿಯೂ ಜಗತ್ತಿನ ಬಗೆಗೆ ತಪ್ಪು ತಿಳಿವಳಿಕೆಯನ್ನು ಹುಟ್ಟಿಸುತ್ತದೆ.

(೪) ಸರ್ವಂ ಶೂನ್ಯಂ ಶೂನ್ಯಂ: ಇಲ್ಲಿ ಮೇಲೆ ಹೇಳಿದಂತೆ ಶೂನ್ಯವಾದದ ಮಾತೇ ಬರುತ್ತದೆ. ಇದರಲ್ಲಿ ಬೌದ್ಧರ ನಿರ್ವಾಣದ ವಿಚಾರ ಅಡಕವಾದುದು ನಮಗೆ ಕಂಡುಬರುವದು. ಸರ್ವ ಕಲ್ಪನಾನಿವೃತ್ತಿಯೇ ಶೂನ್ಯತೆ ಅಥವಾ ಸರ್ವತತ್ವ ನಿಷೇಧವೇ ಶೂನ್ಯತೆಯಾಗಿದೆ.

ಬೌದ್ಧ ಸಿದ್ಧಾಂತದಲ್ಲಿಯ ಚತುರ್ವಿಧ ಭಾವನೆಗಳ ಈ ಸಂಕ್ಷಿಪ್ತವಾದ ವಿವೇಚನೆಯಿಂದ ಅದರ ಇಂಗಿತವೂ ತಿಳಿದುಬರುತ್ತದೆ. ಆದರೆ, ಅದೇ ಉಪನಿಷತ್ತುಗಳ ಚತುರ್ವಿಧ ಭಾವನೆಗಳನ್ನು ಈಗ ನೋಡಿರಿ. ಇವೆರಡರಲ್ಲಿ ಅಂತರವು ಇದೆಯೆಂಬುದು ತಿಳಿಯುವದು :

(೧) ಸರ್ವಂ ಖಲ್ವಿದಂ ಬ್ರಹ್ಮ.
(೨) ಏಕಮೇವಾದ್ವಿತೀಯಂ ಬ್ರಹ್ಮ.
(೩) ಅಯಮಾತ್ಮಾ ಬ್ರಹ್ಮ.
(೪) ಪ್ರಜ್ಞಾನಂ ಬ್ರಹ್ಮ.

ಉಪನಿಷತ್ತಿನಲ್ಲಿ ಮತ್ತೊಂದು ಕಡೆ 'ಆನಂದೋ ಬ್ರಹ್ಮ ವ್ಯಜಾನಾತ್!' ಎಂಬ ಮಾತೂ ಬರುತ್ತದೆ. 'ಸರ್ವಂ ಖಲ್ವಿದಂ ಬ್ರಹ್ಮ' ಹಾಗು 'ಆನಂದೋ ಬ್ರಹ್ಮ ವ್ಯಜಾನಾತ್' ಎಂಬ ಮಾತುಗಳೆರಡರ ಸಮೀಕರಣವನ್ನು ಹೀಗೆ **ತೋರಿಸಬಹುದು** :

'ಸರ್ವಂ ಖಲ್ವಿದಂ ಬ್ರಹ್ಮ', 'ಆನಂದೋ ಬ್ರಹ್ಮೇತಿ ವ್ಯಜಾನಾತ್ ।' ಇಲ್ಲಿ 'ಬ್ರಹ್ಮ' ಎಂಬುದು ಎರಡರಲ್ಲಿಯೂ ಸಾಮಾನ್ಯ ಪದವಾಗಿದೆ. ಎರಡ-ರಿಂದಲೂ ಅದನ್ನು ತೆಗೆದು ಹಾಕಲಾಗಿ ಉಳಿಯುವ ಸಮೀಕರಣವಿದು. 'ಸರ್ವಂ ಖಲ್ವಿದಂ, ಆನಂದೋ ಇತಿ ವ್ಯಜಾನಾತ್' ಅರ್ಥಾತ್ ತೋರುವೀ ಸೃಷ್ಟಿಯೆಲ್ಲವೂ ಆನಂದವೇ ಆಗಿದೆ. ಇಲ್ಲವೆ ಆನಂದಮಯವಾಗಿದೆ. ಅತ್ಯಂತ ಉತ್ಕೃಷ್ಟವಾದ ವಿಚಾರವಿದು ! ಬೌದ್ಧಮತವು ನಿರಾಶಾವಾದದಲ್ಲಿ ನಿಲುಕಡೆಯನ್ನು ಹೊಂದಿದರೆ ಹಿಂದೂ ಧರ್ಮ ಇಲ್ಲವೆ ಉಪನಿಷತ್ತುಗಳ ವಿಚಾರವು ಆಶಾವಾದದಲ್ಲಿ ಆಶ್ರಯ ವನ್ನು ಪಡೆಯುತ್ತದೆ. ಜಗತ್ತಿಗೆ ಹಿತವಾದ, ಮಿತವಾದ ಆಶಾವಾದದಿಂದಲೇ ಕಲ್ಯಾಣವಾಗಬೇಕು; ಕಲ್ಯಾಣವಾಗುತ್ತದೆ. ನಿರಾಶಾವಾದದ ಹಿಡಿತದಲ್ಲಿ ಸಿಲುಕಿದ ಯಾವ ಜನಾಂಗವೂ ಉದ್ಧಾರಕವಾದ ಮಾರ್ಗವನ್ನು ಹೊಂದಲಾರದು. ಆದುದರಿಂದ ವ್ಯಕ್ತಿಗತ ಆತ್ಮನೂ, ವಿಶ್ವಗತ ಆತ್ಮನೂ, ವಿಶ್ವಾತೀತ ಆತ್ಮನೂ ಎಲ್ಲವೂ ಆನಂದಮಯವಾಗಿದೆ. ಈ ಆತ್ಮತ್ರಯರನ್ನು ಅರಿಯುವ ಪ್ರಜ್ಞಾನವೂ ಆನಂದವೇ. 'ಪ್ರಜ್ಞಾನಂ ಬ್ರಹ್ಮ' = 'ಆನಂದೋ ಬ್ರಹ್ಮೇತಿ ವ್ಯಜಾನಾತ್ ।' ಎಂಬ ಸಮೀಕರಣದಿಂದ ಈ ಮಾತು ಸಿದ್ಧವಾಗುತ್ತದೆ ! ಇಂತಹ ಉತ್ತಮೋತ್ತಮವಾದ ವಿಚಾರಸರಣಿಯೇ ತಾರಕವಾಗುವದು ಎಂದು ಹೇಳಬೇಕು. ಹೀಗೆ ಇವರೀರ್ವರ ದರ್ಶನಗಳನ್ನು ಹೋಲಿಸಿ ನೋಡಿದರೆ ಇವೆರಡೂ ದರ್ಶನಗಳು ಅನುಭವದ ಆತ್ಯಂತಿಕ ದೃಷ್ಟಿಯಿಂದ ಉತ್ತರಧ್ರುವ–ದಕ್ಷಿಣಧ್ರುವಗಳಂತೆ ಪರಸ್ಪರ ವಿರೋಧಿಯಾಗಿವೆ. ಉಪನಿಷತ್ತಿನ ಅನುಭವವು ಆನಂದದಲ್ಲಿ ಪರ್ಯವಸಾನ ಹೊಂದಿದರೆ ಬೌದ್ಧಮತದ ಅನುಭವವು ನಿರಾಶಾವಾದದಲ್ಲಿ ನಿಲುಕಡೆಯನ್ನು ಹೊಂದುವದು.

---

# ನೀತಿಧರ್ಮ

ನೀತಿಗೂ ಧರ್ಮಕ್ಕೂ ನಿಕಟ ಸಂಬಂಧವಿದೆ. ನೀತಿಯ ತಳಹದಿಯಿಲ್ಲ-ದಿದ್ದರೆ ಧರ್ಮದ ಮಂದಿರವು ಭದ್ರವಾಗಿ ಬಾಳಲಾರದು. ನೀತಿಯ ಆಶ್ರಯವು ಇಲ್ಲವೆ ಆಧಾರವು ತಪ್ಪಿದ್ದರೆ ಧರ್ಮಕ್ಕೆ ಅಗ್ರಸ್ಥಾನವು ದೊರಕದು. ಆಗ ನಾವು ಗೌಣವಾದ ಹಾಗು ಶುಷ್ಕವಾದ ಜೀವನವನ್ನು ನಾಗಿಸಬೇಕಾಗುತ್ತದೆ. ನೀತಿಧರ್ಮಗಳು ಜೀವನವೆಂಬ ಒಂದು ನಾಣ್ಯದ ಎರಡು ಮಗ್ಗಲುಗಳಿ-ದ್ದಂತೆ. ಒಂದನ್ನು ಬಿಟ್ಟು ಇನ್ನೊಂದಿರಲಾರದು ಮತ್ತು ಹಾಗೆ ಇರುವದೇ ಇಲ್ಲ. ಒಂದು ಇನ್ನೊಂದಕ್ಕೆ ಅನಿವಾರ್ಯವಾಗಿ ಬೇಕೇ ಬೇಕು. ಅಧ್ಯಾತ್ಮ ಜೀವನದ ಗುರಿಯು ನೀತಿಧರ್ಮಗಳ ಸೆಣಸಾಟದಲ್ಲಿಲ್ಲ, ಆದರೆ ಅವೆರಡರ ಸಾಮರಸ್ಯ-ದಲ್ಲಿದೆ, ಮಧುರ ಬಾಂಧವ್ಯದಲ್ಲಿದೆ.

ಸಾಮಾನ್ಯವಾಗಿ ನೀತಿಯು ಮಾನವ-ಮಾನವರಲ್ಲಿರುವ ಹಾಗು ಇರ-ಬೇಕಾದ ಸಂಬಂಧವನ್ನು ಹೇಳಿದರೆ ಧರ್ಮವು ವ್ಯಕ್ತಿ–ವಿಶ್ವಗಳ ಸಂಬಂಧವನ್ನು ಹೇಳುತ್ತದೆ. ಆದರೆ ನೀತಿಯ ನಿರ್ಣಯವನ್ನು ಕೇವಲ ಭೌತಿಕ ದೃಷ್ಟಿ-ಯಿಂದಾಗಲಿ ಇಲ್ಲವೆ ಲೌಕಿಕ ದೃಷ್ಟಿಯಿಂದಾಗಲಿ ಮಾಡಿದರೆ ಸಾಲದು. ಅದನ್ನು ಆಧ್ಯಾತ್ಮಿಕ ಅಥವಾ ಪಾರಲೌಕಿಕ ದೃಷ್ಟಿಯಿಂದ ಮಾಡಿದರೆ ಮಾತ್ರ ನೀತಿಯ ಪೂರ್ಣ ಉಪಪತ್ತಿಯು ದೊರಕುವದು. ಪಾಶ್ಚಿಮಾತ್ಯ ಪಂಡಿತರಲ್ಲಿ ಅನೇಕರು ಆಧ್ಯಾತ್ಮಿಕ ದೃಷ್ಟಿಯು ಗೌಣವೆಂದು ಬಗೆದು ನೀತಿಶಾಸ್ತ್ರದ ವಿವೇಚನೆಯನ್ನು ಕೇವಲ ಭೌತಿಕ ದೃಷ್ಟಿಯಿಂದ ಮಾಡಿರುವರು. ಮಾನವನು ಮಾಡುವ ಪ್ರತಿ-ಯೊಂದು ಕಾರ್ಯದ ಉದ್ದೇಶವು ಸುಖಪ್ರಾಪ್ತಿ ಅಥವಾ ದುಃಖನಿವಾರಣೆಯೇ ಆಗಿರುವದೆಂದು ಹೇಳಲಾಗುತ್ತಿದೆ. ಅದು ಒಳ್ಳೆಯದು ಅಥವಾ ಕೆಟ್ಟದು ಎಂಬುದನ್ನು ನಮಗೆ ಪ್ರತ್ಯಕ್ಷವಾಗಿ ತೋರಿಸುವ ಆ ಕಾರ್ಯದ ಬಾಹ್ಯ ಪರಿ-ಣಾಮಗಳನ್ನು ನೋಡಿಯೇ ನಿರ್ಣಯಿಸಬೇಕು. ಹೀಗೆ ಕೇವಲ ಬಾಹ್ಯ ಹಾಗು ದೃಶ್ಯ ಪರಿಣಾಮಗಳ ಲಾಘವ ಗೌರವಗಳನ್ನು ನೋಡಿ ನೀತಿಮತ್ತೆಯನ್ನು ನಿರ್ಣಯಿಸುವ ಈ ಸುಲಭವಾದ ಶಾಸ್ತ್ರೀಯ ಯುಕ್ತಿಗೆ 'ಭೌತಿಕವಾದ' ಎಂದು ಹೆಸರಿದೆ. ಈ ಭೌತಿಕವಾದವು ವೈಯಕ್ತಿಕ ಸ್ವಾರ್ಥ ಸುಖದಿಂದ ಆರಂಭವಾಗಿ ಬಹುಜನರ ಬಹುಸುಖದಲ್ಲಿ ಪರ್ಯವಸಾನಗೊಳ್ಳುತ್ತದೆ. ಆದರೂ ಆದರ

ಮೂಲ ಉಪಪತ್ತಿಯು ಭೌತಿಕವೇ ಆಗಿದೆ. ವೈಯಕ್ತಿಕ ಸ್ವಾರ್ಥ ಸುಖವಾದವು ಪರೋಪಕಾರ ಪರಲೋಕ ಆತ್ಮಪರಮಾತ್ಮ ಮುಂತಾದ ಆಧ್ಯಾತ್ಮಿಕ ಕಲ್ಪನೆ-ಗಳನ್ನು ಒಪ್ಪಿಕೊಳ್ಳುವದಿಲ್ಲ. ಈ ಲೋಕದಲ್ಲಿ ಸತ್ಯವಾದುದು ಸ್ವಾರ್ಥ ಒಂದೇ, ತನ್ನ ಹಿತ ಒಂದೇ. ಅದು ಯಾವ ಕಾರ್ಯದಿಂದಲೇ ಆಗಲೊಲ್ಲದೇಕೆ, ಅದರಿಂದ ಬಾಹ್ಯ ಸುಖವು ಹೆಚ್ಚಿದರಾಯಿತು. ಬಾಹ್ಯ ಸುಖದ ಹೆಚ್ಚಳವೇ ಆ ಕಾರ್ಯದ ನೀತಿಯ ಮೌಲ್ಯವನ್ನು ನಿರ್ಣಯಿಸುವ ಕಸತಿಗೋಲು. ಲೋಕದ ಬಹುಜನರು ಇದನ್ನು ಒಪ್ಪಿ ಅಪ್ಪಿಕೊಳ್ಳುವದರಿಂದ ಇದಕ್ಕೆ ಲೋಕಾಯತವೆಂದು ಹೆಸರು ಬಂದಿದೆ. ಒಮ್ಮೊಮ್ಮೆ ಇದನ್ನು ಚಾರ್ವಾಕ ಮತವೆಂದೂ ಕರೆಯ-ಲಾಗುತ್ತದೆ. 'ಚಾರುಃ ಲೋಕಸಮ್ಮತಃ ವಾಕೋ ವಾಕ್ಯಂ ಯಸ್ಯ' ಎಂಬ ಈ ಚಾರ್ವಾಕ ಪದದ ವ್ಯುತ್ಪತ್ತಿಯಲ್ಲಿ ಚಾರು ವಾಕ್ ಎಂಬ ಪದಗಳಿಗೆ ಸವಿ ಮಾತು ಎಂಬ ಅರ್ಥವು ದೊರೆಯುತ್ತದೆ. ಯಾವ ರೀತಿಯಿಂದಲೇ ಆಗಲೊಲ್ಲದು, ತನ್ನ ಸ್ವಂತದ ಸುಖವನ್ನು ಹೆಚ್ಚಿಸಿಕೊಂಡರಾಯಿತು ಎಂದು ಹೇಳುವ ಮಾತು ಜನಸಾಮಾನ್ಯರಿಗೆ ಸವಿಯಾಗದೆ ಏನುಮಾಡೀತು? ಇಂಥ ಚಾರುವಾಕಿನ ಇಲ್ಲವೆ ಸವಿ ಮಾತಿನ ಅಭಿಪ್ರಾಯಕ್ಕೆ ಚಾರ್ವಾಕ ಮತವೆಂದು ಹೆಸರುಂಟಾದರೆ ಅಚ್ಚರಿಯಲ್ಲ. ಇಂತೀ ಮತವು ಲೋಕಸಾಮಾನ್ಯವಾಗಿರು-ವದರಿಂದ ಲೋಕಾಯುತ ಮತವೂ ಅಹುದು.

ಸ್ವಾರ್ಥ ಅಥವಾ ಸ್ವಂತದ ಸುಖವೇ ಧ್ಯೇಯವಾಗಿರುವ ಈ ಚಾರ್ವಾಕ ಅಥವಾ ಭೌತಿಕ ವಾದವು ಪರರಿಗೆ ಸೌಕರ್ಯಗಳನ್ನು ಕಲ್ಪಿಸಿಕೊಡುವಲ್ಲಿಯೂ, ಪರೋಪಕಾರ ಭೂತದಯೆ ಅಹಿಂಸೆ ಮುಂತಾದ ಸದ್ಗುಣಗಳನ್ನು ಆಚರಿಸು-ವದರಲ್ಲಿಯೂ ಸ್ವಾರ್ಥದ ಹಿಗ್ಗಿದ ಸ್ವರೂಪವನ್ನೇ ವ್ಯಕ್ತಗೊಳಿಸುತ್ತದೆ. ನಾವು ಪರರಿಗೆ ಸೌಕರ್ಯ-ಸೌಲಭ್ಯಗಳನ್ನು ಕಲ್ಪಿಸಿಕೊಡದಿದ್ದರೆ ಪ್ರತಿಯಾಗಿ ಅವರು ನಮಗೆ ಸೌಕರ್ಯ-ಸೌಲಭ್ಯಗಳನ್ನು ಒದಗಿಸಿಕೊಡುವದಿಲ್ಲ. ಅದರಿಂದ ನಮಗೆ ಆಗ ದುಃಖವಾಗುವದು. ನಮಗೆ ಸುಖವಾಗಬೇಕೆಂಬ ಉದ್ದೇಶ-ದಿಂದಲೇ ನಾವು ಅನ್ಯರಿಗೆ ಅನುಕೂಲತೆಗಳನ್ನು ಒದಗಿಸಿಕೊಡುತ್ತೇವೆ. ಹಾಗೆಯೆ ಅಹಿಂಸೆ ಭೂತದಯೆ ಇತ್ಯಾದಿಗಳನ್ನು ಕುರಿತು ನುಡಿಯಬಹುದು. ನಾವು ಅನ್ಯರನ್ನು ಹಿಂಸಿಸಿದರೆ ಅವರು ಪ್ರತಿಯಾಗಿ ನಮಗೆ ಹಿಂಸೆ ಮಾಡದೆ ಬಿಡರು ಎಂಬೀ ಸ್ವಾರ್ಥದ ಮೂಲಕವೆ ಅಹಿಂಸೆಯನ್ನಾಚರಿಸುವದು. ನಮಗೆ ದುಃಖವಾದರೆ ನಾವು ಅಳುವಂತೆಯೆ ಪರರಿಗೆ ದುಃಖವಾಗಲು ನಮಗೆ ದಯೆಯು

ಉಂಟಾಗುತ್ತದೆ. ತೋರಿಕೆಗೆ ಅನ್ಯರ ಸುಖಕ್ಕಾಗಿ ಇರುವಂತೆ ಕಾಣುವ ಪರೋಪಕಾರ ಔದಾರ್ಯ ದಯೆ ಕರುಣೆ ಕೃತಜ್ಞತೆ ವಿನೀತಭಾವ ಇಲ್ಲವೆ ವಿನಯ ಮುಂತಾದ ಗುಣಗಳ ಮೂಲವನ್ನು ಶೋಧಿಸಿದರೆ ಅವು ಸ್ವಂತ ಸುಖ ಪ್ರಾಪ್ತಿಯ ಇಲ್ಲವೆ ದುಃಖ ನಿವಾರಣೆಯ ಪರ್ಯಾಯಗಳಾಗಿರುತ್ತವೆ ಎಂದು ಕಂಡುಬರುವದು. ತಾಯಿಯು ಮಗುವಿಗೆ ಹಾಲುಣಿಸಲಿಕ್ಕೆ ಕೇವಲ ಮಗುವಿನ ಮೇಲಿನ ತಾಯಿಯ ಪ್ರೇಮವೇ ಕಾರಣವಲ್ಲ. ಹಾಲಿನಿಂದ ಮೊಲೆಗಳು ಬಿಗಿದು ಪೀಡೆಯುಂಟಾಗಲು ಅದನ್ನು ಕಳೆದುಕೊಳ್ಳುವದಕ್ಕಾಗಿಯಾಗಲಿ ಇಲ್ಲವೆ ಮಗನು ದೊಡ್ಡವನಾದ ಮೇಲೆ ತನ್ನನ್ನು ಸಂರಕ್ಷಿಸಲೆಂಬ ಉದ್ದೇಶದಿಂದಾಗಲಿ ತಾಯಿಯು ಮಗನಿಗೆ ಮೊಲೆಯುಣಿಸುವ ಒಂದು ಸ್ವಾರ್ಥಸಾಧುವಾದ ಉಪಾಯವನ್ನು ಯೋಜಿಸುತ್ತಾಳೆ ಎಂದು ಹೇಳುತ್ತಿದೆ ಈ ಚಾರ್ವಾಕ ವಾದವು. ಈ ಭೌತಿಕ ಮತವು, ಹೀಗೆ 'ನಿನ್ನೊಡನೆ ಅನ್ಯರು ಅದೆಂತು ನಡೆದು ಕೊಳ್ಳಬೇಕೆಂದು ಅಪೇಕ್ಷಿಸುವಿಯೋ ಅಂತೆಯೇ ನೀನೂ ಅವರೊಡನೆ ಮೊದಲು ವ್ಯವಹರಿಸು' ಎಂಬುದೇ ಮಾನವಕುಲಕ್ಕೆ ತಾರಕವಾದ ನೀತಿ—ಧರ್ಮದ ನೆಲೆಯಾಗಿದೆಯೆಂದು ಅದು ಬೋಧಿಸುತ್ತದೆ.

ಈ ಸ್ವಾರ್ಥವಾದ ( Egoism ) ಕ್ಕೆ ಪ್ರತಿಯಾಗಿ ಪರಾರ್ಥವಾದ (Altruism) ವೊಂದಿದೆ. ಅದರ ಪುರಸ್ಕರ್ತರು ಹೀಗೆ ಹೇಳುತ್ತಾರೆ : ಮನುಷ್ಯ ಸ್ವಭಾವವು ಕೇವಲ ಸ್ವಾರ್ಥಪರವಾಗಿಲ್ಲ; ಸ್ವಾರ್ಥದಂತೆಯೆ ಭೂತದಯೆ ಪ್ರೇಮ ಕೃತಜ್ಞತೆ ಮುಂತಾದ ಗುಣಗಳೂ ಸಹ ಹೆಚ್ಚುಕಡಿಮೆ ಪ್ರಮಾಣದಿಂದ ಮನುಷ್ಯನಲ್ಲಿ ಜನ್ಮತಃ ವಾಸವಾಗಿರುತ್ತವೆ. ತಾಯಿಯಲ್ಲಿ ಈ ಪರಾರ್ಥ ಗುಣದ ಪಾರಮ್ಯವನ್ನು ನಾವು ಕಾಣಬಹುದು. ಈ ಮಾತನ್ನು ಒಂದು ಸುಂದರವಾದ ಸಂಭಾಷಣೆಯ ರೂಪದಲ್ಲಿ ಜ್ಞಾನಿಗಳು ಹೀಗೆ ವಿಶದ ಪಡಿಸುತ್ತಾರೆ:

ಮಗು : ಅವ್ವಾ, ನಾನು ನಿನ್ನ ಹೊಟ್ಟೆಯಲ್ಲಿ ಮೂಡಿದಾಗಿನಿಂದಲೆ ನಿನಗೆ ಅದೆಷ್ಟು ದುಃಖವನ್ನು ಕೊಟ್ಟೆನೇನೋ ! ಅವ್ವಾ, ನಿನಗೆ ಪ್ರಸವ ವೇದನೆಯ ಕಾಲಕ್ಕಂತೂ ಆದ ದುಃಖವು ಅಪಾರವಾಗಿರಬೇಕು. ಆಗ ನಿನ್ನ ಕಣ್ಣುಗಳಿಂದ ಕಣ್ಣೀರು ಕೋಡಿವರಿದು ಸುರಿಯುತ್ತಿತ್ತಂತೆ; ಹೌದೇನಮ್ಮಾ ?

ತಾಯಿ : ಇಲ್ಲ, ಮಗು ! ನೀನು ನನ್ನ ಉದರದಲ್ಲಿ ಉದಯಿಸಿದ ಕ್ಷಣದಿಂದಲೂ ನನಗೆ ಆಗುತ್ತಿರುವ ಆನಂದವು ಅಪಾರವಾದುದು. ಮಗುವೆ,

ನಾನು ನಿನ್ನನ್ನು ಹೆರುತ್ತಿರುವಾಗ ನನ್ನ ಕಣ್ಣುಗಳಲ್ಲಿ ತೋರಿದ ಕಂಬನಿಯು ಪ್ರಸವವೇದನೆಯ ದುಃಖದಿಂದಲ್ಲ. ಅವು ಸುಪುತ್ರ ಸೂರ್ಯನ ಉದಯವು ನನ್ನ ಉದರದಿಂದ ಆಯಿತಲ್ಲ—ಎಂಬ ಆನಂದಾಶ್ರುಗಳು !!

ಮಗು : ನೀನೇನು ಹೇಳುವಿಯಮ್ಮಾ? ನಾನು ಹುಟ್ಟಿ ನಿನಗೆ ಕೊಡುವ ಉಪಟಳ, ನಾನು ರೋಗ–ರುಜಿನಗಳಿಗೆ ತುತ್ತಾದಾಗ ನಿನಗಾಗುವ ವ್ಯಸನ—ಹೀಗೆ ಒಂದೇ ಎರಡೇ ಅನೇಕ ತರಹದ ದುಃಖವು ನಿನಗಾಗುತ್ತಿದ್ದರೂ ನಿನ್ನ ಅಂತಃಕರಣದ ಔದಾರ್ಯಕ್ಕೆ ತಕ್ಕಂತೆ ದುಃಖಾಶ್ರುವಿನ ಬದಲು ಆನಂದಾಶ್ರುಗಳು ಹರಿದವೆಂದೇ ಹೇಳುತ್ತೀಯಲ್ಲಮ್ಮಾ! ಇದಕ್ಕಾಗಿ ನಾನೆಷ್ಟು ಕೃತಜ್ಞನಾಗಿದ್ದರೂ ಕಡಿಮೆಯೇ !! ಇದಕ್ಕಾಗಿ ನಮ್ಮ ಗುರುಗಳು 'ಮಾತೃದೇವೋ ಭವ !' ಎಂಬುದನ್ನೇ ಮೊದಲು ಹೇಳುತ್ತಾರೆ.

ತಾಯಿ : ಮಗು, ನೀನು ನನಗೆ ಕೃತಜ್ಞನಾಗುವ ಕಾರಣವೇ ಇಲ್ಲವಪ್ಪಾ! ನಾನು ನಿನಗೆ ಕೃತಜ್ಞಳಾಗಿರಬೇಕು !! 'ಅಪುತ್ರಸ್ಯ ಗತಿರ್ನಾಸ್ತಿ' ಎಂದು ಹೇಳುವದಿಲ್ಲವೆ? 'ಪುತ್ರ' ಎಂದರೆ ಸಾಮಾನ್ಯವೆ ಮಗು? 'ಪುನ್ನಾಮನರಕಾತ್ ತ್ರಾಯತೆ ಇತಿ ಪುತ್ರಃ' ಎಂದು ಶಾಸ್ತ್ರವು ಸಾರಿ ಹೇಳುವದಿಲ್ಲವೇ? ಅಯ್ಯೋ ನನ್ನ ಹಡದಪ್ಪಾ! ನೀನು ಹುಟ್ಟಿಯೇ ಸಮಾಜದ ಕಾಕದೃಷ್ಟಿಯಿಂದ ನನ್ನನ್ನು ಪಾರು ಮಾಡಿದೆ. ನೀನು ಹುಟ್ಟದಿದ್ದರೆ 'ಬಂಜೆ' ಎಂದು ಎಲ್ಲರೂ ನನ್ನನ್ನು ಹಂಗಿಸುತ್ತಿದ್ದರು. ಆದುದರಿಂದ ಮಗು, ನಿನಗೆ ನಾನು ಅತ್ಯಂತ ಕೃತಜ್ಞಳಾಗಿರಬೇಕಪ್ಪಾ!

ಹೀಗೆಯೇ ತಾಯಿ-ಮಕ್ಕಳ ಸಂಭಾಷಣೆಯು ಸಂವಾದರೂಪದಲ್ಲಿ ಮುಂದುವರಿದು ಕೊನೆಗೆ ತಾಯಿಯು 'ಮಗು, ನೀನು ನಯನಾನಂದಕರನಾಗಿದ್ದೀ! ನೀನು ನನ್ನ ಎದೆಯನ್ನು ಆನಂದದಿಂದ ತುಂಬುತ್ತೀ!! ಅಹಹ! ಅದೆಂತಹ ಸ್ವರ್ಗೀಯ ಆನಂದವದು! ಮುದ್ದು–ಮುಗ್ಧಾಣಿಗೆ ದೊರಕದ ಅನುಪಮ ಆನಂದವು ಅದಾಗಿದೆ. ಮಗು, ಅಂತೆಯೇ ನಿನ್ನನ್ನು 'ನಂದನ!' ಎಂದು ಕರೆಯುವದು ಅತ್ಯಂತ ಯೋಗ್ಯವಾಗಿದೆ, ಅನ್ವರ್ಥಕವಾಗಿದೆಯಪ್ಪಾ! ಇದಕ್ಕಾಗಿ ನಾನು ನಿನಗೆ ಋಣಿಯಾಗಬೇಡವೆ ಮಗು? ಎಂದು ಪುನಃ ಕೃತಜ್ಞತಾ ಭಾವದೊಡನೆ ಆನಂದಾಶ್ರುಧಾರೆಯು ಕಂಗಳಿಂದ ಕವಲುಗೊಂಡು ಹರಿಯುತ್ತಿರಲು ಆ ತಾಯಿಯು ಮಗುವನ್ನು ಅಪ್ಪಿಕೊಳ್ಳುವಳು. ನೋಡಿದಿರಾ,

ತಾಯಿಯ ಅಂತಃಕರಣದ ಘನವಾದ ಔದಾರ್ಯವನ್ನು ! ಪರಾರ್ಥದೃಷ್ಟಿಯ ಪಾರಮ್ಯವನ್ನು !! ಭೌತಿಕವಾದದ ತಾಯಿಯ ಕಲ್ಪನೆಗೂ ಆಧ್ಯಾತ್ಮಿಕವಾದದ ತಾಯಿಯ ಈ ಕಲ್ಪನೆಗೂ ಎಷ್ಟು ಅಂತರವಿದೆ ಎಂಬುದನ್ನು ಊಹಿಸಬಹುದು ! ಬೆಟ್ಟದಷ್ಟು ಕಷ್ಟವನ್ನು ಸಹಿಸಿ ಮಗುವಿಗಾಗಿ ತಾಯಿಯು ಪ್ರಾಣಾರ್ಪಣವನ್ನೂ ಮಾಡಲು ಹಿಂದು ಮುಂದು ನೋಡುವದಿಲ್ಲ. ಇದು ಕೇವಲ ಮನುಷ್ಯಪ್ರಾಣಿ ಗಷ್ಟೇ ಅನ್ವಯಿಸುವದಿಲ್ಲ. ಹೆಣ್ಣು ಹುಲಿಯಂತಹ ಕ್ರೂರ ಮೃಗವು ಸಹ ತನ್ನ ಮರಿಯ ರಕ್ಷಣಾರ್ಥವಾಗಿ ಜೀವವನ್ನೂ ಕೊಡಲು ಸಿದ್ಧವಾಗುವದನ್ನು ನಾವು ನೋಡುವದಿಲ್ಲವೆ? ಅಂದ ಬಳಿಕ, ಪ್ರೇಮ ಪರೋಪಕಾರ ಕೃತಜ್ಞತೆ, ಕರುಣೆ ಮುಂತಾದ ಗುಣಗಳು ಕೇವಲ ಸ್ವಾರ್ಥ ಮೂಲಕವೇ ಉತ್ಪನ್ನವಾ-ಗಿರುತ್ತವೆಂಬುದು ಸರಿಯಾಗದು. ಇಷ್ಟು ಬೇಕಾದರೆ ಹೇಳಬಹುದು— ಮನುಷ್ಯನಲ್ಲಿ ಸ್ವಾರ್ಥಪರ ಗುಣಗಳೇ ಅಧಿಕವಾಗಿವೆ. ಪರಾರ್ಥದ ಗುಣಗಳು ಅಲ್ಪವಾಗಿವೆ ಎಂದು. ಆದರೆ ಅವು ಇಲ್ಲವೆಂದೇ ಹೇಳುವದು ಇಲ್ಲವೆ ಅವು ಸ್ವಾರ್ಥದ ಬೇರೆ ಸ್ವರೂಪಗಳಾಗಿವೆಯೆಂದು ತಿಳಿಯುವದು ತೀರ ತಪ್ಪು. ಪರಾರ್ಥ ಗುಣಗಳು ಅಲ್ಪ ಪ್ರಮಾಣದಲ್ಲಿ ಇರುವವೆಂದೇ ಅವುಗಳ ಮಹತ್ವವು ಹೆಚ್ಚಿದೆ; ಹೀಗೆ ಹೇಳುವದರ ಜೊತೆಗೆ ಅವುಗಳ ಬೆಳವಣಿಗೆಯಿಂದಲೇ ಮಾನವ ನಿಗೆ ನಿಜವಾದ ಸುಖವು ಸಿಗುತ್ತದೆ, ಆದಕ್ಕಾಗಿ ಅವುಗಳಿಗೆ ಮಹತ್ವವು ಬಂದಿದೆ— ಎಂದೂ ಹೇಳಬಹುದು.

ಈ ಪರಾರ್ಥದೃಷ್ಟಿಯಿಂದ ನೋಡಿದರೆ, ಬಹುಜನರ ಬಹುಸುಖವೆಂಬ ವಾದವು ಕೇವಲ ಸ್ವಾರ್ಥಮೂಲಕ ಹುಟ್ಟಿದಂತೆ ಕಂಡುಬರುವದಿಲ್ಲ. ಯಾಕಂದರೆ ಅನೇಕ ಜನ ಸತ್ಯಾಗ್ರಹಿಗಳು ರಾಷ್ಟ್ರಕ್ಕಾಗಿ ಪ್ರಾಣವನ್ನೆ ಪಣಕ್ಕಿಡಲಿಲ್ಲವೇ ? ಇದರಲ್ಲಿ ಆ ಸತ್ಯಾಗ್ರಹಿಗಳ ಸ್ವಾರ್ಥವೇನಿದೆ ? ಕೀರ್ತಿಯನ್ನು ಹೊಂದ-ಬೇಕೆಂದೋ ? ಅಲ್ಲ, ಸರ್ವಥಾ ಹಾಗಲ್ಲ ! ನೀವು ಅವರನ್ನು ಗೌರವಿಸಿದರೇನು ಬಿಟ್ಟರೇನು ? ಅದರ ಪರಿವೆಯೇ ಅವರಿಗಿಲ್ಲ. ಆದರೆ ತಮ್ಮ ರಾಷ್ಟ್ರಬಾಂಧವರು ದಾಸ್ಯದಲ್ಲಿ ಬಿದ್ದು ತೊಳಲದೆ ಸ್ವತಂತ್ರರಾಗಿ ಬಾಳಲೆಂಬ ಪರಾರ್ಥದೃಷ್ಟಿಯಿಂದ ಅವರು ತಮ್ಮ ಪ್ರಾಣಗಳನ್ನು ಅರ್ಪಿಸಿದರು. 'ನಾವು ಸ್ವಾತಂತ್ರ್ಯಕ್ಕಾಗಿ ಹೋರಾಡಿ ೧೯೪೭ ನೆಯ ವರುಷ ಅದನ್ನು ಗೆದ್ದೆವು. ಆದರೆ ಈ ಸ್ವಾತಂತ್ರ್ಯ ಸಂಗ್ರಾಮವು ೧೮೫೭ ರಲ್ಲಿಯೇ ರೂಪಧಾರಣ ಮಾಡುತ್ತದೆ. ಇಂತಹ ವೈಭವಯುತ ಸಂಗ್ರಾಮವು ಸರಿಯಾಗಿ ೯೦ ವರುಷಗಳ ವರೆಗೆ ಅವ್ಯಾಹತವಾಗಿ

ಸಾಗಿ ಅವರಲ್ಲಿ ಅನೇಕ ವೀರ ಸೇನಾಧಿಪತಿಗಳೂ ಶೂರ ಸೇನಾನಿಗಳೂ ನಗ-ನಗುತ್ತ ದೇಶದ ಕಲ್ಯಾಣಕ್ಕಾಗಿ ತಮ್ಮ ಪ್ರಾಣಗಳನ್ನು ತೆತ್ತರು. ಇಂದು ಆ ಎಲ್ಲ ಸೇನಾಧಿಪತಿಗಳೂ, ಸೈನಿಕರೂ, ಸತ್ಯಾಗ್ರಹಿಗಳೂ, ಸ್ವಾತಂತ್ರ್ಯವೀರರೂ ನಮ್ಮ ಮಧ್ಯದಲ್ಲಿಲ್ಲ. ಅವರು ಮಡಿದುಹೋದರೂ ಅವರು ದುಡಿದ ಫಲ ನಮ್ಮದಾಗಿದೆ. ಆ ಫಲದ ಸಾರ್ಥಕತೆಯು ನಮ್ಮ ರಾಷ್ಟ್ರಜೀವನದ ರೀತಿ–ನೀತಿಯನ್ನು ಅವಲಂಬಿಸಿದೆ. ಇವೆಲ್ಲವೂ ಪರಾರ್ಥದೃಷ್ಟಿಯ ಪರಿಣಾಮವಲ್ಲದೆ ಮತ್ತೇನು?' [We fought for freedom and won it in the year 1947. But the struggle for freedom dates from the year 1857 and in their glorious struggle which lasted for 90 years many Captains and Soldiers of freedom laid down their lives cheerfully for the benefit of posterity. To-day all those Captains and Soldiers are not with us. But the benefit of their lives is with us. What we can do with that benefit depends on how we behave ourselves towards the nation?]

ಸಾಧು–ಸಂತರ ಜೀವನವನ್ನೇ ತೆಗೆದುಕೊಳ್ಳಿರಿ. ಅವರ ಜೀವನವು ಜಗತ್ತಿನ ಕಲ್ಯಾಣಕ್ಕಾಗಿಯೇ ಇದ್ದು ಅವರು ಪರೋಪಕಾರಕ್ಕಾಗಿಯೇ ತಮ್ಮ ದೇಹವನ್ನು ಸವೆಯಿಸುತ್ತಾರಲ್ಲವೆ? ಸರ್ವ ಪ್ರಾಣಿಗಳ ಕಲ್ಯಾಣಕ್ಕಾಗಿಯೇ ಅವರು ಹೆಣಗುತ್ತರಲ್ಲವೆ? ಸಕಲ ಪ್ರಾಣಿಗಳ ಲೇಸನ್ನೇ ಅವರು ಬಯಸುತ್ತಾರ-ಲ್ಲವೆ? ಇದರಲ್ಲಿ ಅವರ ವೈಯಕ್ತಿಕ ಸ್ವಾರ್ಥವು ಏನಿದೆ? ನಿಜವಾಗಿಯೂ ಸತ್ಪುರುಷರು ತಮ್ಮ ದೇಹವನ್ನು ಲೋಕಕಲ್ಯಾಣಕ್ಕಾಗಿ— ಅದುವೇ ಅವರ ಏಕಮೇವ ಧ್ಯೇಯ ಕಬ್ಬಿನಂತೆ, ಚಿನ್ನದಂತೆ, ಶ್ರೀಗಂಧದಂತೆ— ಸವೆಸುತ್ತಾರೆ. ಕಬ್ಬು ಗಾಣದಲ್ಲಿ ಸಿಕ್ಕು ಹಿಂಡಿಸಿಕೊಂಡು ಹಾಲನ್ನು ತನಗಾಗಿ ಕೊಡುತ್ತಿದೆಯೇ? ಅದು ಕೇವಲ ಅನ್ಯರಿಗಾಗಿ ಈ ಕಷ್ಟವನ್ನು ಸಹಿಸುತ್ತದೆ. ಅದರಂತೆ, ಚಿನ್ನವನ್ನು ಕಾಸಿ ಬಡಿದು ಪುಟವಿಕ್ಕಿದಾಗ ಸುಂದರವಾದ ರೂಪವನ್ನು ಧರಿಸುವದು ಕೇವಲ ತನಗಾಗಿಯೇ? ಇದರಲ್ಲಿ ಅದರ ಸ್ವಾರ್ಥ ದೃಷ್ಟಿ ಏನಿದೆ? ಯಾವದೂ ಇಲ್ಲ! ಶ್ರೀಗಂಧದ ಮೇಲ್ಮೆಯು ಅಂತಹದೇ ಆಗಿದೆ. ಅದನ್ನು

ಸಡಿದು ತಿಕ್ಕಿ ತೇದು ಗಂಧವನ್ನು ತೆಗೆದಾಗ ಕಂಪನ್ನೂ ತಂಪನ್ನೂ ಪರರಿಗೇ ಕೊಡುತ್ತದೆ. ಅವುಗಳಲ್ಲಿಯ ಪರೋಪಕಾರ ಗುಣವು ಹಿಂಡಿದಾಗ, ಕಾಸಿ ಬಡಿದಾಗ, ತಿಕ್ಕಿ ತೇದಾಗ ಕಡಿಮೆಯಾಗದೆ ಹೇಗೆ ಇನ್ನಷ್ಟು ಬೆಳೆಯುವದೋ ಹಾಗೆಯೇ ಸಜ್ಜನರ ಪರಾರ್ಥವೃತ್ತಿಯು. ಬೆಟ್ಟದಷ್ಟು ಕಷ್ಟ ಬಂದರೂ, ಪರ್ವತ-ಪ್ರಾಯವಾದ ಗಂಡಾಂತರಗಳೊದಗಿದರೂ ಅದು ಎಂದೂ ನೊಂದಿ ಹೋಗುವದಿಲ್ಲ; ಅದು ಎಂದೆಂದೂ ಪ್ರಕಾಶಿಸುತ್ತದೆ. ಹೀಗೆ ಅವರು ಏನೇ ಮಾಡಲಿ, ಅದನ್ನು ಕೇವಲ ಪರಾರ್ಥ ದೃಷ್ಟಿಯಿಂದಲೇ ಮಾಡುತ್ತಾರೆ. ಯಾವುದಾದ-ರೊಂದು ಕೃತ್ಯವು ಸ್ವಾರ್ಥಪರವೋ ಪರಾರ್ಥಪರವೋ ಎಂಬುದನ್ನು ನಿರ್ಣಯಿಸ ಬೇಕಾದರೆ ಆ ಕೃತ್ಯದ ಕೇವಲ ಬಾಹ್ಯ ಪರಿಣಾಮವನ್ನಷ್ಟೇ ಲಕ್ಷಿಸದೆ ಅದರ ಅಂತರಿಕ ಉದ್ದೇಶವನ್ನೂ ನೋಡಬೇಕು. ಕರ್ಮಕ್ಕಿಂತ ಬುದ್ಧಿಯು ಶ್ರೇಷ್ಠ-ವಾಗಿರುವದರಿಂದ ಕರ್ತಾರನ ಮನದೊಳಗಿನ ಉದ್ದೇಶ ಹೇತು ಸಂಕಲ್ಪ ಮೊದಲಾದವುಗಳನ್ನು ಗಮನಿಸಬೇಕಾಗುವದು.

ನೀತಿಯ ನಿರ್ಣಯವು ಯಾವುದೊಂದು ಕೃತ್ಯದ ಬಾಹ್ಯ ಪರಿಣಾಮ-ವನ್ನು ಅವಲಂಬಿಸದೆ ಆ ಕೃತ್ಯವನ್ನೆಸಗುವ ವ್ಯಕ್ತಿಯ ಅಥವಾ ವ್ಯಕ್ತಿಗಳ ಇಲ್ಲವೆ ರಾಷ್ಟ್ರದ ಭಾವನೆಯನ್ನು ಅವಲಂಬಿಸಿದೆ. ಹಾದಿಯ ಬದಿಯಲ್ಲಿ ಕುಳಿತ ಒಬ್ಬ ಭಿಕ್ಷುಕನ ಪಾತ್ರೆಯಲ್ಲಿ ಸುಧಾರಿಸಿದ ಉಡುಪು–ತೊಡಪುಗಳನ್ನು ಧರಿಸಿಕೊಂಡು ಹೋಗುತ್ತಿರುವ ಸಭ್ಯ ಗೃಹಸ್ಥನೊಬ್ಬನು ನಕಲರಿಗಿಂತ ತಾನು ದೊಡ್ಡವನೆನಿಸಿ-ಕೊಳ್ಳುವ ಉದ್ದೇಶದಿಂದ ಬಿಮ್ಮಾರದಿಂದ ಒಂದು ರೂಪಾಯಿಯನ್ನು ತೂರಿ ಮುಂದೆ ಭರಭರ ಹೋಗುತ್ತಾನೆ. ಅದೇ ಮಾರ್ಗದಿಂದ ಬರುತ್ತಿರುವ ಬಡ ಮುದುಕಿಯೊಬ್ಬಳು ಭಿಕ್ಷುಕನಿಗೆ, “ತಮ್ಮಾ! ಹೊತ್ತು-ವೇಳೆ ಎಲ್ಲರಿಗೂ ಬರುವದುಂಟು; ದೇವರು ಇಂಥ ಹೊತ್ತನ್ನು ಯಾರಿಗೂ ತರಬಾರದು. ತಂದಿದ್ದಾನೆಂದ ಮೇಲೆ ಸಹಿಸಬೇಕಾಗುವದು” ಎಂದು ಕರುಣೆಯಿಂದ ನಾಲ್ಕು ಮಾತುಗಳನ್ನಾಡಿ ತನ್ನ ಹತ್ತಿರವಿದ್ದ ಒಂದು ಬಿಡಿ ದುಡ್ಡನ್ನು ನೀಡಿ, ಅವನಿಗೆ ಅದರಿಂದ ಒಂದಿಷ್ಟಾದರೂ ಕಷ್ಟ ನೀಗಿಸಿಕೊಳ್ಳಲು ಸಹಾಯವಾಗಲಿ ಎಂಬೊಂದು ಸದುದ್ದೇಶವನ್ನು ವ್ಯಕ್ತಗೊಳಿಸಿ ಮುಂದೆ ನಡೆಯುತ್ತಾಳೆ. ಇದರಲ್ಲಿ ಯಾರ ದಾನ ಶ್ರೇಷ್ಠ ? ಮುದುಕಿಯು ಕೇವಲ ಒಂದು ದುಡ್ಡನ್ನು ಮಾತ್ರ ಕೊಟ್ಟರೆ, ಆ ಸಭ್ಯಗೃಹಸ್ಥನು ಒಂದು ರೂಪಾಯಿ ಕೊಡುವನು. ಅವನ ದಾನವು ಆ ವೃದ್ಧೆಯ ದಾನಕ್ಕಿಂತಲೂ ೧೦೦ ಪಟ್ಟು ಶ್ರೇಷ್ಠವೆಂದು ಗಣಿತ ಮಾಡಿ ಹೇಳು-

ವದು ಸರಿಯೇ? ನಿಜವಾಗಿಯೂ ಬಾಹ್ಯದೃಷ್ಟಿಯಿಂದ ನೋಡಿದಾಗ ಆ ಸಭ್ಯ-ಗೃಹಸ್ಥನ ದಾನವೇ ದೊಡ್ಡ ದಾನ, ಶ್ರೇಷ್ಠ ದಾನ. ಆದರೆ ಆ ದಾನದ ಹಿನ್ನೆಲೆ-ಯಾಗಿರುವ ಮನೋಭಾವನೆಯನ್ನು ಉದ್ದೇಶವನ್ನು ಗಮನಿಸಿದರೆ ಆ ವೃದ್ಧೆಯ ದಾನವೇ ಶ್ರೇಷ್ಠ. ಅದುವೇ ನಿಜವಾದ ದಾನ. ಅದುವೇ ಪ್ರಭುವಿಗೆ ಪ್ರೀತಿ-ಯನ್ನುಂಟುಮಾಡುವ ದಾನ. ಒಂದೆಡೆ ಕೀರ್ತಿಯ ಲಾಲಸೆಯೇ ದಾನದ ಮುಖ್ಯ ಗುರಿ. ಇನ್ನೊಂದು ಕಡೆ ಸದ್ಭಾವವೇ ಆ ದಾನವ ಮೂಲ ಉದ್ದೇಶ. ಕೀರ್ತಿಶನಿಗಿಂತಲೂ ಸದ್ಭಾವನೆಯು ಎಂದೆಂದಿಗೂ ಲೇಸಲ್ಲವೆ?

ಪರಾರ್ಥವೆಂಬುದೇ ಯಾವನ ಸ್ವಾರ್ಥವೋ ಅವನೇ ಮಾನವ ಶ್ರೇಷ್ಠನು. ಏಕಾಣುಜೀವಿಯಾದ ಅಮೀಬಾದಿಂದ ಅತ್ಯಂತ ಬುದ್ಧಿಶಾಲಿಯಾದ ಮನುಷ್ಯನ ವರೆಗೆ ಉತ್ತರೋತ್ತರವಿರುವ ಸೃಷ್ಟಿಯ ಏರಮೆಟ್ಟಿಲುಗಳನ್ನು ಮನದಂದರೆ ಪರೋಪಕಾರವೆಂಬ ಸದ್ಗುಣದೊಂದಿಗೆ ನ್ಯಾಯ ಬುದ್ಧಿ ದಯೆ ದೂರದೃಷ್ಟಿ ಧೃತಿ ಕ್ಷಮೆ ಇತ್ಯಾದಿ ಅನೇಕ ಸದ್ಗುಣಗಳು ಪ್ರಾಣಿಗಳಲ್ಲಿ ಬೆಳೆದು ಬಂದಿರುತ್ತವೆಂದು ತಿಳಿಯುವದು. ಈ ಸದ್ಗುಣಗಳ ಉತ್ಕರ್ಷಕ್ಕೆ ಮನುಷ್ಯತ್ವ ಇಲ್ಲವೆ ಮಾನವತೆ ಎಂದು ಹೆಸರು. ಯಾವ ಕೃತ್ಯದಿಂದ ಈ ಸದ್ಗುಣಗಳ ಉತ್ಕರ್ಷವು, ಮನುಷ್ಯತ್ವವು ಹೆಚ್ಚುವದೋ ಅದುವೆ ನೀತಿಧರ್ಮ. ಅದುವೆ ಸತ್‌ಕೃತ್ಯ-ವೆನಿಸುವದು. ಈ ವ್ಯಾಪಕವಾದ ದೃಷ್ಟಿಯಿಂದ ಬಹುಜನರ ಬಹುಸುಖವೆಂಬುದು ಅಂಶತಃ ದೊಡ್ಡ ತತ್ವವಾಗಿ ಪರಿಣಮಿಸುವದು. ಈ ಗುಣೋತ್ಕರ್ಷವನ್ನು, ಸದ್ಗುಣಗಳ ಈ ಪರಾಕಾಷ್ಠೆಯನ್ನು ಇಂದಿನ ಮಾನವತಾವಾದಿಗಳಷ್ಟೇ ಮಂಡಿಸು ತ್ತಾರೆಂತಲ್ಲ. ಗುಣಗಳ ಉತ್ಕರ್ಷವಿಲ್ಲದೆ ಮೋಕ್ಷವಿಲ್ಲೆಂದು ಮೊಟ್ಟಮೊದಲು ಸಾರಿದವರು ಸಾಂಖ್ಯರು. ತ್ರಿಗುಣಗಳು ಇವೆಯಲ್ಲವೆ? ಅವುಗಳಲ್ಲಿ ಸತ್ವ ಗುಣವೇ ಅಧಿಕವಾದುದು. ಸತ್ವಗುಣದ ಪರಮ ಉತ್ಕರ್ಷವೇ ಮೋಕ್ಷದ ಪೂರ್ವಪೀಠಿಕೆಯಾಗಿದೆ. ಸಾತ್ವಿಕ ಗುಣದ ಪರಮೋತ್ಕರ್ಷದಿಂದಲೇ ತ್ರಿಗುಣಾ-ತೀತಾವಸ್ಥೆಯು ಪ್ರಾಪ್ತವಾಗಿ ಮೋಕ್ಷವು ಲಭಿಸುವದು. ಆದರೆ ಮಾನವತಾ-ವಾದಿಗಳು ಈ ಗುಣೋತ್ಕರ್ಷಕ್ಕೇನೆ ನಿಂತುಬಿಟ್ಟರು. ಅವರ ದೃಷ್ಟಿಯು ಮುಂದೆ ಹರಿಯಲಿಲ್ಲವೆನ್ನೋಣವೆ ಇಲ್ಲವೆ ಮುಂದಿನ ವಿಷಯವು ಅವರ ದೃಷ್ಟಿಗೆ ಮೀರಿದುದೆಂದು ಹೇಳೋಣವೆ? ಅದು ಏನೇ ಇರಲಿ, ಅವರು ಸಾಂಖ್ಯರಂತೆ 'ಅತ್ರಿ' ಅವಸ್ಥೆಯನ್ನು ಕಾಣದಾದರು. ವೇದಾಂತಿಗಳೂ ಸಾಂಖ್ಯರೂ ಇಂತಹ ಗುಣೋತ್ಕರ್ಷವು ಏತರಲ್ಲಿ ಉಂಟೆಂಬ ವಿಚಾರವನ್ನು ಮಾಡುವ ಗೊಡವೆಗೆ

ಹೋಗಲಿಲ್ಲ. ದೇವರನ್ನು ಕೇವಲ ಸದ್ಗುಣಗಳ ಮೊತ್ತದಲ್ಲಿ ಇಲ್ಲವೆ ಸಾತ್ವಿಕ ಗುಣೋತ್ಕರ್ಷದಲ್ಲಿ ಕಾಣಲಿಲ್ಲ. ಇವುಗಳನ್ನು ಸಹ ಮೀರಿ ಅವರು ನಿರ್ಗುಣ-ನಾದ ಆತ್ಮನಲ್ಲಿ ಆ ದೇವನನ್ನು ಕಂಡರು. ಯಾಕಂದರೆ, ಅವರಿಗೆ ಈ ಗುಣೋತ್ಕರ್ಷದ ಮೂಲವು ಆತ್ಮನಲ್ಲಿದೆ ಎಂದು ಹೊಳೆಯಿತು. ಒಟ್ಟಿನ ಮೇಲೆ, ಈ ಆತ್ಮನ ಆಧಾರದಿಂದಲೇ ನೀತಿಯ ನಿರ್ಣಯವನ್ನು ಮಾಡಬೇಕೆಂದೂ ಹಾಗೆ ಮಾಡಿದ ನೀತಿಯ ನಿರ್ಣಯವು ನಿಜವಾಗುವದೆಂದೂ ಭಾರತೀಯ ದರ್ಶನವು ಹೇಳುತ್ತಿದೆ.

ಪಾಶ್ಚಿಮಾತ್ಯ ತತ್ವಜ್ಞಾನಿಗಳಲ್ಲಿ ಆಧ್ಯಾತ್ಮಿಕ ದೃಷ್ಟಿಯಿಂದ ನೀತಿಯ ಉಪಪತ್ತಿಯನ್ನು ಹೇಳಿದವರು ಅನೇಕರು ಇದ್ದಾರೆ. ಕಾಂಟನು ಈ ದೃಷ್ಟಿಯಿಂದ ನೀತಿಯ ಉಪಪತ್ತಿಯನ್ನು ಮಾಡಬೇಕೆಂಬುದನ್ನು ಒಪ್ಪಿಕೊಳ್ಳುತ್ತಾನೆ. ಆಧುನಿಕ ತತ್ವಜ್ಞಾನಿಗಳಲ್ಲಿ ಹೀಗೆ ಹೇಳಿದವರಲ್ಲಿ ಕಾಂಟನೇ ಮೊದಲಿಗನು. ನೀತಿಯನ್ನು ನಿರ್ಣಯಿಸುವ ಅವನ ಕೋಟಿಕ್ರಮವು ಹೀಗಿದೆ :

(೧) ಯಾವುದೊಂದು ಕಾರ್ಯದ ನೈತಿಕ ಬೆಲೆಯನ್ನು ಆ ಕಾರ್ಯದಿಂದ ಎಷ್ಟು ಜನರಿಗೆ ಸುಖವಾಯಿತು ಎಂದು ಅದರ ಹೊರಗಣ ಹಗರಣದ ಮೇಲಿಂದ, ಬಾಹ್ಯ ಪರಿಣಾಮಗಳಿಂದ ನಿಶ್ಚಯಿಸದೆ ಕಾರ್ಯ ಮಾಡುವ ವ್ಯಕ್ತಿಯ ವಾಸನೆಯು ಎಷ್ಟರಮಟ್ಟಿಗೆ ಶುದ್ಧವಾಗಿರುತ್ತದೆಂಬುದನ್ನು ನೋಡಿಯೇ ಗೊತ್ತು ಪಡಿಸಬೇಕು.

(೨) ವ್ಯಕ್ತಿಯ ಈ ವಾಸನೆಯು ಅಥವಾ ವಾಸನಾತ್ಮಕ ಬುದ್ಧಿಯು ಇಂದ್ರಿಯಗಳ ಕೈವಶವಾಗಬಾರದು. ವ್ಯವಸಾಯಾತ್ಮಿಕ ಇಲ್ಲವೆ ಶುದ್ಧಬುದ್ಧಿಯ ಆಜ್ಞೆಯನ್ನು ಅನುಸರಿಸಿ ಅವನು ಕಾರ್ಯ ಮಾಡಹತ್ತಿದಾಗ ಅದು ಮಡಿ-ಯಾಗಿರುತ್ತದೆ, ಮಿಗಿಲಾಗಿರುತ್ತದೆ ಎಂದು ತಿಳಿಯಬೇಕು.

(೩) ಇಂದ್ರಿಯ ನಿಗ್ರಹದಿಂದ ಯಾವನ ವಾಸನೆಗಳು ಶುದ್ಧವಾಗಿರುತ್ತ-ವೆಯೋ ಅವನಿಗೆ ಮುಂದೆ ಯಾವ ನೀತಿಯ ನಿಯಮವನ್ನೂ ಹಾಕಿಕೊಡುವ ಅಗತ್ಯವಿಲ್ಲ. ಈ ನಿರ್ಬಂಧಗಳೆಲ್ಲ ಸಾಮಾನ್ಯ ಜನರಿಗಾಗಿಯೇ ಇರುತ್ತವೆ.

(೪) ಈ ಮೇರೆಗೆ ಶುದ್ಧ ವಾಸನೆಗಳು ಮಾಡಹೇಳುವ ಕಾರ್ಯವು ತಮ್ಮಂತೆ ಪರರೆಂಬ ಭಾವವನ್ನು ಅಥವಾ ಆತ್ಮೌಪಮ್ಯ ಭಾವವನ್ನು ಅವಲಂಬಿ-ಸಿರುತ್ತದೆ.

(೫) ಕರ್ಮಸೃಷ್ಟಿಯನ್ನು ಬಿಟ್ಟು ಆತ್ಮಸೃಷ್ಟಿಯಲ್ಲಿ ಅಥವಾ ಪ್ರಾಕೃತ ಸೃಷ್ಟಿಯನ್ನು ಬಿಟ್ಟು ಅಪ್ರಾಕೃತ ಸೃಷ್ಟಿಯಲ್ಲಿ ಸೇರಿದ ಹೊರತು ವಾಸನಾಶುದ್ಧಿಯ ಹಾಗು ಸ್ವಾತಂತ್ರ್ಯದ ಉಪಪತ್ತಿಯೇ ಹತ್ತುವದಿಲ್ಲ.

ಇಷ್ಟೆಲ್ಲವನ್ನೂ ಕಾಂಟನು ಬಹು ಸುಂದರವಾಗಿ ಹೇಳಿದ್ದಾನೆ; ಅವನು ಆಧ್ಯಾತ್ಮಿಕ ದೃಷ್ಟಿಯಿಂದ ನೀತಿಯ ಉಪಪತ್ತಿಯನ್ನು ಹಚ್ಚಿ ತಿಳಿಸಿರುವನೇನೋ ನಿಜ. ಆದರೆ ಆತ್ಮನ ವಿಷಯಕವಾದ ಅವನ ವಿಚಾರಗಳು ಅಪೂರ್ಣವಾಗಿರುತ್ತವೆ. ಇವು ವಿಮರ್ಶಕ ದೃಷ್ಟಿಯಿಂದ ಅನುಭವಕ್ಕೆ ಬರುವ ಮಾತಾಗಿದೆ.

ಕಾಂಟನ ಈ ಕೊರತೆಯನ್ನು ತುಂಬಿಕೊಡಲು ಅವನ ಅನುಯಾಯಿಯಾದ ಗ್ರೀನನು ಮುಂದೆ ಬಂದನು. ಅವನು ಮಾತ್ರ ಆತ್ಮನ ಬಗೆಗೆ ಕೂಲಂಕಷವಾಗಿ ವಿಚಾರ ಮಾಡಿ ಭಾರತೀಯರ 'ಪಿಂಡ-ಬ್ರಹ್ಮಾಂಡಯೋರೈಕ್ಯ' ಎಂಬ ವಿಚಾರಸರಣಿಗೆ ಬಂದು ಮುಟ್ಟಿದ್ದಾನೆ. ಬ್ರಹ್ಮಾಂಡದಲ್ಲಿರುವ ಆತ್ಮತತ್ವವು ಮಾನವ ಶರೀರದಲ್ಲಿ ಅಂಶತಃ ಪ್ರಕಟವಾಗಿರುವವೆಂದು ಮೊದಲು ಸಿದ್ಧಮಾಡಿ ಮುಂದೆ ಅವನು ಹೀಗೆ ಹೇಳುತ್ತಾನೆ :

ಮನುಷ್ಯನಲ್ಲಿರುವ ನಿತ್ಯವೂ ಸ್ವತಂತ್ರವೂ ಆದ ಆತ್ಮಕ್ಕೆ ತನ್ನ ಸಾಮೂಹಿಕ ಪೂರ್ಣ ಸ್ವರೂಪವನ್ನು ಪಡೆದುಕೊಳ್ಳಬೇಕೆಂಬ ಬಲವತ್ತರವಾದ ಅಪೇಕ್ಷೆಯುಂಟಾಗುತ್ತದೆ. ಆ ಅಪೇಕ್ಷೆಯೇ ಅವನನ್ನು ಸದಾಚಾರಗಳಿಗೆ ಪ್ರವರ್ತಿಸುತ್ತದೆ. ಹೀಗೆ ಅಪೇಕ್ಷಿಸುವದರಲ್ಲಿಯೇ ಮನುಷ್ಯನ ಶಾಶ್ವತವಾದ ಕಲ್ಯಾಣವಿರುತ್ತದೆ. ಕೇವಲ ವಿಷಯಸುಖವು ಅನಿತ್ಯವಾಗಿರುತ್ತದೆ —ಎಂದು ಗ್ರೀನನು ಪ್ರತಿಪಾದಿಸಿದ್ದಾನೆ. ಕಾಂಟ್-ಗ್ರೀನರಿಬ್ಬರೂ ಆಧ್ಯಾತ್ಮಿಕ ದೃಷ್ಟಿಯುಳ್ಳವರೇ. ಆದರೆ ಕಾಂಟನಂತೆ ಗ್ರೀನನು ವ್ಯವಸಾಯಾತ್ಮಿಕ ಬುದ್ಧಿಯ ಮಟ್ಟಿಗೆ ಮಾತ್ರ ನಿಲ್ಲದೆ ಕರ್ಮಾಕರ್ಮ ವಿವೇಚನೆಯ ಹಾಗು ವಾಸನಾ ಸ್ವಾತಂತ್ರ್ಯದ ಉಪಪತ್ತಿಯನ್ನು ಪಿಂಡ-ಬ್ರಹ್ಮಾಂಡಗಳೆರಡರಲ್ಲಿ ವ್ಯಕ್ತವಾಗುವ ಆತ್ಮನ ವರೆಗೆ ಒಯ್ದು ಮುಟ್ಟಿಸಿದನು. ಬೌದ್ಧರಾದರೋ ಕಾಂಟನಂತೆ ವ್ಯವಸಾಯಾತ್ಮಿಕ ಬುದ್ಧಿಗೆ ಬಂದು ನಿಂತರು. ಗ್ರೀನನಾದರೋ ಉಪನಿಷತ್ತಿನ ಆತ್ಮತತ್ವಕ್ಕೆ ಬಂದು ತಲುಪಿದನು.

ಪ್ರೊಫೆಸರ ಡಾಯಸನ್ನನೂ ಸಹ ನೀತಿಯ ವಿವೇಚನೆಯಲ್ಲಿ ಈ ಆಧ್ಯಾತ್ಮ ದೃಷ್ಟಿಯ ಪದ್ಧತಿಯನ್ನೇ ಸ್ವೀಕರಿಸಿದ್ದಾನೆ. ಡಾಯಸನ್ನನು ಶೋಫೆನ್‌ಹಾರನ

ಆನುಯಾಯಿಯು. ಶೋಫೆನ್‌ಹಾರನ ಅಭಿಪ್ರಾಯದ ಮೇರೆಗೆ ಪ್ರಪಂಚಕ್ಕೆ ವಾಸನೆಗಳೇ ಕಾರಣವಾಗಿರುವ ಮೂಲಕ ಅವುಗಳ ಕ್ಷಯವನ್ನು ಮಾಡದೆ ದುಃಖನಿವೃತ್ತಿಯಾಗುವದು ಶಕ್ಯವಿಲ್ಲ. ವಾಸನಾಕ್ಷಯವನ್ನು ಮಾಡಿಕೊಳ್ಳುವದೇ ಪ್ರತಿಯೊಬ್ಬನ ಕರ್ತವ್ಯವಾಗಿದೆ. ಈ ಎರಡು ಸಿದ್ಧಾಂತಗಳು ಡಾಯಸನ್ನನಿಗೆ ಪೂರ್ಣ ಗ್ರಾಹ್ಯವಿದ್ದು, ಇವುಗಳ ಮೇಲಿಂದ ನೀತಿಯ ಉಪಪತ್ತಿಯು ಹೇಗೆ ಹೊರಡುತ್ತದೆಂಬುದನ್ನು ಅವನು ಹೀಗೆ ಹೇಳಿದ್ದಾನೆ: 'ವಾಸನಾಕ್ಷಯವು ಆಗುವದಕ್ಕಾಗಲಿ, ವಾಸನಾಕ್ಷಯವಾದ ಮೇಲಾಗಲಿ ಕರ್ಮ ಬಿಡುವ ಕಾರಣವಿಲ್ಲ. ಇಷ್ಟೇ ಅಲ್ಲ, ವಾಸನೆಗಳ ಪೂರ್ಣ ಕ್ಷಯವಾಗಿದೆಯೋ ಇಲ್ಲವೋ ಎಂಬುದು ಪರೋಪಕಾರಕ್ಕಾಗಿ ಮಾಡಿದ ನಿಷ್ಕಾಮ ಕರ್ಮಗಳಿಂದ ವ್ಯಕ್ತವಾಗುವಂತೆ ಮಿಕ್ಕ ಯಾವುದರಿಂದಲೂ ವ್ಯಕ್ತವಾಗುವದಿಲ್ಲ. ಈ ಕರ್ಮಭೂಮಿಯೊಂದು ವಿಶಾಲವಾದ ವಿಸ್ತೃತವಾದ ವಿವಿಧ ವೈಚಿತ್ರ್ಯಗಳ ರಹಸ್ಯಮಯವಾದ ಆಗರ. ಈ ವಿಗಡವನ್ನು ವಿಭಜಿಸಿ ತಿಳಿದುಕೊಳ್ಳಲು ಸಹಾಯ ಮಾಡುವ ಪ್ರಯೋಗಶಾಲೆಯಾಗಿದೆ ಅದು. ಇಲ್ಲಿ ವಿಜ್ಞಾನಿಗಳಾಗಬೇಕೆನ್ನುವವರು ಪ್ರಯೋಗ-ಪುನಃ ಪ್ರಯೋಗಗಳಿಂದ ಜ್ಞಾನ ಸಂಪಾದನೆಯನ್ನು ಮಾಡಿಕೊಳ್ಳಬೇಕಾಗಿರುವಂತೆಯೇ ಜ್ಞಾನಿಗಳಾದರೂ ತಮ್ಮ ಜ್ಞಾನದ ಉಪಯುಕ್ತತೆಯನ್ನು ಅಳೆದುಕೊಳ್ಳುವದಕ್ಕಾಗಿ, ಅದರ ಸಾರ್ಥಕತೆಯನ್ನು ತಿಳಿದುಕೊಳ್ಳುವದಕ್ಕಾಗಿ ಪರೀಕ್ಷಾನಳಿಕೆಗಳ ಸಹಾಯದಿಂದ ಅರ್ಥಾತ್ ಸತ್ಕರ್ಮಗಳಿಂದ ತಮ್ಮ ಪ್ರಯೋಗಗಳನ್ನು ಮುಂದುವರಿಸಬೇಕಾಗುತ್ತದೆ. ಜ್ಞಾನವಾಯಿತು, ವಾಸನಾಕ್ಷಯವಾಯಿತು, ಆದುದರಿಂದ ನಮಗಿನ್ನು-ಮೇಲೆ ಯಾವ ಕರ್ತವ್ಯವೂ ಇಲ್ಲವೆಂದು ಕುಳಿತರೆ ಅಷ್ಟರ ಮಟ್ಟಿಗೆ ಪ್ರಗತಿಯು ಹಿಂದೆ ಬಿದ್ದಂತೆಯೆ ಸರಿ ! ಹೀಗೆ ಸತ್ಕರ್ಮವು ಇಲ್ಲವೆ ನಿಷ್ಕಾಮ ಕರ್ಮವು ವಾಸನಾಕ್ಷಯದ ಲಕ್ಷಣವೂ ಆಗಿದೆ, ಫಲವೂ ಆಗಿದೆ. ಇದಲ್ಲದೆ ವಾಸನೆಗಳಲ್ಲಿ ನಿಷ್ಕಾಮಹೊಂದುವುದರಲ್ಲಿಯೇ ಸದಾಚಾರ ಮತ್ತು ನೀತಿಮತ್ತೆಯ ಉಗಮವಿರುತ್ತದೆ. ಡಾಕ್ಟರ ಪಾಲ್‌ಕರಸನ್ ಎಂಬ ಅಮೇರಿಕನ್ ಪಂಡಿತನೂ ಅಧ್ಯಾತ್ಮದ ಹಿನ್ನೆಲೆಯಿಲ್ಲದೆ ನೀತಿಯ ಉಪಪತ್ತಿಯು ಹತ್ತಲಾರದೆಂದು ಸ್ಪಷ್ಟ ಮಾಡಿದ್ದಾನೆ. ಪಿಂಡ—ಬ್ರಹ್ಮಾಂಡಗಳ ರಚನೆಯನ್ನು ಕುರಿತಾದ ಅಭಿಪ್ರಾಯಕ್ಕೆ ಅನುಸರಿಸಿ ನೀತಿಶಾಸ್ತ್ರದ ಮೂಲ ತತ್ವಗಳ ವಿಷಯಕವಾದ ವಿಚಾರಗಳ ಬಣ್ಣವು ಬದಲಾಗುತ್ತದೆ. ಇದು ಡಾಕ್ಟರ ಪಾಲಕರಸನ್‌ನು ವ್ಯಕ್ತಮಾಡಿದ ನೀತಿನಿರ್ಣಾಯಕ ತತ್ವವಾಗಿದೆ.

ಭಾರತೀಯ ನೀತಿಧರ್ಮವು ಅಧ್ಯಾತ್ಮ ದೃಷ್ಟಿಯಿಂದ ಕೂಡಿದ್ದಾಗಿದೆ ಎಂಬುದನ್ನು ಕೆಲವು ಸುಭಾಷಿತಗಳಿಂದಲೂ ಕಾಣಬಹುದು :

ಧನ ವಿದ್ಯಾ ಬಲಾರೋಗ್ಯ ಪುಣ್ಯಾಯುರ್ದೈವಸಿದ್ಧಿದಃ ।
ಧರ್ಮೈಕಗಮ್ಯೋ ಭಗವಾನ್ ಪಾಲಯತ್ವನಿಶಂ ಜಗತ್ ॥

'ಧನವನ್ನೂ ವಿದ್ಯೆಯನ್ನೂ ಬಲವನ್ನೂ ಆರೋಗ್ಯವನ್ನೂ ಪುಣ್ಯವನ್ನೂ ಆಯುಸ್ಸನ್ನೂ ದೈವಸಿದ್ಧಿಯನ್ನೂ ಕರುಣಿಸುವ ಧರ್ಮಾಚರಣೆಯಿಂದ ಮಾತ್ರ ಕಾಣುವ ಭಗವಂತನು ನಿತ್ಯವೂ ಸಮಸ್ತ ಲೋಕವನ್ನು ಸಂರಕ್ಷಿಸಲಿ !'

ದೇವಾಧಿದೇವನು ಸಮಸ್ತ ವಿಶ್ವವನ್ನು ಆಳುವನೆಂದೂ, ಮಾನವ ಮಾತ್ರರಿಗೆ ಅವರ ಇಷ್ಟಾರ್ಥಗಳನ್ನು ದಯಪಾಲಿಸುವನೆಂದೂ ಅನುಭಾವಿಗಳು ನಂಬಿದ್ದಾರೆ. ಇದನ್ನೇ ಮೇಲಿನ ಪ್ರಾರ್ಥನೆಯು ವ್ಯಕ್ತಗೊಳಿಸುತ್ತದೆ. ಈ ದೈವಿಕ ಭಾವನೆಯು ಭಾರತೀಯರಿಗೆ ಜೀವಾಳವಾಗಿದೆ. ಈ ಸಮಸ್ತ ವಿಶ್ವವು ಆ ಪ್ರಭುವಿನ ದಾನವೆಂದೂ, ಆ ಪ್ರಭುವು ಮಹಾದಾನಿಯೆಂದು ಬಗೆದು ಅವನಲ್ಲಿ ಕೃತಜ್ಞತೆಯನ್ನು ಅರ್ಪಿಸಲು ಈ ಪದ್ಯವು ಕಲಿಸುತ್ತದೆ. ನಾವು ಎಸಗುವ ಪೂಜೆಯಾಗಲಿ, ನಾವು ಗೈಯ್ಯುವ ಪ್ರಾರ್ಥನೆಯಾಗಲಿ ಕೃತಜ್ಞತೆ-ಯಿಂದ ಕೂಡಿರಬೇಕು. ಆ ದೇವನು ತಾನು ನಮಗೆ ದಯಪಾಲಿಸುವ ದಾನ ಗಳಿಗೆ ನಮ್ಮಿಂದ ಕೃತಜ್ಞತೆಯನ್ನಲ್ಲದೆ ಇನ್ನೇನನ್ನೂ ಬೇಡಲಾರ.

ಪರಮಾತ್ಮನು ಇಲ್ಲವೆ 'ಚಿನುಮಯನು' ಕೇವಲ ಇಂಥದೊಂದು ವಸ್ತುವಿ ನಲ್ಲಿ ಇಲ್ಲವೆ ವ್ಯಕ್ತಿಯಲ್ಲಿ ಮಾತ್ರವುಂಟು. ಇಂಥಿಂಥ ವಸ್ತುಗಳಲ್ಲಿ ಇಲ್ಲವೆ ವ್ಯಕ್ತಿಯಲ್ಲಿ ಇಲ್ಲ ಎಂದು ಹೇಳಲು ಬರುವಂತಿಲ್ಲ. ಸರ್ವವ್ಯಾಪಿಯಾದ ಸರ್ವಾಂತರ್ಯಾಮಿಯಾದ ದೇವನು ಇಲ್ಲವೆ ಪರಮಪ್ರಭುವು ಕೇವಲ ಒಳ್ಳೆಯ ಪದಾರ್ಥದಲ್ಲಿದ್ದಾನೆ; ಅವನು ಕೆಟ್ಟ ವಸ್ತುಗಳಲ್ಲಿಲ್ಲ ಎಂದು ಹೇಳುವದೂ ತಪ್ಪು. 'ಎಳ್ಳುಗೊನೆಯೊಳು, ಮುಳ್ಳುಮೊನೆಯೊಳು' ಪೊಳ್ಳು ಬಿಡದಂತೆ ಅವನು ಎಲ್ಲೆಡೆಯಲ್ಲಿಯೂ ವ್ಯಾಪಿಸಿದ್ದಾನೆ. ಅವನು ಸ್ನೇಹದಲ್ಲಿಯೂ ವಾಸ-ವಾಗಿದ್ದಾನೆ, ಕಂಟಕವಲ್ಲಿಯೂ ವಾಸವಾಗಿದ್ದಾನೆ. ಅತ್ಯಂತ ಪ್ರೇಮದ ಗೆಳೆಯನನ್ನು ಒಲುಮೆಯಿಂದ ತೋಳುಗಳಲ್ಲಿ ಬಿಗಿದಪ್ಪುವಂತೆ ಕಠೋರವಾದ ಕೂರಸಿಯನ್ನೂ ಇಲ್ಲವೆ ಖಡ್ಗವನ್ನೂ ಅಷ್ಟೇ ಪ್ರೇಮದಿಂದ ಕೂಡಿದ ಅಪ್ಪುಗೆಯಲ್ಲಿ

ಒಪ್ಪವಡುವ ಜೀವನ ಕಲೆಯು ಸಾಧಿಸಿದರೆ ಮಾತ್ರ ಅವನು ನಿಜವಾದ ಸತ್ಪುರುಷನು, ಅವನೆ ದೇವಾಂಶಸಂಭೂತನು. ಆದರೆ ಈ ರೀತಿಯಾಗಿ ಆ ದೇವಾಧಿದೇವನು ತುಂಬಿದ್ದರೂ ಮಾನವನಲ್ಲಿ ಕೊಂಚ ಮಟ್ಟಿಗೆ ಅಧಿಕ ಪ್ರಮಾಣದಲ್ಲಿ ವ್ಯಕ್ತವಾಗುತ್ತಾನೆ. ಎಂದರೆ ದೇವನ ಶಕ್ತಿಯು ಮಾನವನ ಕೃತಿ—ಮತಿಗಳ ಮುಖಾಂತರ ಹೆಚ್ಚು ಪರಿಸ್ಫುಟವಾಗುತ್ತದೆ. ಇಂದಿನ ಮಾನವತಾವಾದಿಗಳು ದೇವನ ಅಸ್ತಿತ್ವವನ್ನು ಒಪ್ಪದೆ ಮಾನವ ಜನಾಂಗವೇ ದೇವನೆಂದು ಬಗೆದು ಅದಕ್ಕೆ ಪೂಜೆಯನ್ನು ಸಲ್ಲಿಸಿದರಾಯಿತಲ್ಲ ಎಂದು ವಾದಿಸುತ್ತಾರೆ. ಇಲ್ಲಿ ಮಾನವತಾವಾದವು ಮಾನವನು ಎಂಥನನಿದ್ದರೂ ಪೂಜಿಸು ಎಂದು ಹೇಳದೆ ಮಾನವನಲ್ಲಿಯ ಸದ್ಗುಣಗಳನ್ನು ಪೂಜಿಸೆಂದು ಹೇಳುತ್ತದೆ. ಗುಣಗಳೇ ಪೂಜೆಗೆ ಅರ್ಹವೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯಕ್ಕೆಡೆಯೇ ಇಲ್ಲ. 'ಗುಣಾಃ ಪೂಜಾಸ್ಥಾನಂ ಗುಣಿಷು'. ಆದರೆ ಗುಣಗಳಿಗೆ ಅಧಿಷ್ಠಾನವಾಗಿ ಗಣವರನೊಬ್ಬನಿದ್ದಾನೆಂದು ಧರ್ಮವು ಹೇಳುತ್ತದೆ. ಗುಣಗಳು ಮಣಿಗಳಿದ್ದಂತೆ ಎಂದು ಬಗೆಯುವದಾದರೆ ದೇವನು ಅವುಗಳನ್ನು ಪವಣಿಸುವ ಸೂತ್ರವಿದ್ದಂತೆ. ಹೀಗೆ ಸದ್ಗುಣಗಳ ಮೊತ್ತವೇ ದೇವನಾಗದೆ ಸೂತ್ರಾತ್ಮನೇ ದೇವನಾಗುತ್ತಾನೆ.

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಽಯಂ ಕ್ಷೋಭರಹಿತಃ ಸದ್ಭಕ್ತಾಸ್ಸಂತು ನಿರ್ಭಯಾಃ ॥

'ಸಕಾಲಕ್ಕೆ ಮಳೆಯಾಗಲಿ. ಭೂಮಿಯು ಫಲಪೈರುಗಳಿಂದ ಶೋಭಿಸಲಿ. ದೇಶವು ಸುಭಿಕ್ಷವಾಗಿರಲಿ. ಸದ್ಭಕ್ತರು ನಿರಾತಂಕವಾಗಿರಲಿ.'

ಜ್ಞಾನೇಶ್ವರರು ತಮ್ಮ ಗ್ರಂಥದ ಕೊನೆಯಲ್ಲಿ ದೇವನನ್ನು ಕುರಿತು ಹೀಗೆ ವರವನ್ನು ಬೇಡಿಕೊಂಡಿದ್ದಾರೆ: 'ಹೇ ದೇವಾ! ಜಗತ್ತಿನಲ್ಲೆಲ್ಲ ದುರುಳರ ದುರುಳತನವು ಮಾಯವಾಗಲಿ. ಪ್ರಾಣಿಮಾತ್ರರು ಪ್ರೀತಿಯಿಂದ ವ್ಯವಹರಿಸಲಿ. ಸದ್ಧರ್ಮಸೂರ್ಯನು ವಿಶ್ವದಲ್ಲಿ ವಿರಾಜಿಸಲಿ! ಜನರ ಬಯಕೆಗಳೆಲ್ಲ ಪೂರ್ಣವಾಗಲಿ! ಚಲಿಸುವ ಕಲ್ಪತರುಗಳೂ, ಜೀವಿಸುವ ಚಿಂತಾಮಣಿಗಳೂ, ಆಲೆಯುವ ಸುಧಾಸಿಂಧುಗಳೂ ಎನಿಸಿದ ಈಶ್ವರನಿಷ್ಠ ಭಕ್ತರು ಎಲ್ಲರಿಗೆ ಸಂದರ್ಶನ ವನ್ನೀಯಲಿ!' ಎಂತಹ ಸದ್ಭಾವನೆಯಿದು!

ಕರಾಗ್ರೇ ವಸತಿರ್ಲಕ್ಷ್ಮೀಃ ಕರಮಧ್ಯೇ ಸರಸ್ವತೀ ।
ಕರಮೂಲೇ ಸ್ಥಿತಾ ಗೌರೀ ಪ್ರಭಾತೇ ಕರದರ್ಶನಂ ॥

‘ ಲಕ್ಷ್ಮಿಯು ಕೈ ಬೆರಳಿನ ತುದಿಯಲ್ಲಿ ವಾಸಿಸುತ್ತಾಳೆ; ಕೈಯ್ಯ ಮಧ್ಯ-ಭಾಗದಲ್ಲಿ ಸರಸ್ವತಿಯು ವಾಸವಾಗಿದ್ದಾಳೆ; ಮುಂಗೈಯಲ್ಲಿ ಗೌರಿಯಿದ್ದಾಳೆ. ಆದುದರಿಂದ ನಸುಕಿನಲ್ಲಿ ಎದ್ದ ಕೂಡಲೇ ಎಲ್ಲರೂ ತಮ್ಮ ಕೈಯನ್ನು ನೋಡಿಕೊಳ್ಳಲಿ !’

ಲಕ್ಷ್ಮಿಯು ಬೆರಳ ತುದಿಯಲ್ಲಿರುವಳು, ಕೊಡವಿದರೆ ಸಿಡಿದು ಬೀಳುವಳು; ಅಂದರೆ ಐಶ್ವರ್ಯವು ಶಾಶ್ವತವಾದುವಲ್ಲ; ಕಾರಣ ಧನಸಂಗ್ರಹಕ್ಕೆ ಆಶೆ ಪಡಬೇಡ. ಸರಸ್ವತಿಯು ಕರಮಧ್ಯದಲ್ಲಿರುವಳು; ಎಂದರೆ ಕರತಲಾಮಲಕ-ದಂತೆ, ಅಂಗೈಯ್ಯ ನೆಲ್ಲಿಯಲ್ಲಿಯಂತೆ ಬಹು ಭದ್ರವಾಗಿರುವಳು. ಇದರ ಅರ್ಥವಿಷ್ಟೇ ! ಜ್ಞಾನಕ್ಕೆ ಚ್ಯುತಿಯಿಲ್ಲ, ಕಾರಣ ಜ್ಞಾನಾರ್ಜನೆಯನ್ನು ಮಾಡು. ಗೌರಿಯು ಕರಮೂಲದಲ್ಲಿರುವಳು. ಆಕೆಯೇ ಕರ್ಮಫಲಪ್ರದಳು. ಕರ್ಮಫಲವು ಕೈಬಿಡುವದಿಲ್ಲ. ಆದ್ದರಿಂದ ಸತ್ಕರ್ಮನಿರತನಾಗು. ಮಾನವನ ಹಸ್ತದಲ್ಲಿ ಅಡಗಿರುವ ರಹಸ್ಯವಿದು. ದೇವನನ್ನು ಪ್ರಾರ್ಥಿಸಿ ಮಾನವ ಸಂತತಿಗೆ ಹಿತವನ್ನು ಕೋರಿ ಮಾನವನು ಕರ್ತವ್ಯಪರಾಯಣನಾಗಬೇಕೆಂದು ಬೇಡುತ್ತದೆ ಈ ಪದ್ಯ. ವ್ಯಕ್ತಿಯು ಕಾರ್ಯಗಳನ್ನೆಸಗುವದು ಕೈಯಿಂದ ಅಲ್ಲವೆ ? ನಿನ್ನ ಕೈಯ ಕುರುಹನ್ನು ಚನ್ನಾಗಿ ಅರಿತುಕೋ ! ನಿನ್ನ ಕರದಲ್ಲಿಯೂ ಆದಿ ಮಧ್ಯ ಅಂತ್ಯಗಳಿಲ್ಲವೆ ? ಲಕ್ಷ್ಮೀ ಸರಸ್ವತಿ ಗೌರಿಯರು ಆಯಾ ಸ್ಥಾನಕ್ಕೆ ಅಧಿಷ್ಠಾತೃ ದೇವತೆಗಳಾಗಿಲ್ಲವೆ ? ಧನಕ್ಕಿಂತ ವಿದ್ಯೆಯು ಮೇಲಾದುದು, ವಿದ್ಯೆಗಿಂತಲೂ ಸತ್ಕರ್ಮವು ಮಿಗಿಲಾದುದು. ಎಂತಲೇ ಸತ್ಕರ್ಮನಿರತ-ನಾಗಲಿಕ್ಕೆ ಮುಂಗೈಗೆ ಕಂಕಣ ಕಟ್ಟುತ್ತಿರಬೇಕು. ಆದುದರಿಂದ ದುಡ್ಡಿಲ್ಲ-ವೆಂದು ಸರ್ವಥಾ ಕೊರಗಬೇಡ, ವಿದ್ಯೆಯಿಲ್ಲವೆಂದು ಎಂದೂ ಅಳಲಬೇಡ. ಅವೆರಡಿಲ್ಲದಿದ್ದರೂ ಸತ್ಕರ್ಮ (Character building) ಇಲ್ಲವೆ ಸಚ್ಛೀಲ ಅಥವಾ ಸತ್‌ಕ್ರಿಯಾಶೀಲತೆಯಿದ್ದರೆ ಯಾರ ಹಂಗೂ ಇಲ್ಲದೆ ದಿಟ್ಟತನದಿಂದ ಜೀವನವನ್ನು ಸಾಗಿಸಲಿಕ್ಕೆ ಏತರ ಕೊರತೆಯೂ ಆಗುವದಿಲ್ಲ. ಮೇಲೆ ಹೇಳಿದ ತತ್ವರಹಸ್ಯವನ್ನು ನಸುಕಿನಲ್ಲಿ ಅಥವಾ ಅರುಣೋದಯದಲ್ಲಿ ಕರದರ್ಶನದಿಂದ ಅರಿತುಕೊಂಡು ಯಥಾವಿಹಿತವಾಗಿ ಕರ್ಮನಿರತನಾಗಬೇಕು.

ಅಭಿಮಾನಧನಂ ಯೇಷಾಂ ಚಿರಂ ಜೀವಂತಿ ತೇ ನರಾಃ ।
ಅಭಿಮಾನವಿಹೀನಾನಾಂ ಕಿಂ ಧನೇನ ಕಿಮಾಯುಷಾ ॥

'ಯಾರಲ್ಲಿ ಅಭಿಮಾನವೆಂಬ ಧನವು ತುಂಬಿರುವದೋ ಅವರು ಆಚಂದ್ರಾರ್ಕವಾಗಿ ಬಾಳುವರು. ಅಭಿಮಾನವಿಲ್ಲದವರಿಗೆ ಧನವಿದ್ದು ಏನು ಪ್ರಯೋಜನ, ಆಯುಷ್ಯವಿದ್ದು ಏನು ಪ್ರಯೋಜನ ?'

'ಅಭಿಮಾನ' ಎಂದರೇನು ಅಹಂಕಾರವೆಂದೋ ? ಅಲ್ಲ ! ಅಹಂಕಾರಕ್ಕೂ ಅಭಿಮಾನಕ್ಕೂ ಅಜಗಜಾಂತರವಿದೆ. ಅಹಂಕಾರವೆಂದರೆ ಗರ್ವ ಸೊಕ್ಕು ಅಹಂಮನ್ಯತೆ ಎಂದು ಅರ್ಥ. 'ಅಭಿಮಾನ' ಈ ಪದದಲ್ಲಿ ಆ ಅರ್ಥವು ಎಂದೂ ಹೊರಡುವದಿಲ್ಲ. ಈ 'ಅಭಿಮಾನ' ಎಂಬ ಶಬ್ದದಲ್ಲಿ 'ಅಭಿ' ಮತ್ತು 'ಮಾನ' ಎಂಬೆರಡು ಪದಗಳಿವೆ. 'ಮಾನ' ಎಂದರೆ ಅಳತೆ; 'ಅಭಿ' ಎಂದರೆ ಶ್ರೇಷ್ಠ. ಅಭಿಮಾನವೆಂದರೆ ಶ್ರೇಷ್ಠವಾದ ಅಳತೆ ಎಂದಾಗುತ್ತದೆ. ಜಗತ್ತಿನಲ್ಲಿ ಶ್ರೇಷ್ಠವಾದ ಜೇಷ್ಠವಾದ ಮಾನ ಇಲ್ಲವೆ ಅಳತೆ ಯಾವುದು ? ಜಗತ್ತಿನಲ್ಲಿ ಸ್ವಾತ್ಮದ ಅಳತೆಯೇ ಅತ್ಯಂತ ಶ್ರೇಷ್ಠವಾದ ಅಳತೆಯು. ಅದೂ ಸರಿಯಾದ ಅಳತೆಯಾಗಿರಬೇಕು. ಬಹುಶಃ ಬಹಳ ಜನರಿಗೆ ತಮ್ಮ ಯೋಗ್ಯತೆ ಅಯೋಗ್ಯತೆಗಳ ಬಗೆಗೆ ಸರಿಯಾದ ಅಳತೆಯೇ ಹತ್ತಿರುವದಿಲ್ಲ. ಅವರದು ಒಮ್ಮೊಮ್ಮೆ ತೀರ ಹೆಚ್ಚಾಗಿರುತ್ತದೆ; ಮತ್ತೊಮ್ಮೆ ಅತಿ ಕಡಿಮೆಯಾಗಿರುತ್ತದೆ. ತಾನು ಹೆಚ್ಚಿನವನೆಂಬ ವಿಪರೀತವಾದ ಅಳತೆಯೇ ದುರಭಿಮಾನವೆಂದು ಕರೆಯಲ್ಪಡುತ್ತದೆ. ಮೇಲಿನ ಶ್ಲೋಕದಲ್ಲಿ 'ಅಭಿಮಾನ' ಎಂಬ ಪದಕ್ಕೆ ಸದಭಿಮಾನ ಇಲ್ಲವೆ ಸರಿಯಾದ ಸ್ವಂತದ ಅಳತೆಯೆಂದು ಅರ್ಥಮಾಡಬೇಕು. ಹೀಗೆ ಕರ್ತವ್ಯಪರಾಯಣನಾಗಿ ಸತ್ಕರ್ಮನಿರತನಾದವನು ಸದಭಿಮಾನಿಯಾಗಿರುತ್ತಾನೆ. ಎಂದರೆ ಸದಭಿಮಾನವೇ ಅವನಿಗೆ ಸಂಪತ್ತಾಗುತ್ತದೆ. ಸಂಪತ್ತು ಸದಭಿಮಾನ, ದುರಭಿಮಾನವಲ್ಲ !

ಬಸವಣ್ಣನವರ ಅನುಭವಮಂಟಪದ ಸಂಪೂರ್ಣವಾದ ಚಿತ್ರವನ್ನು ಎರಡೇ ಎರಡು ಶಬ್ದಗಳಲ್ಲಿ ವಿವರಿಸಬಹುದು. 'ನಂಬಿಗಿ' ಹಾಗು 'ತಂಬಿಗಿ' ಎಂಬವೇ ಆ ಎರಡು ಶಬ್ದಗಳು. ನಮ್ಮ + ಬಿಗಿ = ನಂಬಿಗಿ; ತಮ್ಮ + ಬಿಗಿ = ತಂಬಿಗಿ. ದೇವನನ್ನು ನಮ್ಮ ಬಿಗಿಯೊಳಗಿಟ್ಟುಕೊಳ್ಳುವದು ನಂಬಿಗಿ. ಪರಾವಲಂಬಿಯಾಗದೆ ಪರಪುಷ್ಟನಾಗದೆ ಸ್ವಾವಲಂಬಿಯಾಗಿ ಯಾವದೊಂದು ಕಾಯಕವನ್ನು, ಸತ್ಯಶುದ್ಧವಾದ ಉದ್ಯೋಗವನ್ನು ಅವಲಂಬಿಸಿ ಸದಭಿಮಾನದಿಂದ ಜೀವಿಸುವದು ತಂಬಿಗಿ ! ಅನುಭವಮಂಟಪದ ಶರಣ–ಶರಣೆಯರು ದೇವನನ್ನು ತಮ್ಮ ತೆಕ್ಕೆಯೊಳು ಬಿಗಿದಪ್ಪಿಕೊಂಡು ತಮ್ಮ ಬಿಗಿವಿನೊಳಗೆ

ತಾವಿದ್ದರು. ಅದುದರಿಂದ ಊರೊಳಗೆ ಇದ್ದಾಗ ಸಂಬಿಗಿ (ಗೆ) ಯಿರಲಿ; ಊರ ಹೊರಗೆ ಹೋದಾಗ ತಂಬಿಗಿ (ಗೆ) ಯಿರಲಿ! ಅರ್ಥಾತ್ ಊರಲ್ಲಿದ್ದು ಕೊಂಡು ಸಮಾಜದೊಡನೆ ತಾನು ಸಹಕರಿಸಿ ಜೀವಿಸುವಂತ ಹಾಗು ತನ್ನೊಡನೆ ಸಮಾಜ ಸಹಕರಿಸಿ ಬಾಳುವಂತೆ ಸಂಬಿಗೆಯು ಅವಶ್ಯವಾಗಿ ಬೇಕೇ ಬೇಕು. ಅದೇ ಊರು ಬಿಟ್ಟು ಏಕಾಂತದಲ್ಲಿ ಹೋದಾಗ ಎಲ್ಲರೂ ತಮ್ಮ ಬಗೆಯಲ್ಲಿರ-ಬೇಕಾಗುವದು. ಆಳಿಮನವನ್ನು ಪ್ರದರ್ಶಿಸಿದರ ಮಾನ ಕಳೆದುಕೊಂಡು ಜೀವಿಸ-ಬೇಕಾದೀತು. ಅದಕ್ಕಾಗಿ ಆಗ ತಂಬಿಗಿ(ಗೆ) ಯು ಅವಶ್ಯಕವೆನಿಸುತ್ತದೆ.

ವಾಙ್ಮಾಧುರ್ಯಾತ್ಸರ್ವಲೋಕಪ್ರಿಯತ್ವಂ ।
ವಾಕ್ಪಾರುಷ್ಯಾತ್ಸರ್ವಲೋಕಾಪ್ರಿಯತ್ವಂ ॥
ಕೋ ವಾ ಲೋಕೇ ಕೋಕಿಲಸ್ಯೋಪಕಾರಃ ।
ಕೋ ವಾ ಲೋಕೇ ಗರ್ದಭಸ್ಯಾಪಕಾರಃ ॥

'ಸವಿಯಾದ ನುಡಿಯಿಂದ ಸರ್ವರ ಪ್ರೀತಿಯು ದೊರೆಯುವದು. ಬಿರುನುಡಿಯಿಂದ ಸರ್ವರ ಮಾತ್ಸರ್ಯವು ಸಂಘಟಿಸುವದು. ವಸ್ತುತಃ ಲೋಕಕ್ಕೆ ಕೋಗಿಲೆಯು ಮಾಡುವ ಉಪಕಾರವೂ ಇಲ್ಲ, ಕತ್ತೆಯು ಮಾಡುವ ಅಪಕಾರವೂ ಇಲ್ಲ.' ಹೀಗಿದ್ದರೂ ಒಂದರಲ್ಲಿ ರಾಗವುಂಟಾಗುವದಕ್ಕೂ, ಇನ್ನೊಂದರಲ್ಲಿ ದ್ವೇಷವುಂಟಾಗುವದಕ್ಕೂ ಅವೆರಡರ ಭಿನ್ನಭಿನ್ನವಾದ ಮಾತಿನ ರೀತಿಯೇ ಕಾರಣವಾಗಿದೆ. ನಮ್ಮ ವ್ಯವಹಾರವೆಲ್ಲ ನಡೆದಿರುವದು ಶಬ್ದಗಳಿಂದಲೇ. ಆ ಶಬ್ದಗಳ ಜೋಡಣೆಯೇ ನುಡಿಯಾಗುವದು. ನುಡಿದ ನುಡಿಯು ಸವಿಯಾ-ಗಿದ್ದರೆ ಸವಿನುಡಿಯಾಗುವದು. ಆ ನುಡಿಯಲ್ಲಿ ಅಚ್ಚುಕಟ್ಟುತನ ಪದಲಾಲಿತ್ಯಗಳಿದ್ದರೆ ಸಾಹಿತ್ಯವಾಗುವದು. ಅದುದರಿಂದ ಮಾತಿನಲ್ಲಿರುವ ತಾರತಮ್ಯ-ವನ್ನರಿತು ನಡೆಯಬೇಕು. 'ಕಲ್ಲು ಕಲ್ಲ ತಾಗಿದಂತೆ ನೊಲ್ಲು ಬಿರಿಯಾದರೆ ಅಲ್ಲಿ ನಿಲ್ಲನಯ್ಯಾ ಅಖಂಡೇಶ್ವರ!' ಎಂಬುದು ಅಕ್ಷರಶಃ ಸತ್ಯವಾದ ಮಾತು. "ನುಡಿದರೆ ಮುತ್ತಿನ ಹಾರದಂತೆ ಇರಬೇಕು; ನುಡಿದರೆ ಮಾಣಿಕ್ಯದ ದೀಪ್ತಿಯಂತೆ ಇರಬೇಕು. ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು!" ಮಧುರವಾದ ನುಡಿಯಿಂದಲೇ ನಮ್ಮ ನಿತ್ಯದ ವ್ಯವಹಾರವು ನಿರಾತಂಕವಾಗಿ, ನಿರರ್ಗಳವಾಗಿ ಸಾಗುತ್ತದೆ. ಮಾತಿನ ಮಹತಿಯನ್ನು ಮನಗಂಡು, ನುಡಿಯ ರೀತಿಯನ್ನು ತಿಳಿದುಕೊಂಡು ನಮ್ಮ ನಡೆಯನ್ನು ನಿರ್ಮಿಸಿಕೊಳ್ಳಬೇಕು. ಕೋಗಿಲೆಯು ಕಮನೀಯವಾದ

ಕೂಜನವನ್ನು ಕೇಳಿ ಉದಾರ ಅಂತಃಕರಣವು ಅರಳುವದಿಲ್ಲ? ಆದರೆ ಅದೇ ಕತ್ತೆಯ ಕರ್ಕಶವಾದ ಕರ್ಣಕಠೋರವಾದ ಕಿರುಚುವಿಕೆಯು ಎಲ್ಲರಿಗೂ ಅಪ್ರಿಯವಾಗಿ ಕಾಣುವದಿಲ್ಲವೆ? ನಿಜವಾಗಿಯೂ ನಮ್ಮ ಈ ಭಿನ್ನ ಭಿನ್ನವಾದ ಅನುಭವಕ್ಕೆ ಕೋಗಿಲೆಯ ಉಪಕಾರವಾಗಲಿ ಕತ್ತೆಯ ಅಪಕಾರವಾಗಲಿ ಕಾರಣವಾಗಿರದೆ ಅವೆರಡರ ಧ್ವನಿಯಲ್ಲಿ ಅಡಕವಾದ ಕೋಮಲತೆ ಹಾಗು ಕಠೋರತೆಗಳೇ ಕಾರಣವಾಗಿವೆ.

ಅಮಿತ ಗುಣೋಽಪಿ ಪದಾರ್ಥೋ
ದೋಷೇಣೈಕೇನ ನಿಂದಿತೋ ಭವತಿ ||
ನಿಖಿಲ ರಸಾಯನ ಮಹಿತೋ
ಗಂಧೇನೋಗ್ರೇಣ ಲಶುನ ಇವ ||

'ಬಹಳ ಒಳ್ಳೆಯ ಬೆಳ್ಳೊಳ್ಳಿಯು ದುರ್ಗಂಧವೊಂದರಿಂದ ಮಾತ್ರ ನಿಂದಿತವಾದಂತೆ ಅನಂತ ಗುಣಭರಿತ ವಸ್ತುವಾದರೂ ದೋಷೈಕ ಮಾತ್ರದಿಂದ ದೂಷಿತವಾಗುತ್ತದೆ.' ಬೆಳ್ಳೊಳ್ಳಿಗೆ ಬಡವರ ಕಸ್ತೂರಿ ಎಂದು ಹೇಳಲಾಗುತ್ತಿದೆ. ರಕ್ತದ ಒತ್ತಡಕ್ಕೆ ಅದು ರಾಮಬಾಣವೆಂದು ಈಗ ಪರಿಗಣಿಸಲ್ಪಟ್ಟಿದೆ. ಅಲ್ಲದೆ ರಾಸಾಯನಿಕ ವಿಧಾನದಿಂದ ಅದರ ದುರ್ಗಂಧವನ್ನು ತೆಗೆದು ಹಾಕುವ ಪ್ರಯತ್ನವೂ ನಡೆದಿದೆ. ಇಂದಿನ ಎಷ್ಟೋ ಔಷಧಗಳು ನಾವು ನಮ್ಮ ನಿತ್ಯ ಜೀವನದಲ್ಲಿ ಉಪಯೋಗಿಸುವ ಅತಿ ಸಾಮಾನ್ಯ ಪದಾರ್ಥಗಳಿಂದಲೇ ಉತ್ಪನ್ನ-ವಾಗುತ್ತವೆ. ಅಂಥ ಸಾಮಾನ್ಯ ಪದಾರ್ಥಗಳಲ್ಲಿ ಬೆಳ್ಳೊಳ್ಳಿ ಹಾಗು ಉಳ್ಳೇಗಡ್ಡಿಗಳೂ ಬರುತ್ತವೆ. ಬೆಳ್ಳೊಳ್ಳಿಯ ಸೇವನೆಯಿಂದ ಕಾವು, ಉಳ್ಳೇಗಡ್ಡಿಯನ್ನು ತಿನ್ನುವದರಿಂದ ತಂಪು ಹೆಚ್ಚಾಗುತ್ತದೆ. ಯೋಗಿಗಳು ಈ ಎರಡನ್ನು ತ್ಯಜಿಸುತ್ತಿದ್ದರು. ಏಕೆಂದರೆ ಮೊದಲನೆಯದು ಒಂದು ವಿಕಾರವನ್ನು ಹುಟ್ಟಿಸಿದರೆ ಎರಡನೆಯದು ಮನಸ್ಸಿಗೆ ಒಂದು ಮಂದಾದ ಅವಸ್ಥೆಯನ್ನುಂಟು ಮಾಡುತ್ತದೆ.

ಈ ಪ್ರಪಂಚದಲ್ಲಿ ಯಾವ ವಸ್ತುವೇ ಆಗಲಿ, ಯಾವ ವ್ಯಕ್ತಿಯೇ ಆಗಲಿ, ಸರ್ವಗುಣ ಸಂಪನ್ನವಾಗಿರಲಾರದು. ಒಬ್ಬೊಬ್ಬರಲ್ಲಿ ಒಂದೊಂದು ದೋಷವು ಕಂಡುಬರುವದು. ಆದೊಂದೇ ದೋಷವನ್ನು ದೊಡ್ಡದನ್ನಾಗಿ ಮಾಡಿ, ಅದಕ್ಕೆ ರಾವುಗನ್ನಡಿಯನ್ನು ಹಿಡಿದು ಆ ವ್ಯಕ್ತಿಯಲ್ಲಿಯ ಇಲ್ಲವೆ ವಸ್ತುವಿನಲ್ಲಿಯ

ಇನ್ನುಳಿದ ಸದ್ಗುಣಗಳನ್ನು ಮರೆಮಾಜುವದು ಮಾನವತೆಯೇ ಅಲ್ಲ. ಸರ್ವಗುಣಸಂಪನ್ನನಾದವನು, ಸರ್ವಕಲ್ಯಾಣಗುಣಮಂಡಿತನಾದವನು ಆ ದೇವನೊಬ್ಬನೇ. ಮಾನವನ ಅಸ್ತಿತ್ವದಿಂದ ದೇವನ ಅಸ್ತಿತ್ವವನ್ನು ಸಹಜವಾಗಿ ಊಹಿಸಬಹುದು. ಮಾನವನ ಜ್ಞಾನ ಭೋಗ ಕ್ರಿಯೆಗಳು ಅಲ್ಪವಾಗಿ ಈ ಶಕ್ತಿಗಳು ಅಥವಾ ಸಂಗತಿಗಳು ಒಬ್ಬ ಮಾನವನಲ್ಲಿ ಅಲ್ಪ ಪ್ರಮಾಣದಲ್ಲಿ ಇರುತ್ತವೆ, ಇದಕ್ಕಿಂತಲೂ ಹೆಚ್ಚು ಪ್ರಮಾಣದಲ್ಲಿ ಇನ್ನೊಬ್ಬನಲ್ಲಿರುತ್ತವೆ, ಮತ್ತೊಬ್ಬನಲ್ಲಿ ಇನ್ನೂ ಸ್ವಲ್ಪ ಅಧಿಕ ಪ್ರಮಾಣದಲ್ಲಿ ಕಾಣಬರುತ್ತವೆ. ಹೀಗೆ ಗುಣಗಳು ಹಾಗು ಶಕ್ತಿಗಳು ಒಬ್ಬನಲ್ಲಿ ಅಲ್ಪ, ಇನ್ನೊಬ್ಬನಲ್ಲಿ ಅಧಿಕ, ಮತ್ತೊಬ್ಬನಲ್ಲಿ ಅತ್ಯಧಿಕ, ಮಗುದೊಬ್ಬನಲ್ಲಿ ಅಧಿಕಾಧಿಕವಾಗುತ್ತ ಹೋಗುತ್ತವೆಂದು ಒಪ್ಪಿದ ಮೇಲೆ ಈ ಗುಣಗಳು ಮತ್ತು ಶಕ್ತಿಗಳು ಅಪಾರವಾಗಿದ್ದ ವ್ಯಕ್ತಿಯೊಬ್ಬನು ಇರಬೇಕಲ್ಲವೆ? ಇಂಥ ವ್ಯಕ್ತಿಯನ್ನೇ ನಾವು ದೇವರೆಂದು ಕರೆಯುತ್ತೇವೆ. ಇಂತು ಮಾನವನ ಅಸ್ತಿತ್ವದಿಂದ, ಅವನಲ್ಲಿರುವ ಅಲ್ಪಜ್ಞಾನ, ಅಲ್ಪಭೋಗ, ಅಲ್ಪಕ್ರಿಯೆಗಳ ತಾರತಮ್ಯದ ಆಧಾರದಿಂದ ಅಪಾರಜ್ಞಾನ, ಅಪಾರಭೋಗ, ಅಪಾರಕ್ರಿಯೆಗಳುಳ್ಳ ದೇವನೊಬ್ಬನನ್ನು ಊಹಿಸುವದು ಸಾಧ್ಯವಿರುವಂತೆಯೇ ಸಾಧುವೂ ಆಗಿದೆ. ಇದನ್ನೇ ಶಾಸ್ತ್ರೀಯ ಪರಿಭಾಷೆಯಲ್ಲಿ ಹೇಳಬೇಕೆಂದರೆ, The relative exists in relation to the Absolute. The relative cannot be said to be the relative unless there is the Absolute. Its existence has no meaning without that of the Absolute. ನಿರಪೇಕ್ಷದ ದೆಸೆಯಿಂದಲೇ ಸಾಪೇಕ್ಷಕ್ಕೆ ಅಸ್ತಿತ್ವ ಬಂದಿದೆ. ನಿರಪೇಕ್ಷವೊಂದಿಲ್ಲದಿದ್ದರೆ ಸಾಪೇಕ್ಷವು ಸಾಪೇಕ್ಷವೆಂದು ಕರೆಯಿಸಿಕೊಳ್ಳುವದಾದರೂ ಹೇಗೆ? ನಿರಪೇಕ್ಷದ ಹೊರತು ಸಾಪೇಕ್ಷದ ಅಸ್ತಿತ್ವವು ಅರ್ಥರಹಿತವಾದುದು. ಇದನ್ನೇ ಭಾರತೀಯರ ಪರಿಭಾಷೆಯಲ್ಲಿ ಬ್ರಹ್ಮದ ಅಸ್ತಿತ್ವದಿಂದಲೇ ಜಗತ್ತಿನ ಅಸ್ತಿತ್ವವು ಸಿದ್ಧವಾಗುತ್ತದೆಂದು ಹೇಳಬಹುದು. ಒಂದರ ಅಸ್ತಿತ್ವವು ಸಾಪೇಕ್ಷವಾದರೆ, ಇನ್ನೊಂದರದು ನಿರಪೇಕ್ಷವಾದುದು. ಹೀಗೆ ನೋಡಿದಾಗಲೂ ಅಲ್ಪಜ್ಞಾನ ಅಲ್ಪಕ್ರಿಯೆ ಅಲ್ಪಭೋಗಗಳ ಹಾಗು ಅಧಿಕಜ್ಞಾನ, ಅಧಿಕಭೋಗ, ಅಧಿಕಕ್ರಿಯೆಗಳ ಹಿನ್ನೆಲೆಯಾಗಿ ಇವೆಲ್ಲವುಗಳ ಅನಂತ ರಾಶಿಯೊಂದಿದೆ, ಆ ಅನಂತ ಇಲ್ಲವೆ ಅಪಾರ ರಾಶಿಯೇ ದೇವನು ಎಂಬ ಮಾತು ಸಿದ್ಧವಾಗುತ್ತದೆ.

ಕಸ್ಯಾಪಿ ಕೋಽಪ್ಯತಿಶಯೋ ಯದಿ ತೇನ ಸೋಽರ್ಥಃ ।
ಖ್ಯಾತಿಂ ಪ್ರಯಾತಿ ನ ಹಿ ಸರ್ವಗುಣಾಸ್ತು ಸರ್ವೇ ॥
ಕಿಂ ಮಲ್ಲಿಕಾ ಫಲತಿ ಕಿಂ ಫನಸಃ ಸಪುಷ್ಪಃ ।
ಕಿಂ ನಾಗವಲ್ಲ್ಯಪಿ ಚ ಪುಷ್ಪ ಫಲೈರುಪೇತಾ ॥

'ಸರ್ವ ವಸ್ತುವಿನಲ್ಲಿ ಸಮಸ್ತ ಗುಣಗಳು ಸನ್ನಿಹಿತವಾಗಿರುವದಿಲ್ಲ. ಯಾವುದಾದರೊಂದು ಗುಣವಿಶೇಷದಿಂದ ಒಂದು ವಸ್ತುವಿಗೆ ಪ್ರಾಶಸ್ತ್ಯವು ಬರುವದು. ಹಾಗೆಯೇ ಮಲ್ಲಿಗೆಯು ಫಲಗೊಡದೆಯೂ, ಹಲಸು ಹೂ ಬಿಡದೆಯೂ, ವೀಳ್ಯದ ಎಲೆಯ ಬಳ್ಳಿಯು ಫಲಪುಷ್ಪಗಳೆರಡೂ ಇಲ್ಲದೆಯೂ ಸರ್ವತ್ರ ಸಂಭಾವನೆಗೆ ಪಾತ್ರವಾಗಿರುವವು.' ಸುಭಾಷಿತಕಾರರು ಇಲ್ಲಿ ತೋರಿಸಿದ ನಿರೀಕ್ಷಣ ಶಕ್ತಿಯು ಬಹಳ ಹರಿತವಾಗಿದೆಯೆಂಬುದನ್ನು ಮನಗಾಣಬಹುದು. ಸರ್ವಗುಣಸಂಪನ್ನವಾದುದು ಈ ಲೋಕದಲ್ಲಿ ಯಾವುದೂ ಇಲ್ಲ. ಆದರೆ ಆ ದೇವನೊಬ್ಬನೇ ಅಂಥ ವ್ಯಕ್ತಿಯಾಗಿದ್ದಾನೆ. 'ಸರ್ವಗುಣ ಸಂಪನ್ನ ಲಿಂಗವೇ ನೀನು ಎನ್ನಲ್ಲಿ ಅವಗುಣವನ್ನು ಅರಸದಿರು' ಎಂದು ಬಸವಣ್ಣನ ಪ್ರಾರ್ಥನೆಯುಂಟು. ಇದರಿಂದ ಸರ್ವಗುಣ ಸಂಪನ್ನವಾದುದು ಲಿಂಗವೊಂದೇ.

ಸರ್ವ ಕಲ್ಯಾಣಗುಣಮಂಡಿತನಾದ ಪರಮಾತ್ಮನು ದೇಹಗಳಲ್ಲಿ ಅಂಶತಃ ಕಾಣಿಸಿಕೊಳ್ಳುವನು. ಒಂದೊಂದು ದೇಹವು ಒಂದೊಂದು ಪಾತ್ರವಿದ್ದಂತೆ. ದೇವನಾದರೋ ಅಪಾರವಾದ ಜಲನಿಧಿಯಿದ್ದಂತೆ. ನಾವು ನಮ್ಮ ಪಾತ್ರವನ್ನು ಒಯ್ದು ನೀರನ್ನು ತುಂಬಿಕೊಂಡು ಬಂದರೆ ಅದರಿಂದ ಜಲನಿಧಿಗೆ ಕೊರತೆಯಿಲ್ಲ. ಯಾರ ಪಾತ್ರವು ಎಷ್ಟು ದೊಡ್ಡದಿದೆಯೋ ಅಷ್ಟು ಪ್ರಮಾಣಕ್ಕನುಸರಿಸಿ ಜಲವು ತುಂಬುವದು. ಹಾಗೆಯೆ ದೇವನ ಕಾರುಣ್ಯವಾದರೂ, ಅವನ ಅನುಗ್ರಹಶಕ್ತಿ ಯಾದರೂ ಆ ಆ ಪಾತ್ರಗಳಲ್ಲಿ ಇಳಿದು ಅವುಗಳಿಗೆ ತಕ್ಕಂತೆ ಕಾರ್ಯವನ್ನು ಮಾಡುವದು. ಒಂದು ಪಾತ್ರದಲ್ಲಿ ಅದರ ಕಾರ್ಯವು ಅಲ್ಪವಾಗಿದ್ದರೆ ಇನ್ನೊಂದರಲ್ಲಿ ಅಧಿಕವಾಗಿರುತ್ತದೆ. ಅಲ್ಪ ಪಾತ್ರವು ಅಧಿಕ ಪಾತ್ರವನ್ನು ಕಂಡು ಕರುಬುವ ಕಾರಣವಿಲ್ಲ; ಕರುಬಬಾರದು. ಎಲ್ಲ ಪಾತ್ರಗಳಲ್ಲಿದ್ದು ಕಾರ್ಯಗೈಯ್ಯುವದು ಆ ಪ್ರಭುಶಕ್ತಿಯೊಂದೇ ಎಂದು ಅರಿತು ಆಚರಿಸಿದರೆ ಆನಂದವು ಉಕ್ಕಿ ಹೊರಹೊಮ್ಮುವದು. ಅಸೂಯೆಯು ಅಡಗುವದು; ಅನಸೂಯೆಯು ಒಡಮೂಡುವದು.

ಮೃತ್ಪಿಂಡ ಏಕೋ ಬಹು ಭಾಂಡ ರೂಪಃ ।
ಸುವರ್ಣಮೇಕಂ ಬಹು ಭೂಷಣಾತ್ಮ ।
ಗೋಕ್ಷೀರಮೇಕಂ ಬಹುಧೇನುಜಾತಂ ।
ಏಕಃ ಪರಾತ್ಮಾ ಬಹುದೇಹವರ್ತೀ ॥

'ಮಣ್ಣಿನ ಮುದ್ದೆಯು ಒಂದೇ ಆದರೂ ಅದರಿಂದ ಅನೇಕ ಮಡಿಕೆಗಳಾಗುವವು. ಬಂಗಾರದ ಗಟ್ಟಿಯು ಒಂದೇ ಆದರೂ ಅದರಿಂದ ಅನೇಕ ಆಭರಣಗಳು ಸಿದ್ಧವಾಗುವವು. ಹಾಲು ಒಂದೇ ಆದರೂ ಅದು ಅನೇಕ ಆಕಳುಗಳಿಂದ ಹಿಂಡಲ್ಪಡುವದು. ಹಾಗೆಯೆ ಲೋಕೈಕನಾದ ಪರಮಾತ್ಮನು ಒಬ್ಬನೇ ಆದರೂ ಅನೇಕ ದೇಹಗಳಲ್ಲಿ ಕಾಣಿಸಿಕೊಳ್ಳುವನು' ಈ ಸುಭಾಷಿತದ ಅರ್ಥವಾದರೂ ಮೇಲಿನ ಮಾತನ್ನೇ ನಿರ್ದೇಶಿಸುವದು.

ಒಮ್ಮೆ ಅನುಭವಿಯು ಅದಾಗ ಅನನುಭವಿಯು ಒದಗಿದಾಗ ಮಾನವನಲ್ಲಿ ಕ್ಷಮಾಗುಣವು ಮೂಡಿಬರುವದು. ಅನ್ಯರ ಅನ್ಯಾಯಗಳನ್ನು ಮರೆಯುವನಲ್ಲದೆ ಆ ಅನ್ಯಾಯಗಳಿಗೆ ತಕ್ಕ ಶಿಕ್ಷೆಯನ್ನು ಕೊಡುವ ಸಾಮರ್ಥ್ಯವಿದ್ದರೂ ಹಾಗೆ ಪ್ರತೀಕಾರವನ್ನು ಮಾಡದೆ ಕ್ಷಮಿಸುವನು. ಭೂಮಿಗೆ 'ಕ್ಷಾಮ' ಎಂದು ಹೆಸರಿದೆ. ಭೂದೇವಿಯಲ್ಲಿ ಅಪಾರವಾದ ಶಾಂತಿ ಇರುವದರಿಂದ ಮಾನವರಾದ ನಾವು ಎಸಗುವ ಅನ್ಯಾಯಗಳನ್ನೆಲ್ಲ ಮರೆತು ನಮ್ಮನ್ನು ಮಮತೆಯಿಂದ ಕಾಣುವಳು ಆಕೆ! ಹಾಗೆಯೇ ಸಜ್ಜನರು, ಸತ್ಪುರುಷರು, ಶರಣರು, ಸಂತರು ಕ್ಷಮಾಶೀಲರು; ಅವರು ಶಾಂತಿಯ ಪ್ರತಿನಿಧಿಗಳು.

ಕ್ಷಮಾ ಧನುಃ ಕರೇ ಯಸ್ಯ ದುರ್ಜನಃ ಕಿಂ ಕರಿಷ್ಯತಿ ।
ಅತೃಣೇ ಪತಿತೋ ವಹ್ನಿಃ ಸ್ವಯಮೇವೋಪಶಾಮ್ಯತಿ ॥

'ಹುಲ್ಲಿಲ್ಲದ ಸ್ಥಳದಲ್ಲಿ ಬಿದ್ದ ಕಿಡಿಯು ಆರಿಹೋಗುವಂತೆ ಕ್ಷಮಾಗುಣಭರಿತರಾದವರನ್ನು ದುರ್ಜನರು ಎಂದಿಗೂ ಬಾಧಿಸರು.' ಮಾನವನಿಗೂ ದೇವನಿಗೂ ಅವುದು ಅಂತರ? ಅವುದು ದೂರ? ಮಾನವನು ಕೊಂಡು ಮರೆಯುತ್ತಾನೆ; ದೇವನು ಕೊಟ್ಟು ಕ್ಷಮಿಸುತ್ತಾನೆ. (Man gets and forgets while God gives and forgives, and he who gives and forgives, is nearer to God.) ಯಾವನ

ಕೊಟ್ಟು ಕ್ಷಮಿಸುವ ಮಹಾಗುಣವನ್ನು ಪಡೆದಿರುತ್ತಾನೋ ಅವನು ದೇವನ ಸಮೀಪಕ್ಕೆ ಸಾರಬಲ್ಲನು.

ಇಂತಹ ಸದ್ಗುಣಗಳಿಂದ ಮಾನವನು ಶೀಲಸಂಪನ್ನನಾಗುತ್ತಾನೆ. ಸದ್ಗುಣಸಂಪತ್ತೆ ನಿಜವಾದ ಸಂಪತ್ತು. ಅದುವೆ ನಮ್ಮ ಶೀಲಸಂಪತ್ತು.

ವಿದೇಶೇಷು ಧನಂ ವಿದ್ಯಾ ವ್ಯಸನೇಷು ಧನಂ ಮತಿಃ ।
ಪರಲೋಕೇ ಧನಂ ಧರ್ಮಃ ಶೀಲಂ ಸರ್ವತ್ರ ವೈ ಧನಂ ॥

‘ವಿದೇಶದಲ್ಲಿ ವಿದ್ಯೆಯೇ ಧನವು. ವ್ಯಸನಕಾಲದಲ್ಲಿ ಬುದ್ಧಿಯೇ ಧನವು. ಪರಲೋಕದಲ್ಲಿ ಧರ್ಮವೇ ಧನವು. ಎಲ್ಲೆಡೆಯಲ್ಲಿಯೂ ಶೀಲವೆ, ಸದಾಚಾರವೇ ನಿಜವಾದ ಧರ್ಮವು.’

ಇಂಥದೊಂದು ಶೀಲಸಂವರ್ಧನೆಯನ್ನು ಸಂಪಾದಿಕೊಂಡು, ಅಪಾರ ಕಲ್ಯಾಣಗುಣಮಂಡಿತನಾದ ಪ್ರಭುವನ್ನು ಅನನ್ಯವಾಗಿ ಮೊರೆಹೊಕ್ಕು, ನೀತಿನಿಷ್ಠುರನಾಗಿ ಧರ್ಮವಂತನಾಗಿ ಬಾಳಿ ಬದುಕುವದೇ ನೀತಿಧರ್ಮ.



# ಮಾಟಗಾರ್ತಿ

ಸೃಷ್ಟಿಯನ್ನು ಸೇಂದ್ರಿಯ (Organic) ಹಾಗು ನಿರಿಂದ್ರಿಯವೆಂದು (Inorganic) ಎರಡು ಬಗೆಯಾಗಿ ಹೇಳುವ ವಾಡಿಕೆಯೊಂದುಂಟು. ಆದರೆ ಜಗದೀಶಚಂದ್ರ ಭೋಸರ ಪ್ರಯೋಗದಿಂದ ಈ ಹೇಳಿಕೆಯು ಯಥಾರ್ಥ-ವಾದುದಲ್ಲವೆಂದು ಸಿದ್ಧವಾಗಿದೆ. ಸೃಷ್ಟಿಯಲ್ಲಿ ಸೇಂದ್ರಿಯ ಹಾಗು ನಿರಿಂದ್ರಿಯ ವೆಂಬ ಕೃತಕ ಭೇದವಿಲ್ಲೆಂದೂ, ಸಮಸ್ತ ಸೃಷ್ಟಿಯಲ್ಲಿ ಒಂದೇ ಆರುಹು ಒಂದೇ ಚೇತನವು ಅಡಗಿದೆಯೆಂದೂ ಕಂಡುಬಂದಿದೆ. ವಿಜ್ಞಾನಿಗಳು ಪ್ರಯೋಗದಿಂದ ಕಂಡು ಹಿಡಿದ ಸತ್ಯವನ್ನು ಯೋಗಿಗಳು ಪ್ರತಿಭೆಯಿಂದ ಪ್ರಕಟಪಡಿಸುವರು. ಸಮಸ್ತ ಸೃಷ್ಟಿಯಲ್ಲಿ ಒಂದೇ ಒಂದು ಚೇತನವು ಅಡಗಿದೆಯೆಂದಬಳಿಕ ಜಡ ಮತ್ತು ಚೇತನವೆಂಬ ಭೇದವು ಎಲ್ಲಿಂದ ಬಂತು ? ಇದಕ್ಕೆ ಉತ್ತರವಿಷ್ಟೇ : ಮರದಲ್ಲಿ ಚೇತನವುಂಟು. ಆದರೆ ಮಾನವನಿಗೆ ತನ್ನ ಚೇತನವನ್ನು ಪ್ರಕಟ-ಮಾಡಲಿಕ್ಕೆ ಇಂದ್ರಿಯಗಳು ಇರುವಂತೆ ಮರಕ್ಕೆ ಇಲ್ಲ. ಆ ಚೇತನವನ್ನು ವ್ಯಕ್ತಮಾಡಲಿಕ್ಕೆ ಬೇಕಾಗುವ ಇಂದ್ರಿಗಳ ಅಭಿವ್ಯಕ್ತಿಯನ್ನು ಜಡ-ಚೇತನಗಳ ತಾರತಮ್ಯವು ಅವಲಂಬಿಸಿದೆ. ಇಂದ್ರಿಯಗಳ ಈ ಅಭಿವ್ಯಕ್ತಿಯಲ್ಲಿರುವ ತಾರತಮ್ಯವನ್ನು ಆಶ್ರಯಿಸಿಯೇ ಜೈನರು ಏಕೇಂದ್ರಿಯ ಪ್ರಾಣಿ, ದ್ವಿ-ಇಂದ್ರಿಯ ಪ್ರಾಣಿ ಮುಂತಾಗಿ ಪ್ರಾಣಿಗಳಲ್ಲಿ ವರ್ಗೀಕರಣವನ್ನು ಮಾಡಿದ್ದಾರೆ. ಒಂದೊಂದು ಪ್ರಾಣಿಯಲ್ಲಿ ಒಂದೊಂದು ಇಂದ್ರಿಯದ ಅಭಿವ್ಯಕ್ತಿಯು ಹೆಚ್ಚು ತೀವ್ರವಾಗಿರುತ್ತದೆ. ಪತಂಗದಲ್ಲಿ ನೇತ್ರೇಂದ್ರಿಯದ ತೀಕ್ಷ್ಣತೆಯು ಹೆಚ್ಚು ಒಡೆದು ಕಾಣುತ್ತದೆ. ಗಜದಲ್ಲಿ ಸ್ಪರ್ಶೇಂದ್ರಿಯವು ಹೆಚ್ಚು ಜಾಗೃತವಿದ್ದುದು ಕಂಡುಬರುತ್ತದೆ. ಆದರೆ ಮಾನವನಲ್ಲಿ ಪಂಚೇಂದ್ರಿಯಗಳೂ ಅಷ್ಟೇ ಪ್ರಮಾಣ ದಲ್ಲಿ ತೀವ್ರವಾಗಿವೆ, ಅಷ್ಟೇ ರೀತಿಯಲ್ಲಿ ತೀಕ್ಷ್ಣವಾಗಿವೆ, ಅಷ್ಟೇ ವಿಧದಲ್ಲಿ ಜಾಗೃತವಾಗಿವೆ. ಅಲ್ಲದೆ ಮಾನವನಲ್ಲಿ ಈ ಪಂಚೇಂದ್ರಿಯಗಳಿಗಧಿಪತಿಯಾಗಿ ಮನವೆಂಬುದಿನ್ನೊಂದು ಶ್ರೇಷ್ಠ ಇಂದ್ರಿಯವುಂಟು. 'ಮಾನವ' ಶಬ್ದವು 'ಮನನ ಶಕ್ತಿ'ಯುಳ್ಳವನು ಯಾವನೋ ಅವನು ಎಂಬ ಅರ್ಥದಲ್ಲಿಯೇ ಬಂದಿದೆ.

ಪ್ರಾಣಿಗಳಲ್ಲಿ ಈ ಮನವು ಇದ್ದರೂ ಅದು ನಿಷ್ಕ್ರಿಯವಾಗಿದೆ (Passive). ಆದರೆ ಮಾನವನಲ್ಲಿ ಮಾತ್ರ ಅದು ಸಕ್ರಿಯವಾದುದಾಗಿದೆ

(Active). ಇಂದ್ರಿಯಗಳ ಮುಖಾಂತರವಾಗಿ ಬಾಹ್ಯ ಉತ್ತೇಜಕಗಳಿಂದ ಬರುವ ಸಂವೇದನೆಗಳನ್ನು ಸ್ವೀಕರಿಸುವುದಷ್ಟೇ ಮನಸ್ಸಿನ ಕೆಲಸವಲ್ಲ. ಅವುಗಳನ್ನು ಕೂಡಿಸಿ ಜೋಡಿಸಿ, ಭಾಗಿಸಿ ವಿಭಾಗಿಸಿ, ತುಲನೆ ಮಾಡಿ ತಾಳೆ ನೋಡಿ, ಪರೀಕ್ಷಿಸಿ ಪೃಥಕ್ಕರಿಸಿ ನೋಡುವ ಸಂಯೋಜನೆ ಮಾಡಿ ನೀಡುವ ಸಾಮರ್ಥ್ಯವನ್ನುಳ್ಳದ್ದೂ ಆಗಿದೆ ಆ ಮನಸ್ಸು. ವಿಶ್ವದ ವಿಶಾಲ ರಂಗದಲ್ಲಿ ವಿವಿಧ ಘಟನೆಗಳೂ ವಸ್ತುಗಳೂ ಸಂಗತಿಗಳೂ ನೆಲೆಸಿವೆ. ಇವುಗಳ ನಡುವೆ ಒಂದು ತರಹದ ಸೇರುವೆಯುಂಟು; ಒಂದು ಪ್ರಕಾರದ ಸಂಬಂಧವುಂಟು. ಹೀಗೆ ನೆಲೆಯಾದ ಬಗೆಬಗೆಯ ಸಂಬಂಧ–ಅನುಬಂಧಗಳನ್ನು ತಿಳಿಯುಕೊಳ್ಳುವದು ಮನನಶಕ್ತಿಯ ಕಾರ್ಯ. ಈ ಸಂಬಂಧ–ಅನುಬಂಧಗಳು ತಮ್ಮಷ್ಟಕ್ಕೆ ತಾವೇ ಗೋಚರವಾಗುವದಿಲ್ಲ. ಮಾನವನು ತನ್ನ ಪ್ರಯತ್ನದಿಂದ ಎಂದರೆ ತನ್ನಲ್ಲಿ ಸುಪ್ತವಾದ ಗುಪ್ತವಾದ ಮನನಶಕ್ತಿಯನ್ನು ಜಾಗೃತಗೊಳಿಸಿ ಅದರ ನೆರವಿನಿಂದ ಅವನ್ನು ಕಂಡುಹಿಡಿಯಬೇಕಾಗುತ್ತದೆ. ದೇಶ – ಕಾಲಗಳ ಸಂಬಂಧ, ಕಾರ್ಯ–ಕಾರಣಗಳ ಸಂಬಂಧ, ಸಾಮ್ಯ–ವೈಷಮ್ಯಗಳ ಸಂಬಂಧ ಹೀಗೆ ಅನೇಕ ಬಗೆಯ ಸಂಬಂಧಗಳುಂಟು. ತೋರಿಕೆಗೆ ಅಸಂಬದ್ಧವಾಗಿಯೂ ಅಸ್ಪಷ್ಟವಾಗಿಯೂ ಜರುಗುವ ಘಟನೆಗಳಲ್ಲಾಗಲಿ ಸಂಗತಿಗಳಲ್ಲಾಗಲಿ ಒಂದು ತರಹದ ಸಂಬಂಧವನ್ನು, ಒಂದು ಪ್ರಕಾರದ ಸೂತ್ರಬದ್ಧತೆಯನ್ನು, ಒಂದು ವಿಧವಾದ ಸ್ಪಷ್ಟತೆಯನ್ನು ವಿಶದಪಡಿಸುವದು ಈ ಮನನಶಕ್ತಿ. ಪ್ರಾಕೃತಾವಸ್ಥೆಯಲ್ಲಿ ಮಾನವನು ಪಂಚೇಂದ್ರಿಯಗಳ ಪ್ರಾಣಿಯಾಗಿದ್ದಾನೆ. ಅವನಲ್ಲಿ ಈ ಮನನ ಶಕ್ತಿಯು ಸಾಮಾನ್ಯವಾದ ರೀತಿಯಲ್ಲಿ ಮಾತ್ರ ಕೆಲಸ ಮಾಡುತ್ತಿದೆ. ಮಾನವನು ತನ್ನ ಅಪ್ರತಿಹತವಾದ ಅಭ್ಯಾಸ ಹಾಗು ಸಾಧನಗಳ ಸಹಾಯದಿಂದ ತನ್ನಲ್ಲಿ ಗುಪ್ತ–ಸುಪ್ತವಾಗಿರುವ ಬೇರೆ ಬೇರೆ ಇಂದ್ರಿಯಗಳನ್ನು ಜಾಗೃತಗೊಳಿಸಿಕೊಳ್ಳಲು ಸಾಧ್ಯವಿದೆ. ಹಾಗೆ ಜಾಗ್ರುತಗೊಳಿಸಿಕೊಂಡಾಗ ಐದೇ ಏಕೆ ಅನಂತ ಇಂದ್ರಿಯಗಳು ಮಾನವನಲ್ಲಿ ಇರುವವೆಂದು ವ್ಯಕ್ತವಾಗುವದು. ಈ ಜಾಗೃತವಾದ ದಿವ್ಯವಾದ ಅಂತರಿಂದ್ರಿಯವನ್ನು ಯೋಗಿಗಳು ತ್ರಿನೇತ್ರವೆಂದು ಕರೆಯುತ್ತಾರೆ. (The opening of the third eye or the intuitive eye).

ಈ ದಿವ್ಯಚಕ್ಷುವು ಮನನಶಕ್ತಿಯ ಪರಾಕಾಷ್ಠೆಯಾಗಿದೆ. ಅದನ್ನೇ ನಾವು ಹೀಗೆ ಹೇಳಬಹುದು: ಈ ಮನನಶಕ್ತಿಯು ಕವಿಗಳಲ್ಲಿಯೂ ವಿಜ್ಞಾನಿಗಳಲ್ಲಿಯೂ ವಾಗ್ಮಿಗಳಲ್ಲಿಯೂ ಮನೀಷಿಗಳಲ್ಲಿಯೂ ಅನುಭಾವಿಗಳಲ್ಲಿಯೂ

ಕಂಡುಬರುವದಾದರೂ ಸಿದ್ಧಯೋಗಿಗಳಲ್ಲಿ ಮಾತ್ರ ಅದು ಪರಾಕಾಷ್ಠೆಯನ್ನು ಪಡೆದಿರುತ್ತದೆ. ಕವಿಗಳಲ್ಲಿ ರೂಪಕಶಕ್ತಿಯಾಗಿ, ವಿಜ್ಞಾನಿಗಳಲ್ಲಿ ಸಂಶೋಧನಾಶಕ್ತಿಯಾಗಿ, ವಾಗ್ಮಿಗಳಲ್ಲಿ ಭಾಷಣಶಕ್ತಿಯಾಗಿ, ಮನೀಷಿಗಳಲ್ಲಿ ಮಂತ್ರಶಕ್ತಿಯಾಗಿ, ಅನುಭಾವಿಗಳಲ್ಲಿ ಅಂತಃಶಕ್ತಿ ಇಲ್ಲವೆ ಅಂತಃಸ್ಫುರಣವಾಗಿ— ಹೀಗೆ ಬೇರೆ ಬೇರೆ ರೀತಿಯಿಂದ ಕಾರ್ಯಗೈಯುತ್ತಿರುವ ಮನನಶಕ್ತಿಗೇನೇ 'ಮಾಟಗಾರ್ತಿ' (Creative Power) ಎಂದು ಹೆಸರು. ಈ ಮನನಶಕ್ತಿಯಲ್ಲಿ ಘಟನೆಗಳನ್ನೂ ಸಂಗತಿಗಳನ್ನೂ ರೂಪಿಸುವ ಮಹತ್ತ್ವವಾದ ಒಂದು ಸಾಮರ್ಥ್ಯವಿರುವದರಿಂದ ಅದಕ್ಕೆ 'ಮಾಟಗಾರ್ತಿ' ಯೆಂದು ಕರೆಯಲಾಗಿದೆ. ಕವಿಗಳಲ್ಲಿ ಕಂಡುಬರುವ ಈ ರೂಪಕಶಕ್ತಿಯನ್ನು, ಈ ಮಾಟಗಾರ್ತಿಯನ್ನು ಇಮರ್ಸನ್ನನು ಹೀಗೆ ವರ್ಣಿಸಿದ್ದಾನೆ—

'In poetry we say we require the miracle. The bee flies among the flowers and gets mint and marjoram, and generates a new product which is not mint and marjoram but honey... ........ And the poet listens to conversation and beholds all objects in nature, to give back not them but a new transcendental whole.'

'ಕಾವ್ಯದಲ್ಲಿ ಪವಾಡವಿರಬೇಕೆಂದು ನಾವು ಹೇಳುತ್ತೇವೆ. ತುಂಬಿಯು ತರತರದ ಹೂವುಗಳಿದ್ದ ತೋಟಗಳಲ್ಲಿ ಹಾರಾಡಿ ಪರಾಗವನ್ನು ಇಲ್ಲವೆ ಮಕರಂದವನ್ನು ಹೀರಿಕೊಂಡು ತಂದು ತಾನೊಂದು ಹೊಸ ವಸ್ತುವನ್ನು ಹುಟ್ಟಿಸುತ್ತದೆ. ಹಾಗೆ ತುಂಬಿಯು ತಯಾರಿಸಿದ ಆ ನವೀನ ಸೃಷ್ಟಿಯು ಹೂವುಗಳಿಂದ ಸ್ವೀಕರಿಸಿದ ಪರಾಗವೇ ಆಗಲಿ, ಮಕರಂದವೇ ಆಗಲಿ ಆಗಿರದೆ ಜೇನುತುಪ್ಪವೆಂಬ ಹೊಸ ಸೃಷ್ಟಿಯಾಗಿದೆ..........ಹಾಗೆಯೆ ಕವಿಯು ಮಾನವರ ಮಾತುಗಳನ್ನು ಕೇಳುತ್ತಾನೆ ಹಾಗು ನಿಸರ್ಗದ ವಸ್ತುನಿಕಾಯವನ್ನು ನೋಡುತ್ತಾನೆ. ಅದೇಕೆ ಗೊತ್ತೆ? ಅವುಗಳನ್ನೇ ನಮ್ಮೆದುರು ಇದ್ದಕ್ಕಿದ್ದಂತೆ ಇಡಲಿಕ್ಕೆ ಅಲ್ಲ; ಆದರೆ ಅವುಗಳನ್ನು ಮೀರಿದ ಮಿಗಿಲಾದ ಕೃತಿಯಲ್ಲಿ ವ್ಯಕ್ತಗೊಳಿಸಲು ಹಾಗೆ ಮಾಡುತ್ತಾನೆ!' ಸರಿ; ಇಮರ್ಸನ್ನನ ಅಭಿಪ್ರಾಯದ ಪ್ರಕಾರ ನಾವು ಸಾಹಿತ್ಯದಲ್ಲಿಯೂ ಸಹ ಪವಾಡವಿರಬೇಕೆಂದು ಅಪೇಕ್ಷಿಸುತ್ತೇವೆ. ಆದರೆ ಕವಿಗಳೇನೂ

ಪವಾಡಪ್ರರುಷರಲ್ಲ, ಕಾವ್ಯವೇನೂ ಪವಾಡವಲ್ಲ ಎಂದು ನಾವು ಹೇಳುತ್ತೇವೆ. ಹಾಗಾದರೆ ಪವಾಡವೆಂದರೇನು? ಪವಾಡವೆಂದರೆ ಈ ರೂಪಶಕ್ತಿಯು, ಈ ಮಾಟಗಾರಿಕೆಯು ಕೈವಾಡವಲ್ಲದೆ ಮತ್ತೇನು? ತುಂಬಿಯು ಬಗೆಬಗೆಯ ಹೂಗಳಿಂದ ರಸವನ್ನು ಹೀರಿ ಅದನ್ನು ಜೇನನ್ನಾಗಿ ಮಾಡಿ ರೂಪಿಸುವಂತೆ ಕವಿಯಾದರೂ ಮಾನವರ ಮಾತಿನಿಂದಲೂ ನಿಸರ್ಗದ ಮೌನದಿಂದಲೂ, ಸತ್ಯವನ್ನೂ ಸೌಂದರ್ಯವನ್ನೂ ಆರಿಸಿಕೊಂಡು ಅವುಗಳಿಂದ ಒಂದು ಪವಾಡಸದೃಶವಾದ ಕಾವ್ಯನಿರ್ಮಿತಿಯನ್ನು ಉಂಟುಮಾಡುತ್ತಾನೆ.

ಈ ಮಾಟಗಾರಿಕೆಯು, ಈ ರೂಪಕ ಶಕ್ತಿಯ ಕೈವಾಡವು ಸಕಲ ಶಾಸ್ತ್ರಗಳಲ್ಲಿ ಹಾಗು ಕಲೆಗಳಲ್ಲಿ ಕಂಡುಬರುವದಾದರೂ ಸಾಹಿತ್ಯದಲ್ಲಿ ಅದು ಅಧಿಕ ಪ್ರಮಾಣದಲ್ಲಿ ಗೋಚರಿಸುತ್ತದೆ. ಅಂತೆಯೇ ಸಾಹಿತ್ಯದಲ್ಲಿ ಪವಾಡವಿರಲು ಸಾಧ್ಯವಿದೆ! ಹಾಗಾದರೆ ಸಾಹಿತ್ಯವೆಂದರೇನು? ಸಾಹಿತ್ಯವೆಂದರೆ ಸವಿನುಡಿ. ಮಾನವನ ವ್ಯವಹಾರಗಳಾಗಲಿ ಪ್ರಾಣಿಗಳ ಚಟುವಟಿಕೆಯಾಗಲಿ ನಡೆಯುವದು ಮಾತಿನಿಂದಲೇ, ಶಬ್ದದಿಂದಲೇ. ಇನ್ನು ಶಬ್ದಕ್ಕೆ ಮೂಲವಾದುದು ನಾದ! ಈ ನಾದದಿಂದಲೇ ಸೃಷ್ಟಿಯು ಉತ್ಪತ್ತಿಯಾಗಿದೆ; ಆಗುತ್ತಿದೆ. ಜಾಗ್ರ ಸ್ವಪ್ನ ಸುಷುಪ್ತಿ ಎಂಬೆಲ್ಲ ಅವಸ್ಥೆಗಳಲ್ಲಿಯೂ ಮಾನವನ ವ್ಯವಹಾರವು ಶಬ್ದದಿಂದಲೇ ಸಾಗಿರುತ್ತದೆ. Even thinking is talking under nose ಎಂದು ಹೇಳುತ್ತಾರೆ! ಮಾನವನ ಎಲ್ಲ ಅವಸ್ಥೆಗಳಲ್ಲಿಯೂ ಇರುವ ಶಬ್ದಗತಿಯು ನಾದಬ್ರಹ್ಮನಿಗೆ ಸಂಬಂಧಪಟ್ಟುದು. ನಾದ ಬ್ರಹ್ಮನ ಸಾಕ್ಷಾತ್ಕಾರಕ್ಕಿಂತಲೂ ಮಿಗಿಲಾದದ್ದು ಸ್ವಾನುಭಾವ. ಸ್ವಾನುಭಾವವನ್ನು ವ್ಯಕ್ತಗೊಳಿಸುವ ಶಬ್ದದ ಇಲ್ಲವೆ ನಾದದ ಮಹತಿಯನ್ನು ಕೆಳಗಿನ ವಚನವು ಸುಂದರವಾಗಿ ಸ್ಪಷ್ಟವಾಗಿ ಮಾಡಿಕೊಡುತ್ತದೆ :

ನಾದದ ಬಲದಿಂದ ವೇದಾಂಗಗಳಾದುವಲ್ಲದೆ
ವೇದವು ಸ್ವಯಂಭೂವಲ್ಲ ನಿಲ್ಲೋ, ನಿಲ್ಲೋ :
ಮಾತಿನ ಬಲದಿಂದ ಶಾಸ್ತ್ರಂಗಳಾದುವಲ್ಲದೆ
ಶಾಸ್ತ್ರ ಸ್ವಯಂಭೂ ಅಲ್ಲ ನಿಲ್ಲೋ, ನಿಲ್ಲೋ :
ಪಾಷಾಣದ ಬಲದಿಂದ ಸಮಯಂಗಳಾದುವಲ್ಲದೆ
ಸಮಯ ಸ್ವಯಂಭೂ ಅಲ್ಲ ನಿಲ್ಲೋ, ನಿಲ್ಲೋ :

ಇಂತೀ ಮಾತಿನ ಬಣವೆಯ ಮುಂದಿಟ್ಟುಕೊಂಡು
ಆತನ ಕಂಡಿಹೆನೆಂಬರೆ ಸಿಗನೆಂಬನಂಬಿಗರ ಚೌಡಯ್ಯ.

ನಾದ ಅಥವಾ ಶಬ್ದಗಳಿಲ್ಲದೆ ವೇದಗಳ ಹುಟ್ಟು ಅಸಾಧ್ಯವಾದುದರಿಂದ ವೇದಗಳು 'ಸ್ವಯಂಭೂ' ಎನ್ನುವದು ತಪ್ಪು! ಮಾತಿನ ರೀತಿಯನ್ನರಿತ ತಾರ್ಕಿಕರಿಂದ ಅರ್ಥಾತ್ ಮಾತಿನಲ್ಲಿಯೇ ಸರ್ವ ಶಾಸ್ತ್ರಗಳು ಉಗಮ ಹೊಂದಿವೆ. ಆದರೆ ಅವು ಸ್ವಯಂಭೂ ಆಗಿಲ್ಲ. ಶೈವ ವೈಷ್ಣವ ಮುಂತಾದ ಸಮಯಗಳು ಅಥವಾ ಸಂಪ್ರದಾಯಗಳು ಶಿವಲಿಂಗ ಸಾಲಿಗ್ರಾಮ ಮುಂತಾದವುಗಳ ಕಾರಣ ದಿಂದಲೇ ಈ ಲೋಕದಲ್ಲಿ ಹುಟ್ಟಿದವಲ್ಲದೆ ಅವೂ ಸಹ ಸ್ವಯಂಭೂ ಅಲ್ಲ! ಕೇವಲ ಹೊರೆಹೊರೆಯಾಗಿ ಮಾತನಾಡಿ ದೊಡ್ಡದೊಂದು ಮಾತಿನ ಬಣವೆಯನ್ನು ಮುಂದಿಟ್ಟುಕೊಂಡು ಅದರಲ್ಲಿಯ ಒಂದೊಂದು ದಂಟನ್ನೋ, ಒಂದೊಂದು ಸಿವುಡನ್ನೋ ಹಿರಿದುಕೊಂಡು ಅದನ್ನೇ ಬಳಸಿ ಬೆಳಸಿ, ಒಮ್ಮೊಮ್ಮೆ ಕೊಳಿಸಿ ಆ ಪರಮಾತ್ಮನನ್ನು ಅರಿಯಬೇಕು, ಅರಿತು ವರ್ಣಿಸಬೇಕು ಎಂದರೆ ಸಾಧ್ಯವಿಲ್ಲ. ಶುದ್ಧ ಮನಕ್ಕೆ ನಿರ್ಮಲವಾದ ಅಂತಃಕರಣಕ್ಕೆ ಸ್ವಾನುಭವಕ್ಕೆ ಮಾತ್ರ ಆ ಪರಮಾತ್ಮನು ವೇದ್ಯ; ಅಂತೆಯೇ ಸಾಧ್ಯ! ಆದಕ್ಕಾಗಿ ಈ ಶಬ್ದಬ್ರಹ್ಮವನ್ನು ಮೀರಿದುದು ಸ್ವಾನುಭವ. ನೋಡಿದಿರಾ ಈ ವಚನಕಾರನ ಸ್ವತಂತ್ರ ವಿಚಾರದ ಸುಂದರವಾದ ರೀತಿಯನ್ನು! ಒಟ್ಟಿನಲ್ಲಿ ಅದು ಯಾವುದೇ ಸಾಹಿತ್ಯವಿರಲಿ— ದಿವ್ಯ ಸಾಹಿತ್ಯವಿರಲಿ, ಭವ್ಯ ಸಾಹಿತ್ಯವಿರಲಿ, ರಮ್ಯ ಸಾಹಿತ್ಯ ವಿರಲಿ, ವಾಸ್ತವ ಸಾಹಿತ್ಯವಿರಲಿ— ಎಲ್ಲ ತರಹದ ಸಾಹಿತ್ಯಕ್ಕೂ ಶಬ್ದವನ್ನು ಬಿಟ್ಟು ಮತ್ತೊಂದು ಸಾಧನವೇ ಇಲ್ಲ.

ಸಾಹಿತ್ಯವು ತನ್ನ ಅಂತಿಮ ಗುರಿಯಲ್ಲಿ ನಾದಬ್ರಹ್ಮನಿಗೇ ಸಂಬಂಧಪಟ್ಟುದಾಗಿದೆ. ಆದರೆ ನುಡಿದ ನುಡಿಗಳೆಲ್ಲವೂ, ಆಡಿದ ಮಾತುಗಳೆಲ್ಲವೂ ಸಾಹಿತ್ಯವಾಗಲಾರವು. ಮೇಲೆ ಹೇಳಿದಂತೆ ಸವಿಯಾದ ನುಡಿ ಅಥವಾ ಸಮೀಚೀನವಾದ ಮಾತು ಮಾತ್ರ ಸಾಹಿತ್ಯವೆನ್ನಿಸಿಕೊಳ್ಳಲು ತಕ್ಕುದಾಗಿದೆ. ನುಡಿಯು ಸವಿಯಾದುದು ಸಮೀಚೀನವಾದುದು ಯಾವಾಗ ಮತ್ತು ಏತರಿಂದ? ನುಡಿದ ನುಡಿಯಲ್ಲಿ ಆಡಿದ ಮಾತಿನಲ್ಲಿ ಒಂದು ತರಹದ ಅಚ್ಚುಕಟ್ಟು, ಸವಿಕಟ್ಟುಗಳೆರಡೂ ಕೂಡಿ ಬೆರೆತಾಗ ಮಾತ್ರ ಆ ನುಡಿಯು ಇಲ್ಲವೆ ಮಾತು ಸವಿಯಾಗುವದು, ಸಮೀಚೀನವಾಗುವದು. ಮತ್ತು ಸಾಹಿತ್ಯವೆಂದೆನಿಸಿಕೊಳ್ಳುವ ನುಡಿಯಲ್ಲಿ

ಸಾಹಿತ್ಯ ಬರುವದು ಮಧುರವಾದ ಭಾವಗಳಿಂದಲ್ಲವೆ? ಅಚ್ಚುಕಟ್ಟು ಬರುವದು ಆಸ್ತು ಪದಗಳಿಂದಲ್ಲವೆ? ಪದಲಾಲಿತ್ಯವೂ ಭಾವಮಾಧುರ್ಯವೂ ಮಿಳಿತವಾದರೆ ಸೃಷ್ಟಿಯಾಗುವದು ಲಲಿತಸಾಹಿತ್ಯ. ಆದರೆ ಲಲಿತಸಾಹಿತ್ಯವೊಂದೇ ಸಾಹಿತ್ಯವಲ್ಲ. ಲಲಿತಸಾಹಿತ್ಯವಲ್ಲದೆ ಜ್ಞಾನಸಾಹಿತ್ಯವೂ ಹಾಗು ಭಕ್ತ ಸಾಹಿತ್ಯ ಇಲ್ಲವೆ ಅನುಭಾವ ಸಾಹಿತ್ಯವೂ ಉಂಟು.

ಇತ್ತೀಚಿಗೆ ಲಲಿತಸಾಹಿತ್ಯವು ವಿಶೇಷವಾಗಿ ನಿರ್ಮಾಣವಾಗುತ್ತಿದೆ. ಬಗೆ ಬಗೆಯ ಕವಿತೆ ಕತೆ ಕಾದಂಬರಿ ಗದ್ಯನಾಟಕ ಗೀತನಾಟಕ ಹರಟೆ ಪ್ರಬಂಧ ವ್ಯಕ್ತಿಚಿತ್ರ ಜೀವನಚರಿತ್ರೆ-- ಇವೇ ಮುಂತಾದ ರಸದೃಷ್ಟಿಯಿಂದ ರಚಿತವಾದ ಲಲಿತಸಾಹಿತ್ಯದ ವಿವಿಧ ವಿಭಾಗಗಳು ವಿಪುಲವಾಗಿ ಪ್ರಕಟವಾಗುತ್ತಿರುವದೇನೋ ಸಂತೋಷದ ಸಂಗತಿಯೇ. ಲಲಿತಸಾಹಿತ್ಯವು ಗದ್ಯರೂಪವಾಗಿಯೂ ಪದ್ಯರೂಪವಾಗಿಯೂ ಹಾಗೆಯೆ ಗದ್ಯಪದ್ಯ ರೂಪಗಳಲ್ಲಿಯೂ ಹಲವಾರು ಬಗೆಯ ಪ್ರಯೋಗಗಳೊಡಗೂಡಿ ಪ್ರಕಟವಾಗತೊಡಗಿದೆ. ಪದ್ಯಕ್ಕಿಂತ ಗದ್ಯವು ಹುಲುಸಾಗಿಯೂ ಹೃದ್ಯವಾಗಿಯೂ ಬೆಳೆಯತೊಡಗಿದೆ. ಇಂಥ ಲಲಿತ ಸಾಹಿತ್ಯವು ಓದಬಲ್ಲ ಎಲ್ಲರಿಗಾಗಿ ರಚಿತವಾಗಬೇಕು. (Literature for laymen) ಆದ್ದರಿಂದ ಎಲ್ಲರೂ ಅದನ್ನು ಸವಿಯುವಂತಾಗಬೇಕು. ಹಾಗಾದಾಗ ಮಾತ್ರ ಸಾಹಿತ್ಯವು ಸಾಫಲ್ಯವನ್ನು ಹೊಂದುತ್ತದೆ. ಜನಸಾಮಾನ್ಯರಿಗಾಗಿ ಸಾಹಿತ್ಯ ಎಂಬ ಸೊಲ್ಲು ಎಲ್ಲೆಡೆಯಲ್ಲಿಯೂ ಕೇಳಬರುತ್ತದೆ. ಹೀಗೆಂದರೆ ಏನು? ಸಾಹಿತಿಯಾದವನು ಜನಸಾಮಾನ್ಯರ ಮಟ್ಟಕ್ಕಿಳಿದು ಕೃತಿರಚನೆಗೆ ತೊಡಗಬೇಕೆ? ಇಲ್ಲವೆ, ಜನಸಾಮಾನ್ಯರು ತಾವಾಗಿಯೇ ಸಾಹಿತಿಯ ಮಟ್ಟಕ್ಕೇರಿ ಅವನ ಕೃತಿಯನ್ನು ತಿಳಿಯಲು ಸಮರ್ಥರಾಗಬೇಕೆ? ಎರಡೂ ಅವಶ್ಯಕವೇ. ಸಾಹಿತಿಯು ಇಳಿದು ಬರಬೇಕು ಜನತೆಯನ್ನು ಎತ್ತುವದಕ್ಕಾಗಿ. ಜನತೆಯು ಏರಿ ಹೋಗಬೇಕು ಸಾಹಿತಿಯ ಇಂಗಿತವನ್ನರಿಯುವದಕ್ಕಾಗಿ. ಈ ಆರೋಹಣ–ಅವರೋಹಣ ಕ್ರಮಗಳು ಅನುಭಾವ ಮಾರ್ಗದಲ್ಲಿದ್ದಂತೆಯೇ ಸಾಹಿತ್ಯ ಸೃಷ್ಟಿಯಲ್ಲಿಯೂ ಕಂಡುಬರುತ್ತವೆ. ಈ ಕ್ರಮವರಿತು ಲಲಿತಸಾಹಿತ್ಯ ನಿರ್ಮಾಣ ಕಾರ್ಯವು ಸಾಗಬೇಕು. ಆಗ ಸಾಹಿತ್ಯವು ಸಫಲವಾಗುವದು.

ಸಾಹಿತಿಯು ಜನತೆಯ ಶಿಕ್ಷಕನು; ಆದುದರಿಂದ ಆ ಜನತೆಯ ಸತ್ಪ್ರವೃತ್ತಿಯನ್ನು ಲಲಿತ ಸಾಹಿತ್ಯದ ಮುಖಾಂತರವಾಗಿ ಸಾಧಿಸಬೇಕು. ನಿಜ-

ವಾಗಿಯೂ ಸಾಹಿತ್ಯದ ಹೊಣೆಯು ಈ ಅರ್ಥದಲ್ಲಿ ಅತ್ಯಂತ ಗುರುತರವಾದುದು. ಯೋಗಸಾಧನೆಯ ಗುರಿಯು ಚಿತ್ತವೃತ್ತಿ ನಿರೋಧವಾದರೆ, ಸಾಹಿತ್ಯ ಸೃಷ್ಟಿಯ ಉದ್ದೇಶವು ಚಿತ್ತವೃತ್ತಿಪವಿತ್ರೀಕರಣವಾಗಿದೆ. ಇಂಥ ಚಿತ್ತವೃತ್ತಿಪವಿತ್ರೀ-ಕರಣವು ಲಲಿತ ಸಾಹಿತ್ಯದಿಂದಾಗುವದು. ಏಕೆಂದರೆ ಅದರಲ್ಲಿ ಮಾನವನಿಗೆ ಮಿಗಿಲಾದ ಮೇಲಾದ ರಸಾನುಭವವು ದೊರೆಯುತ್ತದೆ. ಈ ರಸಾನುಭವ-ದಿಂದಲೇ ಸತ್ಪ್ರವೃತ್ತಿಯುಂಟಾಗುವದು, ಸಂಸ್ಕೃತಿಯು ಬೆಳೆದುಬರುವದು.

ಈ ಸಂದರ್ಭದಲ್ಲಿ ನಮಗೆ ಇನ್ನೊಂದು ಮಹತ್ವದ ಮಾತು ನಿದರ್ಶನಕ್ಕೆ ಬರುತ್ತದೆ. ಇಂದಿನ ಕಾಲವನ್ನು ವಿಜ್ಞಾನಯುಗವೆಂದು ಕರೆಯುತ್ತಾರಷ್ಟೇ! ಅಂದರೆ ವಿಜ್ಞಾನವು ಮಾನವನ ಇಂದಿನ ಜೀವನಕ್ರಮವನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ಆಡುತ್ತದೆ. ವಿಮಾನ ರೇಡಿಯೋ ಟೆಲಿವ್ಹಿಜನ ಸ್ಪೇನ ರಾಕೆಟ್ ಸ್ಪುಟ್ನಿಕ್ ಕೃತಕಗ್ರಹ— ಹೀಗೆ ಅತ್ಯದ್ಭುತ ಸಂಶೋಧನೆಗಳ ಮೂಲಕ ವಿಜ್ಞಾನವು ಮಾನವನಿಗೆ ಇಂದು ಅನೇಕ ಸೌಕರ್ಯ–ಸೌಲಭ್ಯಗಳನ್ನು ಒದಗಿಸಿಕೊಟ್ಟಿದೆ. ಆದರೆ ಇವೆಲ್ಲ ಸುಖ–ಸೌಲಭ್ಯಗಳೂ, ಸಾಧನ ಸೌಕರ್ಯ ಗಳೂ ಮಾನವನ ಬಾಹ್ಯ ಜೀವನವನ್ನು ಮಾರ್ಪಡಿಸಬಲ್ಲವು; ಭೌತಿಕ ಜೀವನ ದಲ್ಲಿ ಪ್ರಗತಿಯನ್ನೂ ಪರಿವರ್ತನೆಯನ್ನೂ ಉಂಟುಮಾಡಬಲ್ಲವು. ಅವು ಮಾನವನ ಅಂತರಂಗ ಜೀವನದ ಮೇಲೆ ಯಾವ ರೀತಿಯಿಂದಲೂ ಉತ್ತಮ ಪರಿಣಾಮವನ್ನುಂಟು ಮಾಡಲಾರವು; ಸತ್ಪ್ರವೃತ್ತಿಯಿಂದ ಅಭಿವ್ಯಕ್ತವಾಗುವ ಸಂಸ್ಕೃತಿಯನ್ನು ರೂಡಿಸಲಾರವು. ಅದೇಕೆ, ನಾವು ಇನ್ನಷ್ಟು ಹೆಚ್ಚು ಸೂಕ್ಷ್ಮವಾಗಿ ವಿಚಾರಿಸಿದರೆ, ವೈಜ್ಞಾನಿಕ ಸಾಧನ–ಸೌಕರ್ಯಗಳೂ, ಸುಖ–ಸೌಲಭ್ಯಗಳೂ ಮಾನವನಲ್ಲಿಯ ಮೂಲಪ್ರವೃತ್ತಿಗಳನ್ನು ( Basic instincts ), ಸಹಜ ಪ್ರವೃತ್ತಿಗಳನ್ನು ಮತ್ತಷ್ಟು ಜಾಗೃತಗೊಳಿಸಿ ಅವನ ಜೀವನವನ್ನು ಒಂದು ತರಹದ ವಿಕಾರನುಭವದ ಎಳೆದಾಟಕ್ಕೆ ಒಪ್ಪಿಸುತ್ತವೆ. ಆದರೆ ಆ ಸಾಹಿತ್ಯವು ಸಹಜ ಪ್ರವೃತ್ತಿಗಳನ್ನು ಸತ್ಪ್ರವೃತ್ತಿಗಳನ್ನಾಗಿ ಮಾರ್ಪಡಿ ಸುತ್ತದೆ. ಹುಟ್ಟುಗುಣಗಳ— ಮೂಲತಃ ಅಧೋಗಾಮಿಯಾದ ಈ ಹುಟ್ಟು ಗುಣಗಳ— ಉಚ್ಚನಾದ ಉದಾತ್ತೀಕರಣವನ್ನು ಸಾಹಿತ್ಯವು ಸಾಧಿಸಬಲ್ಲುದು. ಈ ಅರ್ಥದಲ್ಲಿ ವಿಜ್ಞಾನಕ್ಕಿಂತಲೂ ಸಾಹಿತ್ಯವು ಶ್ರೇಷ್ಠವಾದುದು.

ಇನ್ನೂ ಒಂದರ್ಥದಲ್ಲಿ ಸಾಹಿತ್ಯವು ವಿಜ್ಞಾನಕ್ಕಿಂತ ಶ್ರೇಷ್ಠವಾಗಿದೆ. ವಿಜ್ಞಾನವು ಕರ್ಮಭೂಮಿಯ ಶ್ರೇಷ್ಠತೆಯನ್ನೂ, ಸತತೋದ್ಯೋಗ ಸಂಶೋಧನೆ

ಗಳ ಹಿರಿಮೆಯನ್ನೂ ತಿಳಿಸಿಕೊಟ್ಟಿತು. ಆದರೆ ಸಹಜಪ್ರವೃತ್ತಿಗಳನ್ನು ಸತ್ಪ್ರವೃತ್ತಿ-ಗಳಲ್ಲಿ ಮಾರ್ಪಡಿಸುವ ಯೋಗ್ಯತೆ ಅದಕ್ಕೆ ಒದಗಿಲ್ಲ. ಆ ಕಾರ್ಯವನ್ನು ಸಾಹಿತ್ಯವು ಮಾಡಬಲ್ಲದು. ಸಹಜ ಪ್ರವೃತ್ತಿಗಳೆಂಬ ಪ್ರವಾಹದ ಸೆಳವು ಬಹಳ ಪ್ರಬಲವಾದುದು. ಇಂಥ ಸೆಳವುಳ್ಳ ಪ್ರವಾಹಕ್ಕೆ ಅಡ್ಡವಾಗಿಯೊಂದು ಭದ್ರವಾದ ಆಣೆಕಟ್ಟನ್ನು ಕಟ್ಟಲಿಕ್ಕೆ ಅನೇಕ ಯತ್ನ-ಪ್ರಯತ್ನಗಳು ಎಡೆಬಿಡದೆ ನಡೆಯುತ್ತಲೇ ಇವೆ. ಅನೇಕ ಕಾಯಿದೆ-ಕಾನೂನುಗಳು, ಕೋರ್ಟು-ಕಚೇರಿಗಳು ಇದೇ ಉದ್ದೇಶಕ್ಕಾಗಿ ಹುಟ್ಟಿದವು. ವಿಜ್ಞಾನದಿಂದಾಗುವ ಭೌತಿಕ ಜೀವನದ ಬಾಹ್ಯ ಪ್ರಗತಿಯು ಇಂಥ ಕಾಯಿದೆ-ಕಾನೂನುಗಳ, ಕೋರ್ಟು-ಕಚೇರಿಗಳ ಸಂಖ್ಯೆ-ಯನ್ನು ಇನ್ನೂ ಹೆಚ್ಚಿಸುತ್ತಿದೆಯೇ ವಿನಾ ಕಡಿಮೆಯೆಂದೂ ಮಾಡಲಾರದು. ಯಾಕೆಂದರೆ ಸ್ವಭಾವತಃ ಅಧೋಗಾಮಿಯಾದ ಸಹಜಪ್ರವೃತ್ತಿಗಳಿಗೆ ಅದು ಬೇರೊಂದು ಪ್ರಬಲವಾದ ರೀತಿಯ ಪ್ರೋತ್ಸಾಹನೆಯನ್ನು ಒದಗಿಸಿ ಕೊಡುತ್ತವೆ. ಆದರೆ ಸಾಹಿತ್ಯವು ರಸಾನುಭೂತಿಯಿಂದ ಜನರ ನಡೆ-ನುಡಿಗಳನ್ನು ತಿದ್ದ ಬಲ್ಲುದು; ಅವರ ಮನವನ್ನು ಮಡಿಗೊಳಿಸಬಲ್ಲದು. ಈ ರೀತಿಯಾಗಿ ಲಲಿತ ಸಾಹಿತ್ಯದಲ್ಲಿ ರಸಾನುಭವದ ಮುಖಾಂತರವಾಗಿ ಮಾಟಗಾರ್ತಿಯು ಕಾರ್ಯ-ಗೈಯುತ್ತಾಳೆ.

ಇಂದಿನ ವಿಜ್ಞಾನ ಯುಗದಲ್ಲಿ ಲಲಿತ ಸಾಹಿತ್ಯವು ಒಂದೇ ಸಾಲದು. ಜ್ಞಾನದಾಯಕ ಸಾಹಿತ್ಯವೂ ಸಮೃದ್ಧವಾಗಿ ಬೆಳೆದು ಬರಬೇಕು. ವಿಜ್ಞಾನದ ಶಾಖೆಗಳು, ನೀತಿ-ಧರ್ಮ-ತತ್ವ ವಿಚಾರಗಳು, ಅರ್ಥಶಾಸ್ತ್ರ ರಾಜನೀತಿ ಸಮಾಜ ಶಿಕ್ಷಣ ಶಾಸ್ತ್ರಗಳು, ಉದ್ಯೋಗ-ವ್ಯವಸಾಯಗಳು, ಭಾಷಾಶಾಸ್ತ್ರ-ಸಾಹಿತ್ಯ ಚರಿತ್ರೆಗಳು— ಇವೇ ಮೊದಲಾದ ವಿಷಯಗಳಿಗೆ ಸಂಬಂಧಪಟ್ಟ ವಿವರವಾದ ಸಮಗ್ರವಾದ ವಿಷಯ ಸಂಗ್ರಹವುಳ್ಳ ಪ್ರಮಾಣ ಗ್ರಂಥಗಳು ಇಡಿಯಾಗಿಯೂ ಬಿಡಿಯಾಗಿಯೂ ರಚಿತವಾಗಬೇಕು. ಆಯಾ ವಿಷಯದಲ್ಲಿ ತಜ್ಞರಾದವರೇ ಈ ಗ್ರಂಥಗಳನ್ನು ಅಭ್ಯಾಸ ಪೂರ್ಣವಾಗಿ ಬರೆದು ಪ್ರಕಟಿಸಿ ಅಣಿಗೊಳಿಸಬೇಕು. ಮಾಟಗಾರ್ತಿಯು ಇಲ್ಲವೆ ರೂಪಕ ಶಕ್ತಿಯು ಜ್ಞಾನ-ಸಾಹಿತ್ಯದಲ್ಲಿ ಬುದ್ಧಿಯ ಮುಖಾಂತರ ಕಾರ್ಯಗೈಯ್ಯುವದರಿಂದ ಬುದ್ಧಿ ಬಲ-ವುಳ್ಳವರು ಜ್ಞಾನಸಾಹಿತ್ಯದ ನಿರ್ಮಾಣ-ಪ್ರಕಟಣೆ-ಪ್ರಸಾರಣೆಗಳಿಗೆ ಕೈ ಹಾಕ ಬೇಕು. ಇದಕ್ಕೆ ಒಳ್ಳೆಯ ಹದವಾದ ಭೂಮಿಕೆಗಳು ವಿಶ್ವವಿದ್ಯಾಲಯ-ಗಳಾಗಿರುತ್ತವೆ.

ಜನತೆಯ ಸಂಸ್ಕೃತಿ ವಿಕಾಸವೇ ವಿಶ್ವವಿದ್ಯಾಲಯಗಳ ಆತ್ಯಂತಿಕ ಧ್ಯೇಯ ವಾಗಿರುವದು. ಆದ್ದರಿಂದ ಸಂಸ್ಕೃತಿ ವಿಕಾಸಕ್ಕೆ ಕಾರಣಗಳಾದ ಲಲಿತ ಸಾಹಿತ್ಯ ಜ್ಞಾನಸಾಹಿತ್ಯ ಹಾಗು ಅನುಭಾವ ಸಾಹಿತ್ಯಗಳನ್ನು ಪೋಷಿಸಿ ಅವುಗಳ ಅಭಿ ವೃದ್ಧಿಯಾಗುವಂತೆ ಮಾಡುವದು ಅವುಗಳ ಆದ್ಯ ಕರ್ತವ್ಯವಾಗಿದೆ, ಮಹತ್ವದ ಹೊಣೆಯಾಗಿದೆ. ಅನುಭಾವ ಸಾಹಿತ್ಯವನ್ನು ಪೋಷಿಸುವ ಹೊಣೆ ಇಂದು ಮಠ-ಮಾನ್ಯಗಳ ಮೇಲೂ ಸಾಧು-ಸಂತರ ಮೇಲೂ ಅಷ್ಟೇ ಗುರುತರವಾಗಿದೆ. ಇಂದು ವಿಶ್ವವಿದ್ಯಾಲಯಗಳ ಶಿಕ್ಷಣ ಕ್ರಮದಲ್ಲಿ ಸಂಶೋಧನ ಕಾರ್ಯವೂ ಬಹಳ ಮಹತ್ವದ ಸ್ಥಾನವನ್ನು ಪಡೆದಿದೆ. ನಮ್ಮ ನಾಡಿನ ಆರ್ಥಿಕ ಔದ್ಯೋಗಿಕ ವೈಜ್ಞಾನಿಕ ಶೈಕ್ಷಣಿಕ ಸಾಂಸ್ಕೃತಿಕ— ಇವೇ ಮೊದಲಾದ ವಿವಿಧ ವಿಷಯ ಗಳಲ್ಲಿ ಸ್ವತಂತ್ರವಾಗಿ ಸಾಗಬೇಕಾಗಿರುವ ಸಂಶೋಧನಾ ಕಾರ್ಯಕ್ಕೆ ಸಾಮಾನ್ಯ ವಾಗಿ ಭಾರತೀಯ ವಿಶ್ವವಿದ್ಯಾಲಯಗಳೂ, ಮುಖ್ಯವಾಗಿ ಕರ್ನಾಟಕ ವಿಶ್ವವಿದ್ಯಾಲಯವೂ ಆಸ್ಥೆಯಿಂದ ಗಮನವೀಯಬೇಕು ಹಾಗು ಪ್ರೋತ್ಸಾಹನೆ ಯನ್ನೂ ಕೊಡಬೇಕು. ಹೊಸ ಹೊಸ ಸಂಶೋಧನೆಗಳ ಫಲಪರಿಣಾಮವಾಗಿಯೇ ನಾಡಿನ ಜನಜೀವನದ ಮಟ್ಟವು ಎತ್ತರಕ್ಕೆ ಏರಲಾರಂಭಿಸುವದು. ಆದುದರಿಂದ ಪ್ರತಿಯೊಂದು ಆತ್ಮದಲ್ಲಿ ಬೆಳಕಿಗಾಗಿರುವ ಬಯಕೆಯನ್ನರಿತು ಅದು ಬೆಳಕಿನತ್ತ ತಿರುಗುವಂತೆ ಮಾಡುವದಿಷ್ಟೇ ಅಲ್ಲ, ಅದು ತನ್ನಷ್ಟಕ್ಕೆ ತಾನೇ ಸ್ವತಃ ಆ ಬೆಳ-ಕನ್ನು ಕಾಣುವಂತೆ ಮಾಡುವದೂ ಕೂಡ ವಿಶ್ವವಿದ್ಯಾಲಯಗಳ ಮಹತ್ವದ ಕರ್ತವ್ಯವಾಗಿದೆ. ಕೊನೆಯದಾಗಿ, ಇಂದು ಭಾರತವು ಆರ್ಥಿಕ ಹಾಗು ರಾಜ ಕೀಯ ನವಜೀವನದ ಮಹಾದ್ವಾರದಲ್ಲಿ ನಿಂತಿದೆ. ಇಂತಹ ಸಮಯದಲ್ಲಿ ವಿದ್ಯಾವಂತರ ಹಾಗೂ ತಜ್ಞರ ಅಗತ್ಯವು ಎಂದಿಗಿಂತಲೂ ಹೆಚ್ಚಾಗಿರುತ್ತದೆ. ನಾಡಿನ ಸಂಸ್ಕೃತಿಯ ಮತ್ತು ರಾಷ್ಟ್ರದ ಧ್ಯೇಯ-ಧೋರಣೆ, ಆಶೆ–ಆಕಾಂಕ್ಷೆ-ಗಳನುಗುಣವಾಗಿ ವಿಶ್ವವಿದ್ಯಾಲಯಗಳು ಕಾರ್ಯ ಪ್ರವೃತ್ತವಾಗಬೇಕು. ವಿದ್ಯಾರ್ಥಿಗಳೂ ಸಹ ತಮ್ಮ ನಾಡಿನ ಸಂಸ್ಕೃತಿಯನ್ನು ಅರಗಿಸಿಕೊಂಡು ಭಾರ ತದ ರಾಷ್ಟ್ರ ಜೀವನವನ್ನು ರೂಪಿಸುವ ರೂವಾರಿಗಳಾಗಿ ಉದಾತ್ತ ಮಾನವೀ-ಯತೆಯ ಆದರ್ಶದತ್ತ ಮುನ್ನಡೆಯುವ ಮನೀಷಿಗಳಾಗಬೇಕೆಂಬುದೇ ವಿಚಾರ ವಂತರಾದ ಅವರ ಹಿರಿಯರ ಮನದಿಷ್ಟವಾಗಿದೆ. ಇದುವೆ ವಿಶ್ವವಿದ್ಯಾಲಯಗಳ ವಿಶಿಷ್ಟವಾದ ಧ್ಯೇಯವಾಗಿರಲಿ, ಶ್ರೇಷ್ಠವಾದ ಧೋರಣೆಯಾಗಿರಲಿ.

ಲಲಿತ ಸಾಹಿತ್ಯಕ್ಕೂ ಅನುಭಾವ ಸಾಹಿತ್ಯಕ್ಕೂ ಇರುವ ಅಂತರವನ್ನು ನಾವು ಮರೆಯಲಾಗದು. ಲಲಿತ ಸಾಹಿತ್ಯದ ಜೀವಾಳ ರಸವಾದರೆ, ಅನುಭಾವ ಸಾಹಿತ್ಯದ ಜೀವಾಳ ಸಮರಸವಾಗಿದೆ. ಹಾಗಾದರೆ ರಸವೆಂದರೇನು ? ಇದನ್ನು ತುಸು ಶಾಸ್ತ್ರೀಯ ದೃಷ್ಟಿಯಿಂದ ವಿವೇಚನೆ ಮಾಡಬೇಕು. ನಮ್ಮನ್ನು ಬಳಸಿರುವ ಈ ಬಾಹ್ಯ ಜಗತ್ತಿನಲ್ಲಿ ಅನೇಕ ಘಟನೆಗಳು, ಸಂಗತಿಗಳು ಜರಗುತ್ತವೆ. ಪ್ರತಿದಿನ ಮುಂಜಾವಿನಲ್ಲಿ ಸೂರ್ಯೋದಯವೂ, ಸಂಜೆಗೆ ಸೂರ್ಯಾಸ್ತವೂ ಆಗುತ್ತವೆ. ವಸಂತಮಾಸದಲ್ಲಿ ಹೂ–ಗಿಡ–ಬಳ್ಳಿಗಳು ತಮ್ಮ ಚೆಲುವಿನ ಗೆಲುವಿನಲ್ಲಿ ಮೆರೆಯುತ್ತಿವೆ ಹಾಗು ಚೆಂದ ಮನದ ನೋವನಳಿಸಿ ನಲಿವು ತೋರುತ್ತಿವೆ. ಕೋಗಿಲೆಯು ಮಧುರವಾದ ಕೂಜನಗೈಯ್ಯುತ್ತದೆ. ತಾಯಿಯು ಮಗುವನ್ನು ವಾತ್ಸಲ್ಯದಿಂದ ಸಲುಹುತ್ತಾಳೆ. ಹೀಗೆಯೇ ಸೃಷ್ಟಿಯಲ್ಲಿ ಹಾಗು ಮಾನವ ಜಗತ್ತಿನಲ್ಲಿ ನಡೆದ ಅನೇಕ ವಿಧವಾದ ಈ ಘಟನೆಗಳೂ, ಸಂಗತಿಗಳೂ ವಿಭಾವಗಳೆಂದು ಕರೆಯಿಸಿಕೊಳ್ಳುತ್ತದೆ. ಇವುಗಳಿಂದ ಇಂದ್ರಿಯಗಳ ಮುಖಾಂತರ ಸುಖ-ದುಃಖ ರೂಪವಾದ ಸಂವೇದನೆಗಳನ್ನು ನಾವು ಅನುಭವಿಸುತ್ತೇವೆ. ಆಗ. ನಮ್ಮ ಚಿತ್ತವು ಉದ್ರೇಕಗೊಂಡು ಅಲೆಗಳೆದ್ದು ತಾಂಡವವಾಡುತ್ತಿರುವ ಸಮುದ್ರದಂತೆ ಆಗುತ್ತದೆ. ಸಮುದ್ರದಲ್ಲಿ ದೊಡ್ಡ ತೆರೆಗಳೂ ಅವುಗಳ ಜೊತೆಗೆ ಸಣ್ಣ ಅಲೆಗಳೂ ಇರುವಂತೆಯೇ ನಮ್ಮ ಚಿತ್ತಸಮುದ್ರದಲ್ಲಿ ಕೆಲವು ಸಣ್ಣ ಭಾವಗಳೂ, ಹಲವು ದೊಡ್ಡ ಭಾವಗಳೂ ಮೈದೋರುತ್ತವೆ. ಈ ಸಣ್ಣ ಭಾವಗಳು ಒಂದುಕಡೆ ನಿಯತವಾಗಿರದೆ ದೊಡ್ಡ ಭಾವಗಳ ಜೊತೆಗೆ ಬಂದು-ಹೋಗಿ ಮಾಡುವದರಿಂದ ಇವುಗಳಿಗೆ ಸಂಚಾರೀ ಭಾವಗಳೆಂದೂ, ಇವುಗಳಿಗೆ ಆಧಾರವಾಗಿ, ಇವುಗಳಿಗಿಂತಲೂ ಹೆಚ್ಚು ಸ್ಥಾಯೀಯಾಗಿ ಸ್ವತಂತ್ರವಾಗಿ ಇರುವ ಆ ದೊಡ್ಡ ಭಾವಗಳಿಗೆ ಸ್ಥಾಯೀಭಾವಗಳೆಂದೂ ಹೆಸರು ಕೊಡಲಾಗಿದೆ. ಹೀಗೆ ಬಾಹ್ಯ ಜಗತ್ತಿನಲ್ಲಿ ನಡೆಯುವ ಸಂಗತಿಗಳನ್ನು ಎಂದರೆ ವಿಭಾವಗಳನ್ನು ನಾವು ಅನುಭವಿಸುವಾಗ ನಮ್ಮ ಚಿತ್ತದಲ್ಲಿ ರತ್ಯಾದಿ ಸ್ಥಾಯೀಭಾವಗಳು ಹುಟ್ಟಿ ಉದ್ರೇಕಗೊಳ್ಳುತ್ತವೆ. ಅವುಗಳೊಡನೆ ನಾನಾ ವಿಧವಾದ ಇತರ ಸಂಚಾರೀ ಭಾವಗಳೂ ತಲೆದೋರುತ್ತವೆ. ಇವುಗಳಿಂದ ನಮ್ಮ ದೇಹದಲ್ಲಿ ನಡೆ–ನುಡಿಗಳಲ್ಲಿ ಬದಲಾವಣೆಗಳುಂಟಾಗುತ್ತವೆ.

ಲೋಕದಲ್ಲಿಯೂ ಕಾವ್ಯಾದಿಗಳಲ್ಲಿಯೂ ಈ ವಿಭಾವಾದಿಗಳು ಒಂದೇ ವಿಧವಾದವುಗಳಾಗಿರುತ್ತವೆ. ಆದರೆ ಸತ್ಯವಾದ ಲೌಕಿಕ ವಸ್ತುಗಳನ್ನು ಸಂಗತಿ

ಗಳನ್ನು ಅನುಭವಿಸಿ ಉಂಟಾಗತಕ್ಕದು ಸ್ಥಾಯೀಭಾವ. ಅಂತಹ ವಸ್ತು-ಗಳನ್ನೇ, ಸಂಗತಿಗಳನ್ನೇ ಕಾವ್ಯ ನಾಟಕ ಮುಂತಾದವುಗಳಲ್ಲಿ ಅನುಭವ ಮಾಡಿದಾಗ ಉಂಟಾಗತಕ್ಕದು ರಸ. ಅದು ಹೇಗೆ ಮತ್ತು ಏಕೆ ? ಮಾನವನನ್ನು ಬಿಟ್ಟು ಉಳಿದ ಪ್ರಾಣಿಗಳಲ್ಲಿಯೂ ಈ ವಿಭಾವಾದಿಗಳನ್ನು, ಈ ಸಂಗತಿಗಳನ್ನು ಅನುಭವಿಸಿದಾಗ ಸಂಸ್ಕಾರಗಳುಂಟಾಗುತ್ತವೆ. ಆದರೆ ಪ್ರಾಣಿಗಳಿಗೆ ಈ ಸಂಸ್ಕಾರಗಳು ಬಿಡಿ–ಬಿಡಿಯಾಗಿರುತ್ತವೆ; ತುಂಡು–ತುಂಡಾಗಿರುತ್ತವೆ. ಅದರಂತೆ ಮಾನವನೂ ಸಹ ಈ ವಿಭಾವಾದಿಗಳ ಅನುಭವವನ್ನು ಮಾಡುತ್ತಾನೆ; ಆಗ ಅವನಲ್ಲಿಯೂ ಸಂಸ್ಕಾರಗಳು ಆಗುತ್ತವೆ. ಆದರೆ ಅವನ ಸಂಸ್ಕಾರಗಳು ಮಾತ್ರ ಇಡಿಯಾಗಿವೆ; ಅಖಂಡವಾಗಿವೆ. ಅವುಗಳಲ್ಲಿ ಒಂದು ಸುಂದರವಾದ ಸಂಯೋಜನೆಯು ಇದ್ದುದು ಕಂಡುಬರುತ್ತದೆ. ಇದೇ ಬಗೆಯಾಗಿ ಕವಿ-ಯಲ್ಲಿಯೂ ಈ ಸಂಸ್ಕಾರಗಳು ಸುಂದರವಾದ ರೀತಿಯಲ್ಲಿ ಸಂಯೋಜಿತವಾಗಿರುತ್ತವೆ. ಆದರೆ ಕವಿಯು ಸಂಸ್ಕಾರಗಳ ಈ ಸಂಯೋಜನೆಗೆ ಒಂದು ಬಗೆಯ ವಿಶೇಷವಾದ ಮೆರುಗನ್ನು, ವಿಶಿಷ್ಟವಾದ ನೊಬಗನ್ನು, ಒಪ್ಪವನ್ನು ಕೊಟ್ಟು ಹೃದಯಂಗಮವಾಗಿ ಚಿತ್ರಿಸಿ ಅದನ್ನು ಒಂದು ಕಲೆಯ ಇಲ್ಲವೆ ಕುಶಲ ಕರ್ಮದ ರೂಪದಲ್ಲಿ ನಮ್ಮ ಮುಂದೆ ಮಂಡಿಸುತ್ತಾನೆ. ಅದುವೆ ಸಾಹಿತ್ಯಕೃತಿ. ಅದನ್ನು ಓದಿ ಅನುಭವಿಸಿದಾಗ ನಮ್ಮಲ್ಲಿ ಒಂದು ಬಗೆಯ ಭಾವೋದ್ರೇಕವು ಹುಟ್ಟುವದು; ಅದೇ ರಸ. ಅರ್ಥಾತ್ ವಾಸ್ತವ ಜಗತ್ತಿನಲ್ಲಿ ಸತ್ಯಾನುಭವಕ್ಕೆ ಕಾರಣವಾದ ಘಟನೆಯೇ ಕಲೆಯಲ್ಲಿ ನಟನೆಯಾಗುತ್ತದೆ. ಘಟಿಸಿದ ಘಟನೆಯು ನಟಿಸಿದ ನಟನೆಯಾದಾಗ ಅಸ್ವಾಭಾವಿಕತೆಯು ಇಲ್ಲದಿರಬೇಕು. ಹೀಗೆ ಘಟನೆಯ ನಟನೆಯಲ್ಲಿ ಅಸ್ವಾಭಾವಿಕತೆಯು ಅಡಗಿ, ವಾಸ್ತವತೆ ಒಡಮೂಡಿ-ದಾಗ ಒಂದು ಬಗೆಯ ಭಾವೋದ್ರೇಕವು ಉತ್ಪನ್ನವಾಗುವದು. ಅದೇ ರಸ. ಆಲಂಕಾರಿಕರೆಲ್ಲರು ಕಾವ್ಯಾನಂದವು ಅಲೌಕಿಕವೆಂದು ' ಒಪ್ಪಿಕೊಳ್ಳುತ್ತಾರೆ. ಕಾವ್ಯಾದಿ ಕುಶಲ ಕರ್ಮಗಳಿಂದುಂಟಾಗುವ ಅನುಭವಾನಂದವು ಪ್ರಪಂಚದಲ್ಲಿ ಮತ್ತಾವ ವಿಷಯದಿಂದಲೂ ಒದಗಲಾರದು. ಹಾಗಾದರೆ ರಸದ ಉಗಮವೆಲ್ಲಿ ? ಮಧುರ ರಸಾದಿಗಳು ವಸ್ತುನಿಷ್ಠವಾದವು. ಅವುಗಳ ಅನುಭವದಿಂದುಂಟಾಗುವ ಆನಂದಾದಿಗಳು ಭೋಕ್ತೃನಿಷ್ಠವಾದವು.

ಲಲಿತ ಸಾಹಿತ್ಯವನ್ನು ಓದಿ ಅನುಭವಿಸುವದರಿಂದ ಅಂತಃಕರಣಕ್ಕೆ ಸತ್‌ಪ್ರವೃತ್ತಿಯುಂಟಾಗುವದು. ಕಾವ್ಯಾರ್ಥವನ್ನು ಗ್ರಹಿಸುವದರಿಂದ ಆಗುವ

ಆನಂದವು ವಿಕಾಸ ವಿಸ್ತಾರ ಕ್ಷೋಭ ವಿಕ್ಷೇಪ ಎಂದು ನಾಲ್ಕು ವಿಧವಾಗಿದೆ. ಇವು ಶೃಂಗಾರ ವೀರ ಭೀಭತ್ಸ ರೌದ್ರ ಎಂಬ ರಸರೂಪಗಳಲ್ಲಿ ಅನುಕ್ರಮ-ವಾಗಿ ಚಿತ್ತಕ್ಕೆ ವೇದ್ಯವಾಗುವವು. ಹಾಸ್ಯ ಅದ್ಭುತ ಭಯ ಕರುಣ ಎಂಬ ರಸಗಳಲ್ಲಿಯೂ ಅವೇ ಚಿತ್ತವೇದ್ಯವಾಗುತ್ತದೆ. ಆದುದರಿಂದ ಹಾಸ್ಯಾದಿ ರಸಗಳು ಶೃಂಗಾರಾದಿ ರಸಗಳಿಂದಲೇ ಹುಟ್ಟಿದವುಗಳೆಂದೂ, ಸ್ಥಾಯೀ ಭಾವಗಳು ಎಂಟೇ ಎಂದೂ ನಿಶ್ಚಯಿಸಿ ಹೇಳಲಾಗಿದೆ. ಗುಲಾಬಿಯ ಮೊಗ್ಗು ಹಿಗ್ಗಿ ದುಂಡಗೆ ಹೂವಾಗುವಂತೆ ಚಿತ್ತ ಅರಳುವದು ವಿಕಾಸ. ಕಾದ ತುಪ್ಪದಲ್ಲಿ ಹಾಕುವ ಹಪ್ಪಳವು ಹಿಗ್ಗುವಂತೆ ಬುದ್ಧಿ ವಿಶಾಲಗೊಳ್ಳುವದು ವಿಸ್ತಾರ. ಸಾರನ್ನು ತೊಳಸಿದಂತೆ, ಇಲ್ಲವೆ ಮಜ್ಜಿಗೆಯನ್ನು ಕಡೆದಂತೆ ತಳಮಳಗೊಳ್ಳುವದು ಕ್ಷೋಭೆ. ಫಿರಂಗಿಯಿಂದ ಹೊಡೆದ ಗುಂಡು ನುಗ್ಗುವಂತೆ ಮನಂಬುಗುವದು ವಿಕ್ಷೇಪ. ಕಾವ್ಯ—ನಾಟಕಾದಿಗಳಲ್ಲಿ ಸ್ಥಾಯೀಭಾವವನ್ನುಂಟುಮಾಡುವ ವಸ್ತು ಗಳಿಗೆ ಆಲಂಬನ ವಿಭಾವಗಳೆಂದೂ, ಆ ಭಾವಗಳು ಹುಟ್ಟಿದ ಮೇಲೆ ಅವು-ಗಳನ್ನು ಉದ್ರೇಕಗೊಳಿಸುವ ವಸ್ತುಗಳಿಗೆ ಉದ್ದೀಪನ ವಿಭಾವಗಳೆಂದೂ ಸ್ಥಾಯಿಭಾವಗಳ ಜೊತೆಯಲ್ಲಿ ಬರುವ ಇತರ ಸಣ್ಣ ಭಾವಗಳಿಗೆ ಸಂಚಾರೀ ಭಾವಗಳೆಂದೂ, ಅವುಗಳ ಫಲರೂಪವಾಗಿ ಹೊರಗೆ ತೋರತಕ್ಕ ಚಿಹ್ನ ಮುಂತಾದವುಗಳಿಗೆ ಅನುಭಾವಗಳೆಂದೂ ಹೆಸರು. ಈ ಬೇರೆ ಬೇರೆ ಭಾವಗಳ ಸುಂದರವಾದ ಸಂಗಮವಾದಾಗ ರಸವು ಉದ್ಭವಿಸುವದು. 'ವಿಭಾವಾನುಭಾವ ವ್ಯಭಿಚಾರಿಭಾವಸಂಯೋಗಾದ್ರಸನಿಷ್ಪತ್ತಿಃ' ಎಂದು ಹೇಳುವ ಮಾತಿನ ಆಶಯವೂ ರಸೋತ್ಪತ್ತಿಯ ಮೂಲವನ್ನೇ ಶೋಧಿಸುತ್ತದೆ. ಆದರೆ ಇಲ್ಲಿ ಒಂದು ನೆನಪಿಡತಕ್ಕ ಸಂಗತಿಯೆಂದರೆ, ಸ್ಥಾಯೀಭಾವಗಳು ಭಾವಾಂತರ-ಗಳೊಡನೆ ಸೇರಿ ಪುಷ್ಟಿಗೊಂಡಾಗ ಮಾತ್ರ ರಸವುಂಟಾಗುವದು. ಅನೌಚಿತ್ಯ-ದಿಂದ ರಸವು ರಸಾಭಾಸವಾಗಿಯೂ, ಭಾವವು ಭಾವಾಭಾಸವಾಗಿಯೂ ಪರಿಣಮಿಸಬಹುದು.

ರಸವು ವಸ್ತುನಿಷ್ಠವೂ ಅಹುದು, ಭೋಕ್ತೃನಿಷ್ಠವೂ ಅಹುದು ಎಂಬ ಮಾತನ್ನು ಮೇಲೆ ಹೇಳಿದೆಯಷ್ಟೇ. ಒಂದು ನಾಣ್ಯಕ್ಕೆ ಎರಡು ಮಗ್ಗಲುಗಳಿರು ವಂತೆ ರಸಕ್ಕೂ ಈ ಎರಡು ಬದಿಗಳಿವೆ. ಕಲ್ಲುಸಕ್ಕರೆಯ ಹರಳನ್ನು ನಾಲಿಗೆಯ ಮೇಲಿಟ್ಟಾಗ ನಾಲಿಗೆಯು ನೀರು ಕಡೆದು ಆನಂದವಾಗುತ್ತದೆ. ಅದೇ ಬೊಂಚುಗಲ್ಲಿನ ಒಂದು ಹರಳನ್ನು ನಾಲಿಗೆಯ ಮೇಲಿಟ್ಟಾಗ ನಾಲಿಗೆಯು

ನೀರು ಕಡೆಯಲಾರದು ಹಾಗು ರಸಾನಂದವು ಹುಟ್ಟಲಾರದು. ಹಾಗೆಯೆ ಒಂದೇ ಕಲ್ಲುಸಕ್ಕರೆಯ ಹರಳು, ಒಬ್ಬ ರೋಗಿಯ ನಾಲಿಗೆಯ ಮೇಲಿಟ್ಟಾಗ ಅದು ನಿರೋಗಿಯಾದವನ ನಾಲಿಗೆಯ ಮೇಲಿಟ್ಟಾಗಿನಂತೆ, ನೀರು ಬಿಟ್ಟು ನಾಲಿಗೆಗೆ ರುಚಿ ಕೊಡಲಾರದು. ಆದುದರಿಂದ ರಸವು ಕೇವಲ ವಸ್ತುನಿಷ್ಠವಷ್ಟೇ ಅಲ್ಲ, ಅಥವಾ ವ್ಯಕ್ತಿನಿಷ್ಠವಷ್ಟೇ ಅಲ್ಲ; ಅದರ ಪರಿಣಾಮವು ತೋರಬೇಕಾದರೆ ಅದು ವಸ್ತುನಿಷ್ಠವೂ ವ್ಯಕ್ತಿನಿಷ್ಠವೂ ಆಗಿರಬೇಕು ಮತ್ತು ಅದು ಹಾಗೆ ಆಗಿಯೇ ಇರುತ್ತದೆ. ಆದರೆ ವಸ್ತುನಿಷ್ಠವಾದಾಗ ರಸವಾಗಿಯೂ, ಭೋಕ್ತೃನಿಷ್ಠ-ವಾದಾಗ ಆನಂದವಾಗಿಯೂ ತೋರುವದು ಅಷ್ಟೆ. ರಸವೇ ಆನಂದ, ಆನಂದವೇ ರಸವಾದ ಮೇಲೆ ಕಾವ್ಯಾರ್ಥವನ್ನು ಗ್ರಹಿಸುವದರಿಂದ ಆಗುವ ಆನಂದವು ವಿಕಾಸ ವಿಸ್ತಾರ ಕ್ಷೋಭೆ ಹಾಗು ವಿಕ್ಷೇಪ ಎಂದು ನಾಲ್ಕು ವಿಧವಾಗಿದ್ದು, ಇವು ಕ್ರಮವಾಗಿ ಚಿತ್ತ ಬುದ್ಧಿ ಅಹಂಕಾರ ಮತ್ತು ಮನವೆಂಬ ಅಂತಃಕರಣ-ಚತುಷ್ಟಯಕ್ಕೆ ಅನುಭವವನ್ನು ಒದಗಿಸಿಕೊಡುವವು.

ಸಾಹಿತ್ಯದಿಂದ ಲಭಿಸುವ ಆನಂದ ವಿಷಯಾನಂದವಲ್ಲ, ಅದು ಅಲೌಕಿ-ಕಾನಂದ. ವಿಷಯಗಳನ್ನು ಕಂಡು ಅವುಗಳಲ್ಲಿ ಮನವು ಆನಂದವನ್ನು ಪಡೆಯಲು ಅನವರತವೂ ತವಕಿಸುತ್ತದೆ. ಇದು ಪ್ರವೃತ್ತಿ ಮಾರ್ಗದ ಲಕ್ಷಣ ವಾಗಿದೆ. ಆದರೆ ವಿಷಯಗಳಲ್ಲಿ ಮಗ್ನವಾದ ಮನವನ್ನು ತನ್ನತ್ತ ಸೆಳೆದು ಅದನ್ನು ನಿವೃತ್ತಿಮಾರ್ಗದಲ್ಲಿ ತೊಡಗಿಸುವವನು ಸಾಹಿತಿ. ತನಗಾದ ಅನುಭವ ವನ್ನು ರಸಾನುಭವದಲ್ಲಿ ರಸದ ಘಟ್ಟಿಯನ್ನಾಗಿ ಮಾಡುವವನು ಸಾಹಿತಿ. ಸಾಹಿತಿಯಲ್ಲಿ ಕೇಂದ್ರೀಕೃತವಾದ ರಸದ ಘಟ್ಟಿಯು ಕರಗಿ ಓದುಗರ ಹೃದಯ-ವನ್ನು ಪ್ರವೇಶಿಸಿ ಹೃದಯದಲ್ಲಿ ಆ ರಸವೂ ಒಂದಾಗುವವರೆಗೆ ಪ್ರವಹಿಸಿ ಅಲ್ಲಿ ವಿಶ್ರಾಂತಿಯನ್ನು ಪಡೆಯುತ್ತದೆ. ಹೀಗೆ ವಸ್ತುನಿಷ್ಠವಾದ ರಸವು ಭೋಕ್ತೃನಿಷ್ಠ-ವಾದಾಗ ಆನಂದವುಂಟಾಗಿ, ರಸವೇ ಆನಂದ ಆನಂದವೇ ರಸವಾಗಿ, ಜೀವನದ ರಂಗದಲ್ಲಿ ಒಂದು ವಿಶಿಷ್ಟ ತರಹದ ಕಾರ್ಯವನ್ನೇನೋ ಮಾಡುವದು. ಇದರಿಂದ ಲಲಿತ ಸಾಹಿತ್ಯದ ಗುರಿಯು ಆಲ್ಹಾದವೆಂಬ ಮಾತು ಸಿದ್ಧವಾಗುವದು. ಆದರೆ ಅನುಭವ ಸಾಹಿತ್ಯದ ಗುರಿಯು ಆತ್ಮೋದ್ಧಾರಕವಾಗಿ ಇರುತ್ತದೆ. ಈ ಅನುಭವ ಸಾಹಿತ್ಯಕ್ಕೆ ರಸವು ಜೀವಾಳವಲ್ಲ, ಸಮರಸವು ಜೀವಾಳವಾಗಿದೆ. ವ್ಯಕ್ತಿಯ ಅಂತರಂಗದಲ್ಲಿಯೂ ಸೃಷ್ಟಿಯ ಅಂತರಾಳದಲ್ಲಿಯೂ ಒಂದೇ ಆತ್ಮವಿರುವದು. ಈ ಆತ್ಮಾನುಭವವನ್ನು ಪಡೆದಾಗ ಸಾಮರಸ್ಯವು ಉಂಟಾಗುವದು. ಆಗ ಚಿತ್

ಶಕ್ತಿಯ ಛಂದೋಗತಿಯು ಚೆಲ್ಲವರಿಯುವದು. ಅನುಭಾವವೆಂದರೆ ಅನುರೂಪ ವಾದ ಭಾವವನ್ನು ತಳೆಯುವದು; ಒಂದು ಇನ್ನೊಂದರಂತೆ ಆಗುವದು. ತಾದಾತ್ಮ್ಯಭಾವವನ್ನು ಪಡೆಯುವದು. ಸ್ವತಂತ್ರ ಸಿದ್ಧಲಿಂಗೇಶ್ವರನು ತನ್ನ ಒಂದು ವಚನದಲ್ಲಿ ಹೇಳುವಂತೆ ಇಂಥ ಅನುಭಾವವೆಂಬುದು ಆತ್ಮವಿದ್ಯೆ.

ಅನುಭಾವವೆಂಬುದು ಆತ್ಮವಿದ್ಯೆ.
ಅನುಭಾವವೆಂಬುದು ತಾನಾರೆಂಬುದ ತೋರುವದು.
ಅನುಭಾವವೆಂಬುದು ನಿಜನಿವಾಸದಲ್ಲಿರುವದು.

ಇಡಿಯಾಗಿ ಆಗಲಿ ಬಿಡಿಯಾಗಿ ಆಗಲಿ ಪ್ರತಿಯೊಂದು ವಸ್ತುವಿನ ನಿಲವನ್ನು ಅಖಂಡವಾದ ಆತ್ಮದಿಂದ ಕಾಣುವದರಿಂದಲೇ ಸಮರಸಹೊಂದಲು ಅನುವಾಗು ವದು. ಅದರಿಂದಾಗಿ ಜ್ಞಾನ ಭಕ್ತಿ ಆನಂದಗಳು ಹೊರಸೂಸಿ ಅಲೌಕಿಕವಾದ ಸ್ಥಿತಿಯು ಪ್ರಾಪ್ತವಾಗುವದು. ಆತ್ಮದೊಡನೆ ತಾದಾತ್ಮ್ಯ ಹೊಂದುವದ-ರಿಂದಲೇ ಜ್ಞಾನಸ್ವರೂಪವನ್ನು ಭಕ್ತಿಸ್ವರೂಪವನ್ನು ಆನಂದಸ್ವರೂಪವನ್ನು ಪಡೆಯಲು ಶಕ್ತಿಯು ಉಂಟಾಗುವದು. ಅನುಭವ ಸಾಹಿತ್ಯವು ಈ ಕಾರ್ಯ-ವನ್ನು ನೆರವೇರಿಸಿ ಕೊಡುವದು.

ಲಲಿತ ಸಾಹಿತ್ಯದಲ್ಲಿ ಜೀವಾಳ ರಸ; ಅದು ರತಿಭಾವದಲ್ಲಿ ಸ್ಥಾಯಿಯಾಗಿದೆ. ಆದರೆ ಅನುಭವ ಸಾಹಿತ್ಯದಲ್ಲಿ ಜೀವಾಳವಾದುದು ಸಮರಸ; ಅದು ಸತಿಭಾವ ದಲ್ಲಿ ನಿಲುಕಡೆಯನ್ನು ಪಡೆಯುವದು. ರತಿಭಾವದಲ್ಲಿ ಕಾಮವು ಕಂಗೊಳಿಸಿದರೆ ಸತಿಭಾವದಲ್ಲಿ ಪ್ರೇಮವು ರೂಪುಗೊಂಡು ನಿಲುವುದು. ಹೇತುರಹಿತವಾದ ನಿರ್ಮಲವಾದ ನಿರತಿಶಯವಾದ ಪ್ರೇಮದಲ್ಲಿ ಕಾಮವಾಸನೆಯಿಲ್ಲ. ಇಂಥ ನಿರರ್ಗಳವಾದ ಪ್ರೇಮವೇ ಭಕ್ತಿ. ಅನುಭವ ಸಾಹಿತ್ಯದಲ್ಲಿ ಈ ಪ್ರೇಮ ಈ ಭಕ್ತಿ ಹಾಸುಹೊಕ್ಕಾಗಿ ಬೆರೆತು ಆತ್ಮೋದ್ಧಾರವನ್ನು ನೆರವೇರಿಸಿಕೊಡುವದು. 'ಸಲೆ ನೆಚ್ಚಿದೆನೆಂದರೆ ಮಚ್ಚಿದೆನೆಂದರೆ ತನುವನಲ್ಲಾಡಿಸಿ ನೋಡುವನವನು, ಮನವನಲ್ಲಾಡಿಸಿ ನೋಡುವನವನು, ಧನವನಲ್ಲಾಡಿಸಿ ನೋಡುವನವನು.' ಇವೆಲ್ಲಕ್ಕೆ ಅಂಜದಿದ್ದರೆ ಭಕ್ತಿಕಂಪಿತನಾಗಿ ನಿಲ್ಲುವವು. ಇಂಥ ಭಕ್ತಿಕಂಪಿತನಾದ ಪರಮಾತ್ಮ, ನಿರ್ಮಲವಾದ ಪ್ರೇಮ, ಭಕ್ತಿಪಾಶದಿಂದ ಬದ್ಧವಾದ ಜೀವಾತ್ಮ ಇವರು ಅನ್ಯೋನ್ಯವಾಗಿ ಪರಿಣಮಿಸುವರು. ಕರುಳು ಭಕ್ತನದು, ಕರುಣೆ ಪರಮಾತ್ಮನದು. ಭಕ್ತನ ಆರ್ತವೃತ್ತಿ ಪರಮಾತ್ಮನ ಕಾರುಣ್ಯಪ್ರವೃತ್ತಿ

ಎಲ್ಲವೂ ಶಾಂತಿಯಲ್ಲಿ ಪರ್ಯವಸಾನ ಹೊಂದುವದು. ಅಲ್ಲಿ ಕೂಡಿ ಅಗಲುವ, ಅಗಲಿ ಕೂಡುವ ಭಾವತಿಯಿಲ್ಲ; ತಾದಾತ್ಮ್ಯ ಭಾವವು ಅಲ್ಲಿ ಅವಿರತ ಭಾವನೆಯಾಗುವದು; ಶಬ್ದಮುಗ್ಧ ಸ್ಥಿತಿಯು ನೆಲೆಗೊಳ್ಳುವದು. ಹೀಗೆ ಅವಿರಳವಾಗಿದ್ದ ಅನುಭಾವವು ವೈಖರೀ ವಾಣಿಯಲ್ಲಿ ಬಂದಾಗ ಅನುಭವ ಸಾಹಿತ್ಯವು ಉಗಮಗೊಳ್ಳುವದು, ಸ್ವರಸಮ್ಮೇಳಯುತವಾದ ಮಧುರ ಸಂಗೀತವು ಹೊರಹೊಮ್ಮುವದು. ಸತೀಭಾವದ ಪರಾಕಾಷ್ಠೆಯಿಂದ ಅಹಿಂಸೆಯು ಅನುಭಾವಿಯ ಜೀವನದ ಸೂತ್ರವಾಗುವದು; ಪ್ರಾತಿಭಚಕ್ಷುವು ಉನ್ಮೀಲನವಾಗುವದು; ಅದು ಕಲ್ಪಕವೃತ್ತಿ–ಕರ್ತೃತ್ವಶಕ್ತಿಗಳೆಂಬ ಎರಡು ಮುಖವಾಗಿ ಮಾಟಗಾರ್ತಿಯಲ್ಲಿ ಒಡಮೂಡುವದು.



# ಪ್ರಾರ್ಥನಾಯೋಗ

## ಸಾಮೂಹಿಕ ಪ್ರಾರ್ಥನೆ

ಪ್ರಪಂಚವು ಯಂತ್ರವತ್ ನಡೆದಿದೆ; ಇದರಲ್ಲಿ ಜರಗುವ ಘಟನೆಗಳು ಕೇವಲ ಯಾಂತ್ರಿಕವಾಗಿ ನಡೆದಿವೆಯೆಂದು ಪಾಶ್ಚಿಮಾತ್ಯರ ತಿಳಿವಳಿಕೆ. ಇದನ್ನು ಯಾಂತ್ರಿಕವಾದ ಇಲ್ಲವೆ ಭೌತಿಕವಾದ ಎಂದು ಕರೆಯಬಹುದು. ಈ ಸೃಷ್ಟಿಗೆ ಕರ್ತನೊಬ್ಬನಿದ್ದಾನೆ; ಆತನ ನಿಯಂತ್ರಣದಲ್ಲಿ ಇದರ ಕಾರ್ಯಗಳೆಲ್ಲ ನಡೆದಿರುತ್ತವೆ ಎಂಬ ನಂಬಿಗೆ ಪಾಶ್ಚಿಮಾತ್ಯರಿಗಿಲ್ಲ. ಜಗತ್ತಿನ ಬಾಹ್ಯಸ್ವರೂಪವು ಯಾಂತ್ರಿಕವಾಗಿದ್ದರೂ ಅದರ ಆಂತರಿಕ ಸ್ವರೂಪವು ಮಾತ್ರ ತುಂಬಾ ಅರುಹಿನಿಂದ ಕೂಡಿಕೊಂಡಿದ್ದಾಗಿದೆ. ಇದು ಬಹಿರಂಗದಲ್ಲಿ ಗತ್ಯಾತ್ಮಕವಾಗಿ ಏನೋ ಕಾಣುವದು, ಆದರೆ ಅಂತರಂಗದಲ್ಲಿ ಇದು ಮತ್ಯಾತ್ಮಕವಾಗಿರುತ್ತದೆ. ಮತ್ತು ಈ ಗತಿಗೆ ಮತಿಯೇ ಆಧಾರವಾಗಿರುತ್ತದೆ. ಇಲ್ಲಿ ವ್ಯಕ್ತವಾಗಿರುವ ಗತಿಗೆ ಮತಿಯನ್ನು ನೀಡುವ ಪುರುಷನೊಬ್ಬನಿಲ್ಲದಿದ್ದರೆ ಈ ಗತಿಯು ಕೇವಲ ಜಡವಾಗುತ್ತಿತ್ತು. ಕಳೆದ ೩-೪ ಸಾವಿರ ವರುಷಗಳಿಂದಲೂ ಈ ಮತಿಯನ್ನು ಅಂಗಕ್ಕೆ ಅಳವಡಿಸಿಕೊಂಡು ಭಾರತೀಯರು ಸಾಗುತ್ತ ಬಂದಿದ್ದಾರೆ. ಆದರೆ ಈ ಅವರ ಪ್ರಯತ್ನದಲ್ಲಿ ಅವರು ಜನಸಾಮಾನ್ಯರನ್ನು ಕಡೆಗಣಿಸದೆ ಅವರನ್ನು ತಮ್ಮೊಡನೆ ಕರೆದುಕೊಂಡು ಒಯ್ಯಲೆಳಸಿದ ಉದಾಹರಣೆಗಳು ಬಹಳ ವಿರಳವಾಗಿ ಸಿಗುತ್ತವೆ. ಈಚೆಗಿನ ಜನಜೀವನದಿಂದ ಮಾನವರು ಮಾನವರೆಂದು ಕರೆಯಿಸಿಕೊಳ್ಳಲು ತಕ್ಕವರಾಗಿದ್ದಾರೆಯೇ– ಎಂಬ ಸಮಸ್ಯೆಯುಂಟಾಗುತ್ತಿದೆ. ಮೇಲು ತರಗತಿಯಲ್ಲಿರುವವರಿಗೂ ಕೆಳ ತರಗತಿಯಲ್ಲಿರುವವರಿಗೂ ಈ ಜೀವನದ ಸಂಬಂಧ ತಪ್ಪಿ ಹೋಗುವದರಿಂದ ರಾಷ್ಟ್ರದ ಸಮೃದ್ಧಿಯನ್ನು ಬಯಸುವದೆಂತು? ಇಂಥ ಪರಿಸ್ಥಿತಿಯ ಪರಿಹಾರಕ್ಕೆ ಪ್ರಾರ್ಥನಾಯೋಗವು ಒಂದು ಅಪೂರ್ವವಾದ ಸಾಧನವಾಗುತ್ತದೆ. ಮಾನವಲ್ಲಿ ತಿಳಿವಳಿಕೆಯು ಮೂಡಿದಂದಿನಿಂದ ಅವನು ನಿಸರ್ಗದ ಶಕ್ತಿಗಳನ್ನು ಗುರುತಿಸಿ ಒಂದಿಲ್ಲ ಒಂದು ರೀತಿಯಿಂದ ಅವನ್ನು ಪೂಜಿಸುತ್ತ ಪ್ರಾರ್ಥಿಸುತ್ತ ಬಂದಿದ್ದಾನೆ. ಹಿಂದಿನ ಕಾಲದಿಂದ ಇಂದಿನ ವರೆಗೂ ಅಸ್ತಿತ್ವದಲ್ಲಿದ್ದ ಪ್ರಾರ್ಥನೆಯ ಸ್ವರೂಪಗಳನ್ನು ಕುರಿತು ಆಲೋಚಿಸುವದಾದರೆ, ಅವು

ಮುಖ್ಯವಾಗಿ ಮೂರು ಪ್ರಕಾರಗಳಲ್ಲಿ ಪ್ರಚಾರವಲ್ಲಿದ್ದುದು ಕಂಡುಬರುತ್ತದೆ: ವೈಯಕ್ತಿಕ (Individual), ಸಾಮೂಹಿಕ (Social) ಹಾಗು ಸಾರ್ವತ್ರಿಕ (Universal) ಎಂದು. ಪ್ರಾರ್ಥನೆಯ ಈ ತ್ರಿವಿಧ ಸ್ವರೂಪವು ಉದ್ದೇಶ-ಕಥನ–ವಿಧಿವಿಧಾನಗಳಲ್ಲಿರುವ ಸೂಕ್ಷ್ಮವಾದ ಮತ್ತು ತಾರತಮ್ಯಪೂರ್ಣವಾದ ಅರ್ಥಭೇದ ಹಾಗೂ ರೀತಿಭೇದಗಳನ್ನು ಅವಲಂಬಿಸಿದೆ. ಈಗ ಹೆಚ್ಚಾಗಿ ವೈಯಕ್ತಿಕ ಹಾಗು ಸಾಮೂಹಿಕ ಪ್ರಾರ್ಥನೆಯ ಪ್ರಕಾರಗಳು ರೂಢಿಯಲ್ಲಿವೆ. ಇವೆರಡರಲ್ಲಿ ಸಾಮೂಹಿಕ ಪ್ರಾರ್ಥನೆಯು ಶ್ರೇಷ್ಠತರವಾದುದು.

ಸಾಮೂಹಿಕ ಪ್ರಾರ್ಥನೆಯು ಜಗತ್ತಿನಲ್ಲಿ ಹೊಸದೇನೂ ಅಲ್ಲ. ಕ್ರಿಶ್ಚಿಯನ್ನರಲ್ಲಿ ಸಾಮೂಹಿಕ ಪ್ರಾರ್ಥನೆಯಿದೆ; ಮುಸಲ್ಮಾನರಲ್ಲಿ ಸಾಮೂಹಿಕ ಪ್ರಾರ್ಥನೆಯಿದೆ. ಇನ್ನು ಬೇರೆ ಮತಧರ್ಮಗಳಲ್ಲಿಯೂ ಆ ಪ್ರಾರ್ಥನೆಯಿದೆ. ನಿಜವಾಗಿಯೂ ಆಧ್ಯಾತ್ಮಿಕತೆಯ ಅತ್ಯುನ್ನತ ಶಿಖರದಲ್ಲಿ ಅತಿ ಪ್ರಾಚೀನ ಕಾಲದಿಂದ ಅತ್ಯಂತ ಅರ್ವಾಚೀನ ಕಾಲದವರೆಗೂ ತಾನೇ ತಾನಾಗಿ ಮೆರೆಯುತ್ತಿರುವ ಭಾರತಾಂಬೆಯ ಸತ್ಪುತ್ರರಿಗೆ ಪ್ರಾರ್ಥನೆಯು ಹೊಸದೇನೂ ಅಲ್ಲ. ವೇದಕಾಲದಿಂದ ಅದು ರೂಢವಾಗಿತ್ತೆಂಬುದನ್ನು ತೋರಿಸಲು ನಾಕಷ್ಟು ಉದಾಹರಣೆಗಳು ಸಿಗುತ್ತವೆ. ಬಹುತರ ಪೌರಾಣಿಕ ಕಾಲದಿಂದ ಈ ಸಾಮೂಹಿಕ ಪ್ರಾರ್ಥನೆಯು ಕಾಣದಾದಂತಿದೆ. ಈ ಅಭಾವದಿಂದೊದಗಿದ ದುಷ್ಪರಿಣಾಮದ ಕಟು ಅನುಭವವನ್ನು ಕಂಡು ಮಹಾತ್ಮಾ ಗಾಂಧೀಜಿ ಮೊದಲಾದವರು ಈ ಸಾಮೂಹಿಕ ಪ್ರಾರ್ಥನೆಯನ್ನು ಸಾಗಿಸುತ್ತ ಬಂದಿದ್ದಾರೆ. ಆದರೆ ಪ್ರಾರ್ಥನೆಯೂ ಒಂದು ಯೋಗವಾಗಬಲ್ಲದು ಎಂದು ಯೋಗದ ನಾನಾಪ್ರಕಾರದ ಪ್ರಯೋಗಗಳನ್ನು ವ್ಯಕ್ತಿಗತವಾಗಿ ಮಾಡಿದವರಿಗೆ ತಿಳಿದು ಬರುತ್ತದೆ. ಯೋಗದ ಯಾವ ಪ್ರಕಾರವನ್ನು ಆಚರಿಸಿದರೂ ಅದು ವೈಯಕ್ತಿಕ ಪ್ರಗತಿಗೆ ಮಾತ್ರ ಅನುಕೂಲಿಸುವುದು. ಇದನ್ನು ಮನಗಂಡ ತರುವಾಯ ಕಡೆಗಣಿಸಲ್ಪಟ್ಟ ಸಾಮಾನ್ಯ ಜನತೆಗಾಗಿ ಸಾಮೂಹಿಕ ಪ್ರಾರ್ಥನೆಯಲ್ಲಿ ಯೋಗವನ್ನು ಬೆರೆಸಿದರೆ ಆಗದೇ ಎಂದೆನಿಸುವದು. ಇದರಿಂದ ವೈಯಕ್ತಿಕ ಪ್ರಗತಿಯ ಜೊತೆಗೆ ರಾಷ್ಟ್ರೀಯ ಐಕ್ಯತೆ, ಗಳಿಸಿದ ಸ್ವಾತಂತ್ರ್ಯವನ್ನು ಉಳಿಸಿ-ಕೊಳ್ಳುವುದಕ್ಕೆ ಅವಶ್ಯವಾದ ಸಂಘಟನೆಗಳು ಬೆಳೆದು ಬರುವವೆಂಬ ನಿದರ್ಶನದೊಂದಿಗೆ ಈ ಪ್ರಾರ್ಥನಾಯೋಗವನ್ನು ಪ್ರಯೋಗಿಸಬಹುದಾಗಿದೆ.

ಮಾನವನ ವ್ಯಾಖ್ಯೆಯನ್ನು ಬೇರೆ ಬೇರೆ ಜನರು ಬಗೆಬಗೆಯಾಗಿ ಮಾಡುತ್ತಾರೆ. ಅವನು ತನ್ನ ದೈನಂದಿನ ಜೀವನವನ್ನು ನಡೆಸುವ ಕಾಲಕ್ಕೆ ಅನೇಕ ಸಿಹಿ–ಕಹಿಗಳ ಅನುಭವವನ್ನು ಪಡೆಯುತ್ತಾನೆ. ತನ್ನ ಹಿಂದಿನ ಅನುಭವ-ಗಳಿಂದ ತಾನು ಮುಂದೆ ನಡೆಯಬೇಕಾಗಿದ್ದ ದಾರಿಯನ್ನು ಕಂಡು ಅದನ್ನು ರೂಪಿಸಿಕೊಳ್ಳುತ್ತಾನೆ. ಅದಕ್ಕಾಗಿ ಮಾನವನು ಹಿಂದು ಮುಂದು ನೋಡಿ ನಡೆಯುವ ಪ್ರಾಣಿಯೆಂದು ಹೇಳಲಾಗುತ್ತದೆ. ಆಂಗ್ಲ ಮಹಾ ಕವಿಯಾದ ಶೆಲ್ಲಿಯೂ Ode to the Skylark ಎಂಬ ತನ್ನ ಒಂದು ಭಾವಗೀತೆಯಲ್ಲಿ ಇದೇ ಮಾತನ್ನು ತಿಳಿಸುತ್ತಾನೆ. "Man looks before and after and pines for what is not." ವ್ಯಕ್ತಿಯಂತೆ ಒಂದು ರಾಷ್ಟ್ರವೂ ಕೂಡ ತನ್ನ ಗತವೈಭವವನ್ನು ನೆನಿಸಿಕೊಂಡು ತನ್ನ ಭವಿಷ್ಯವನ್ನು ರೂಪಿಸಿಕೊಳ್ಳುತ್ತಿದೆ. ನಮ್ಮ ನಾಡಿಗೆ ಹಿಂದಿನ ಭವ್ಯವಾದ ಉಜ್ವಲವಾದ ಐತಿಹ್ಯವಿದೆ; ಅದಕ್ಕೊಂದು ಅನುಪಮವಾದ ಅನುಕರಣೀಯವಾದ ಸಂಸ್ಕೃತಿ-ಯಿದೆ. ಈ ಐತಿಹ್ಯವನ್ನು ಈ ಸಂಸ್ಕೃತಿಯನ್ನು ನೆನಿಸಿ ಇನ್ನು ಮುಂದಿನ ನಮ್ಮ ವೈಭವವನ್ನು ಕಾಣಬೇಕಾಗಿದೆ. ಕಳೆದ ೩–೪ ಸಾವಿರ ವರ್ಷಗಳ ಈ ನಮ್ಮ ವೈಭವದಲ್ಲಿ ಐತಿಹಾಸಿಕವಾಗಿ ಕಳೆದ ಎರಡು ಸಾವಿರ ವರ್ಷಗಳ ನಮ್ಮ ಭವ್ಯ ಜೀವನವು ಒಮ್ಮೆಲೆ ಕುಪ್ಪರಿಸಿ ಬೀಳಲು ಕಾರಣವೇನು? ಸ್ವಾರ್ಥ ಲೋಲುಪತೆ, ವೈಯಕ್ತಿಕ ಭಾವನೆ, ಪ್ರತ್ಯೇಕತೆ. ಮನೆಮುರುಕತನದ ಹೇಸಿ ಜೀವನವು ನಮ್ಮಲ್ಲಿ ಕಾಲಿರಿಸಿದಾಗಲೆ ನಮ್ಮ ಅಧಃಪಾತಕ್ಕೆ ಮೊದಲಾಯಿತು. ಇದು ಮುಂದೆ ಸಂಭವಿಸಕೂಡದೆಂದು ಭಾವಿಸಿಯೇ ಏನೋ ವೇದ ಋಷಿಗಳು ಎಚ್ಚರಿಸಿದ್ದಾರೆ. ಋಗ್ವೇದದ ಕೊನೆಯ ಮಂಡಲದಲ್ಲಿ "ನೀವೆಲ್ಲ ಒಂದೇ ಚಿತ್ತ, ಒಂದೇ ಮನಸ್ಸುಳ್ಳವರಾಗಿರಿ. ನಿಮ್ಮ ಮಂತ್ರವು ಒಂದಾಗಿರಲಿ. ನಿಮ್ಮ ಅಂತಃಕರಣ ಒಂದಾಗಿ ನೀವೆಲ್ಲರೂ ಐಕ್ಯತೆಯಿಂದ ಇದ್ದುಕೊಳ್ಳಿರಿ;" ಎಂದು ಹೇಳಿರುವ ಅವರ ಉಪದೇಶ ಬಹಳ ಮಹತ್ವಪೂರ್ಣವಾಗಿದೆ.

ಇಂದು ಭಾರತೀಯರಲ್ಲಿ ರೂಢವಾಗಿರುವ ಪ್ರಾರ್ಥನೆಯ ಸ್ವರೂಪವನ್ನು ನೋಡಿದರೆ, ನಮಗೆ ಕಂಡುಬರುವದು ಕೇವಲ ವೈಯಕ್ತಿಕ ಪ್ರಾರ್ಥನೆಯು ಮಾತ್ರ! ಇದನ್ನು ನೋಡಿದವರಿಗೆ ಸಕೃದ್ದರ್ಶನಕ್ಕೆ 'ಪೂರ್ವ ಕಾಲದಿಂದ ಈ ವೈಯಕ್ತಿಕ ಪ್ರಾರ್ಥನೆಯು ಮಾತ್ರ ಭಾರತೀಯರಲ್ಲಿದೆ; ಅವರಿಗೆ ಈ ಅಮೋಘವಾದ ಶ್ರೇಷ್ಠತರವಾದ ಸಾಮೂಹಿಕ ಪ್ರಾರ್ಥನೆಯು ಗೊತ್ತೇ ಇಲ್ಲ

ಅಂದಮೇಲೆ ಅದು ಅವರ ಅಂದಿನ ಅಧ್ಯಾತ್ಮಜೀವನದಲ್ಲಿದ್ದಿತಾದರೂ ಎಂತು ?' ಎಂದು ಮುಂತಾಗಿ ಅನಿಸಬಹುದು. ಆದರೆ ಉಪನಿಷತ್ಕಾಲದಲ್ಲಿ ಕೂಡ ಈ ಸಾಮೂಹಿಕ ಪ್ರಾರ್ಥನೆಯು ಭಾರತೀಯರ ಜೀವನದಲ್ಲಿ ಹಾಸುಹೊಕ್ಕಾಗಿ ತ್ತೆಂಬುದು ನಮಗೆ ಕಂಡುಬರುತ್ತದೆ. ಗಾಯತ್ರೀ ಮಂತ್ರದಲ್ಲಿ,

ಓಂ ತತ್ಸವಿತುರ್ವರೇಣ್ಯಂ ।
ಭರ್ಗೋದೇವಸ್ಯ ಧೀಮಹಿ ।
ಧಿಯೊ ಯೊ ನಃ ಪ್ರಚೋದಯಾತ್ ॥

ಎಂಬೊಂದು ಬೇಡಿಕೆಯು ಮಂಡಿತವಾಗಿದೆ. ಇಲ್ಲಿ 'ನಃ' ಎಂಬುದು ಏಕ ವಚನದಲ್ಲಿರದೆ ಬಹುವಚನದಲ್ಲಿದೆ. ಇದರಿಂದ ಸಾಮೂಹಿಕ ಪ್ರಾರ್ಥನೆಯು ಅಂದೂ ಭಾರತೀಯರ ಜೀವನದಲ್ಲಿ ಇತ್ತೆಂಬುದನ್ನು ಮನಗಾಣಬಹುದು. ಆದರೆ ಕಾಲಗತಿಯಲ್ಲಿ ನಡೆವಳಿಕೆಯಲ್ಲಿ ವ್ಯತ್ಯಾಸವುಂಟಾಗಿ ವರ್ಣ ಆಶ್ರಮ ಜಾತಿ ಕುಲ ಗೋತ್ರಗಳ ಹಾವಳಿಗೆ ತುತ್ತಾಗಿ ರಾಷ್ಟ್ರಜೀವನದಲ್ಲಿ ಕಲಕು ತಲೆ-ದೋರಿತು. ಹಿಂಸೆ ಶೋಷಣೆಗಳು ಅವ್ಯಾಹತವಾಗಿ ಜರುಗತೊಡಗಿದವು. ಇದನ್ನು ಕಂಡು ಮನನೊಂದು ಭಗವಾನ್ ಬುದ್ಧನು ಐತಿಹಾಸಿಕವಾಗಿ ರಾಷ್ಟ್ರೀಯ ಜೀವನದಲ್ಲಿ ಈ ಅಭೂತಪೂರ್ವವಾದ ಸಂಘಟನೆಯನ್ನುಂಟು ಮಾಡ ಲಿಕ್ಕೆ ಹೆಣಗಿದನು. ರಾಜ ವೈಭವವನ್ನು ತ್ಯಾಗಮಾಡಿ ಬುದ್ಧನಾಗಿ 'ಸಂಘಂ ಶರಣಂ ಗಚ್ಛಾಮಿ' ಎಂದು ಸಂಘ ಜೀವನದ ಮೇಲಿನ ತನ್ನ ಶ್ರದ್ಧೆಯನ್ನು ವ್ಯಕ್ತಗೊಳಿಸಿದನು. ಈ ಸಿದ್ಧಾಂತವನ್ನು ಸಾರ್ವತ್ರಿಕವಾಗಿ ರೂಢಗೊಳಿಸಿದನು. ಅಶೋಕ ಚಕ್ರವರ್ತಿಯ ಅಮಿತವಾದ ಉತ್ಸಾಹ ಕಾರ್ಯ ಕುಶಲತೆಗಳ ಪರಿಣಾಮವಾಗಿ ಜನತೆಯಲ್ಲಿ ಈ ಸಂಘಶಕ್ತಿಯು ವ್ಯಾಪಕವಾಗಿ ವ್ಯಕ್ತವಾಗಿ ಲೋಕಕಲ್ಯಾಣವು ನಾಡಿನ ಮೂಲೆ ಮೂಲೆಗಳಲ್ಲಿ ಕಂಗೊಳಿಸತೊಡಗಿತು. ಕಾಲವು ಉರುಳಿದಂತೆ ಇತಿಹಾಸದ ಪುನರಾವೃತ್ತಿಗೂ ಪ್ರಾರಂಭವಾಯಿತು. ಬುದ್ಧ ಭಿಕ್ಷುಗಳ ವೈಯಕ್ತಿಕ ಜೀವನದಲ್ಲಿ ಅನ್ಯಾಯ ಅತ್ಯಾಚಾರಗಳಿಗೆ ಮಿತಿ ತಪ್ಪಿತು. ಸ್ವಾರ್ಥಪರ ವಿಲಾಸ ಜೀವನದಲ್ಲಿ ಜನತೆಯ ಆಸೆ ಅಧಿಕವಾಯಿತು. ಸಂಘ ಜೀವನವನ್ನು ಅದು ಪಾಲಿಸಲಿಲ್ಲ. ಅದರಿಂದ ಅನ್ಯರಿಂದೊದಗುವ ಪೀಡೆ ಹಿಂಸೆಗಳಿನ್ನು ಎದುರಿಸುವ ಸಾಮರ್ಥ್ಯವನ್ನು ಅದು ಕಳೆದುಕೊಂಡಿತು. ಬುದ್ಧ ಭಿಕ್ಷುಗಳಿದ್ದ ವಿಹಾರವು ಗುಲಾಮ ಮಹಮ್ಮದನ ದಾಳಿಗೆ ತುತ್ತಾಗಿ

ಕೋಟ್ಯಾವಧಿ ಬೆಲೆಯುಳ್ಳ ಗ್ರಂಥ ಭಾಂಡಾರವನ್ನೂ ಅಪಾರವಾದ ಸಂಪತ್ತನ್ನೂ ಕಳೆದುಕೊಳ್ಳಬೇಕಾಗಿ ಬಂತು ಈ ಸಂಗತಿಯು ಜನತೆಯ ಅಜ್ಞಾನ ಅಜಾಗರೂಕತೆಯಿಂದೊದಗಿದ ದೈವದುರ್ವಿಪಾಕವೆಂದೇ ಹೇಳಬೇಕು.

ಈ ಸಾಮೂಹಿಕ ಪ್ರಾರ್ಥನೆಯು ಭಾರತೀಯರ ನಿತ್ಯಜೀವನದಿಂದ ಮರೆಯಾದುದರ ದುಷ್ಪರಿಣಾಮಗಳು ಅಸಂಖ್ಯವಾಗಿವೆ, ಅಪಾರವಾಗಿವೆ. ಭಾರತೀಯರ ಜೀವನದ ಮೇಲೆ ಅನೇಕ ವಿಧವಾಗಿ ಉಂಟಾದ ದುಷ್ಪರಿಣಾಮಗಳಲ್ಲಿ ಪ್ರತ್ಯೇಕತಾ ಭಾವನೆಯು ಅತ್ಯಂತ ಪ್ರಬಲವಾದುದು. ಇದು ಭಾರತೀಯರ ರಾಷ್ಟ್ರಜೀವನಕ್ಕೆ ಕೊಡಲಿಯ ಪೆಟ್ಟನ್ನು ಕೊಟ್ಟಿತು. ಒಬ್ಬರ ಜೀವನದಲ್ಲಿಯ ಸುಖದುಃಖಗಳಿಗೆ ಇನ್ನೊಬ್ಬರು ಪಾಲುಗಾರರಾಗುತ್ತಿದ್ದುದು ಹೋಯಿತು. ಪ್ರತಿಯಾಗಿ ಕೇಡು ಉಂಟಾದರೆ ಅದನ್ನು ಕಂಡು ಹಿಗ್ಗುವ ದುಷ್ಟವೃತ್ತಿಯು ಬೆಳೆದುಬಿಟ್ಟಿತು. ಇತಿಹಾಸದಲ್ಲಿ ಇದಕ್ಕೊಂದು ನಿದರ್ಶನವೂ ಸಿಗುವದು. ಮಹಮ್ಮದೀಯರು ನಮ್ಮ ನಾಡಿನಲ್ಲಿ ಕಾಲಿಡುತ್ತಲೆ ನಾಡದೇವಿಯ ಸ್ವಾತಂತ್ರ್ಯಕ್ಕೆ ಕುತ್ತು ಸನ್ನಿಹಿತವಾಯಿತು. ಜಯಚಂದನಿಗಿದ್ದ ಪೃಥ್ವಿರಾಜನ ಮೇಲಿನ ದ್ವೇಷ ಅಸೂಯೆ ಮಾತ್ಸರ್ಯಗಳಿಂದಾಗಿ, ಹೆಚ್ಚಾಗಿ ಆತನ ಮನೆ ಮುರುಕತನದ ನಡತೆಯಿಂದಾಗಿ ನಮ್ಮ ತಾಯಿನಾಡಿನ ಸೌಭಾಗ್ಯವು ಸೂರೆಯಾಯಿತು, ಮಾಂಗಲ್ಯವು ಕಳಚಿಬಿದ್ದಿತು. ಪರಕೀಯರ ಆಳಿಕೆಯ ದಾಸ್ಯದಲ್ಲಿ ನಾಡಿನ ಜನಗಳು ಅನೇಕ ಶತಮಾನಗಳ ವರೆಗೆ ಕೊಳೆಯುವ ದುರ್ದಿನಗಳು ಕಾದುಕೊಂಡು ಕುಳಿತವು. ಅಂದಿನಿಂದ ನಮ್ಮ ರಾಷ್ಟ್ರಜೀವನವೇ ಕುಸಿದು ಬಿತ್ತು. ಆದರೆ ಈಚೆಗೆ ಸಾಮೂಹಿಕ ಪ್ರಾರ್ಥನೆಯಿಂದ ಪರಸ್ಪರ ಸದ್ಭಾವ ಸಹೃದಯತೆ ಪ್ರೇಮ ವಿಶ್ವಾಸ ಆತ್ಮೀಯತೆ ರಾಷ್ಟ್ರಭಕ್ತಿ ಬೆಳೆದು ಬರುವವೆಂಬುದನ್ನು ಕಂಡು ನಮ್ಮ ರಾಷ್ಟ್ರದ ಜೀವನಾಡಿಯನ್ನು ಸರಿಯಾಗಿ ಪರೀಕ್ಷಿಸಿದ ಮಹಾತ್ಮಾ ಗಾಂಧೀಜಿಯವರು ಸಾಮೂಹಿಕ ಪ್ರಾರ್ಥನೆಯನ್ನು ಪುನರುಜ್ಜೀವನಗೊಳಿಸಿದರು. ಪರಸ್ಪರಪ್ರೇಮ ಸಹಕಾರಭಾವಗಳಿಂದ ರಾಷ್ಟ್ರೀಯ ಮನೋವೃತ್ತಿಯವರೆಗೂ ಅದರಿಂದ ದೇಶಕ್ಕೆ ಲಾಭ ಹಾಗು ಪ್ರಯೋಜನಗಳು ತಟ್ಟುವಂತೆ ಮಾಡಿದರು.

ಇಂದು ಸಾಮೂಹಿಕ ಪ್ರಾರ್ಥನೆಯ ಪುನರುಜ್ಜೀವನದ ಜೊತೆಗೆ ಅದು ಸುವ್ಯವಸ್ಥಿತವಾದ ಮತ್ತು ಸರ್ವವ್ಯಾಪಕವಾದ ರೀತಿಯಲ್ಲಿ ರೂಪ ಧರಿಸಬೇಕಾಗಿದೆ. ಯಾಕಂದರೆ ಪ್ರಾರ್ಥನೆಯು ಸಹ ಉಳಿದೆಲ್ಲ ಯೋಗಗಳಂತೆ

ಒಂದು ಯೋಗವಾಗಿದೆ. ಅದನ್ನು ಪ್ರಾರ್ಥನಾಯೋಗವೆಂದೇ ನಾವು ಹೆಸರಿಸಬಹುದು. ಪ್ರಾರ್ಥನೆಯು ಹೊಸದಲ್ಲದಿದ್ದರೂ ಪ್ರಾರ್ಥನಾಯೋಗವು ಮಾತ್ರ ಹೊಸದಾಗಿದೆ.

## ಯೋಗದ ಸ್ವರೂಪ

ಭಾರತೀಯ ಸಂಸ್ಕೃತಿಯಲ್ಲಿ ಧರ್ಮ ಕರ್ಮ ಶಕ್ತಿ ಭಕ್ತಿ ಯೋಗ ಇತ್ಯಾದಿ ಶಬ್ದ ಗಳಲ್ಲಿ ಎರಡೆರಡು ಅಕ್ಷರಗಳಿದ್ದರೂ ಅವುಗಳಿಗೆ ಅಪಾರವಾದ ಅರ್ಥ ಗಾಂಭೀರ್ಯವಿರುತ್ತದೆ. ಹಾಗಾದರೆ ' ಯೋಗ ' ವೆಂದರೇನು ? ' ಯೋಗ ' ಶಬ್ದವು ಹಲವಾರು ಅರ್ಥಗಳಲ್ಲಿ ಪ್ರಯೋಗದಲ್ಲಿದೆ. ಅದಕ್ಕೆ ಒಂದು ಲೌಕಿಕ ದೃಷ್ಟಿಯ ಅರ್ಥವುಂಟು, ಒಂದು ಅಧ್ಯಾತ್ಮ ದೃಷ್ಟಿಯ ಅರ್ಥವೂ ಉಂಟು. ಗೆಳೆಯರಿಬ್ಬರು ಬಹುದಿನಗಳ ನಂತರ ಅಕಸ್ಮಾತ್ತಾಗಿ, ಅನಿರೀಕ್ಷಿತವಾಗಿ ಭೆಟ್ಟಿ ಯಾದರೆ ಅದೂ ಒಂದು 'ಯೋಗ'; ಅದಕ್ಕೆ 'ಮಿತ್ರಯೋಗ' ವೆನ್ನಿರಿ. ಯಾವುದಾದರೊಂದು ವಸ್ತುವು ಅಮೌಲ್ಯವಾಗಿ ದೊರೆತರೆ ಅದೊಂದು ಅಲಭ್ಯ ಲಾಭ ಯೋಗವೆ ಎಂದು ಹೇಳುವೆವು. ಯಾವುದೊಂದು ಸಂಗತಿಯು ಜರುಗಬೇಕಾದರೆ ಅದಕ್ಕೆ ' ಯೋಗ ' ಬರಬೇಕು ! ' ಯೋಗಕ್ಷೇಮ ' ವನ್ನು ಪರಸ್ಪರರು ತಿಳಿದು ಕೊಳ್ಳುವದಂತೂ ಸರ್ವಸಾಮಾನ್ಯವಾಗಿದೆ. ಆದರೆ ಪ್ರಸ್ತುತ ಪ್ರಸಂಗದಲ್ಲಿ ನಾವು ಲೌಕಿಕ ಅರ್ಥಗಳನ್ನು ಬಿಟ್ಟು, ನಮಗೆ ಜೀವ ಜೀವಾಳವೆನಿಸಿದ ಆವಶ್ಯಕವಾದು ದೆನಿಸಿದ ಅಧ್ಯಾತ್ಮಿಕ ಪ್ರಪಂಚದಲ್ಲಿ ಅದರ ಅರ್ಥವೇನೆಂದು ನೋಡುವಾ. ಇಲ್ಲಿಯೂ ಸಹ ' ಯೋಗ ' ಶಬ್ದವು ಹತ್ತಾರು ಅರ್ಥಗಳಲ್ಲಿ ಉಪಯೋಗವಾಗಿವೆ. ಆದರೆ ಎಲ್ಲ ಅರ್ಥಗಳಲ್ಲೂ ಒಂದು ಸಾಮಾನ್ಯ ಸಂಗತಿಯು ಇದ್ದೇ ಇದೆ. ಅದು ಯೋಗದ ವ್ಯುತ್ಪತ್ತಿಯ ಪ್ರಕಾರ ಆಗುವ ಅರ್ಥ. ' ಯುಜ್ '— ' ಸಂಗತೇ ' ಎಂದರೆ ' ಕೂಡುವದು ' ಎಂದರ್ಥ. ಈ ಧಾತುವಿನಿಂದಲೆ ' ಯೋಗ 'ವೆಂಬ ಪದವು ಬಂದಿದೆ. ಅಧಃಪ್ರವೃತ್ತಿಯುಳ್ಳ ಇಂದ್ರಿಯಗಳನ್ನು ಊರ್ಧ್ವಪ್ರವೃತ್ತಿಯಲ್ಲಿ ತಿರುಗಿಸಬೇಕಾದರೆ ಒಂದು ಸಾಧನೆ ಬೇಕು. ಈ ಸಾಧನೆಯೇ ಯೋಗವೆನಿಸುವದು.

ಪಾತಂಜಲ ಯೋಗಸೂತ್ರಗಳಲ್ಲಿ " ಯೋಗಃ ಚಿತ್ತವೃತ್ತಿನಿರೋಧಃ." ಎಂದು ಉಕ್ತವಾಗಿದೆ. ಮನಸ್ಸಿನ ಬೇರೆ ಬೇರೆ ವ್ಯಾಪಾರಗಳನ್ನು ನಿರೋಧಿಸುವದು, ಅಂತರಂಗದ ವ್ಯವಹಾರಗಳನ್ನೆಲ್ಲ ಕೇಂದ್ರೀಕರಿಸಿ ನಿಶ್ಚಿತವಾದ ನಿರ್ಮಲ

ವಾದ ನಿರುಪಮವಾದ ಒಂದು ಗುರಿಯ ಮೇಲೆ ಆ ಚಿತ್ತವನ್ನು 'ಕೂಡಿಸುವದು' ಇಲ್ಲಿ ಯೋಗವಾಗಿದೆ. ಸಮಾಧಿಯಲ್ಲಿ ಲೀನಹೊಂದುವದೂ ಯೋಗವಾಗಿದೆ. ಯೋಗಕ್ಕೆ ಧ್ಯಾನವೆಂದೂ ಅರ್ಥವಿದೆ. ನಾವು ಸೃಷ್ಟಿಯ ರಚನೆಯನ್ನು ಕುರಿತು ತಿಳಿಯಬಯಸಿದಾಗ ನಿಗೂಢವಾದ ದೇವಾತ್ಮಶಕ್ತಿಯ ಧ್ಯಾನಯೋಗದಿಂದ ಸೃಷ್ಟಿಯು ಹೊರಹೊಮ್ಮಿತು, ಪರಮಾತ್ಮನು ತನ್ನ ಯೋಗಶಕ್ತಿಯಿಂದ ಈ ಸೃಷ್ಟಿಯನ್ನು ನಿರ್ಮಿಸಿದನು ಎಂದು ಓದುತ್ತೇವೆ. ಇದರ ಅರ್ಥವೇನು? ಪರಮಾತ್ಮನು ಈ ತೋರುವ ಸೃಷ್ಟಿಯೆಲ್ಲವನ್ನೂ ಕೇವಲ ಧ್ಯಾನಶಕ್ತಿ-ಯಿಂದ ನಿರ್ಮಿಸಿದನೆಂದಾಗುವದಿಲ್ಲವೆ? ಯೋಗವು ಸಾಧನೆಯೂ ಅಹುದು, ಸಿದ್ಧಿಯೂ ಅಹುದು.

ಗೀತೆಯಲ್ಲಿ "ಯೋಗಃ ಕರ್ಮಸು ಕೌಶಲಂ" ಎಂದು ಹೇಳಲಾಗಿದೆ. ಇಲ್ಲಿ ಕರ್ಮವನ್ನು ಮಾಡುವ ಒಂದು ಹತೋಟಿ, ಹಿಡಿತ, ಹದನ, ಹಂಚಿಕೆ, ಚೂಟಿ ಎಂಬ ಅರ್ಥದಲ್ಲಿ 'ಯೋಗ' ಶಬ್ದವು ಬಳಕೆ ಹೊಂದಿದೆ. ಈ ಕರ್ಮ ಕುಶಲತೆಯೇ ಯೋಗ. ಕಮ್ಮಾರನು ಒಂದು ಕಬ್ಬಿಣದ ಒಡವೆಯನ್ನು ಚೂಟಿ-ಯಿಂದ ಮಾಡುವದು, ಕುಂಬಾರನು ಕುಶಲತೆಯಿಂದ ಮಣ್ಣಿನಲ್ಲಿ ಮಿಗಿಲಾದ ಮಡಿಕೆಯನ್ನು ತಯಾರಿಸುವದು—ಎಲ್ಲವೂ ಯೋಗ. ತನ್ನ ಸ್ವಂತ ದುಡಿತದಿಂದ ಸ್ವತಂತ್ರವಾಗಿ ಪ್ರಾಮಾಣಿಕವಾಗಿ ಹಣವನ್ನು ಗಳಿಸುವದು ಧನಪ್ರಾಪ್ತಿಯೋಗ! ಆದರೆ ಮೋಸ ಕಳವು ವಂಚನೆ ಶೋಷಣೆ ಕಳ್ಳಪೇಟೆ ಮುಂತಾದ ಅನ್ಯಾಯದ ಅನೀತಿಯ ದುರ್ಮಾರ್ಗದ ರೀತಿಯಲ್ಲಿ ಹಣ ಗಳಿಸಿದರೆ ಅದು ಧನಪ್ರಾಪ್ತಿ-ಯೋಗವಲ್ಲ. ಪರಪುಟ್ಟವಾಗಿ ಹಣ ಗಳಿಸುವದೂ ಧನಪ್ರಾಪ್ತಿ ಯೋಗವಲ್ಲ. ಯಾಕಂದರೆ ಅಲ್ಲಿ ಹಣ ಗಳಿಸುವ ಸಾಧನಗಳು ಮಡಿಯಾಗಿಲ್ಲ, ಪವಿತ್ರವಾಗಿಲ್ಲ. ಅಪವಿತ್ರ ಮಾರ್ಗದಿಂದ ಸಂಪಾದಿಸಿದರೆ ಅದು ಕರ್ಮಕುಶಲತೆಯಲ್ಲ. ಅದು ಯೋಗವಾಗದು. ಸಾಧನೆ ಸಾಧ್ಯಗಳಲ್ಲಿ ಒಂದು ಪವಿತ್ರವಾದ ಬಾಂಧವ್ಯವಿರ ಬೇಕು. ಯೋಗದಲ್ಲಿಯ ಹಿಡಿತವು, ಕರ್ಮ ಕುಶಲತೆಯು ಶುದ್ಧಾಂತಃಕರಣದ ಮಿಡಿತದೊಡನೆ ಸಮ್ಮಿಲಿತವಾಗಿದೆ. ಬಹಿಃಕರಣದ ಹದವರಿತ ಹಿಡಿತ, ಹಾಗು ಅಂತಃಕರಣದ ಅಪ್ಪಟ ಅರುಹಿನಿಂದೊಡಗೂಡಿದ ಮಿಡಿತ ಇವುಗಳ ಸುಂದರ ಸುರಸ ಸಂಗಮವೇ ಯೋಗವು. ಶಿವಶರಣರ ಶಬ್ದಗಳಲ್ಲಿ 'ಸತ್ಯ ಶುದ್ಧ ಕಾಯಕ'ವೇ ಯೋಗ. ಒಟ್ಟಿನಲ್ಲಿ ಕರ್ಮವನ್ನು ಮಾಡುವ ಶ್ರೇಷ್ಠವಾದ ಪ್ರೇಷ್ಠವಾದ, ಮಡಿಯಾದ ಮಿಗಿಲಾದ ಉಪಾಯವೇ ಯೋಗ. ಯೋಗದ

ಯಾವುದೇ ಪ್ರಕಾರವಿರಲಿ ಅದು ವೈಯಕ್ತಿಕ ಸಾಧನೆಯ ದೃಷ್ಟಿಯುಳ್ಳದ್ದಾಗಿದೆ, ಆದರೆ ಪ್ರಾರ್ಥನಾಯೋಗವನ್ನು ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಆಚರಿಸಲಿಕ್ಕೆ ಬರುವದು.

## ಅಚಿಂತ್ಯಶಕ್ತಿಯ ಆಸರ

ಈ ಸುಂದರವಾದ ನಿತ್ಯನೂತನವಾದ ನಿಜೈಕ್ಯವುತವಾದ ಯೋಗದ ಅರ್ಥದ ಬೆಳಕಿನಲ್ಲಿ ಪ್ರಾರ್ಥನಾಯೋಗವನ್ನು ನೋಡೋಣ. ಪ್ರಾರ್ಥನೆಯೂ ಒಂದು ಯೋಗವು ಆವಾಗ ಆಗುವದು ? ಪ್ರಾರ್ಥನೆಯೂ ಒಂದು ಕರ್ಮ-ವಲ್ಲವೆ ? ಈ ಪ್ರಾರ್ಥನೆಯನ್ನೂ ಒಂದು ಹಠೋಟಿಯಿಂದ ಹಿಡಿತದಿಂದ ಹದದಿಂದ ಹಂಚಿಕೆಯಿಂದ ಚೂಟಿಯಿಂದ ಅರ್ಥಾತ್ ಕುಶಲತೆಯಿಂದ ಮಾಡಬೇಕು. ಅದುವೇ ಪ್ರಾರ್ಥನಾಯೋಗ. ಪ್ರಾರ್ಥನೆಯ ಜೇಷ್ಠವಾದ ಶ್ರೇಷ್ಠ-ವಾದ, ಮಡಿಯಾದ ಮಿಗಿಲಾದ ಉಪಾಯವನ್ನು ತಿಳಿದು ಮಾಡಬೇಕು. ಇದಕ್ಕೆ ಒಂದು ಸಿದ್ಧಾಂತ, ಒಂದು ಸಾಧನೆ, ಒಂದು ಸಂಪಾದನೆಯುಂಟು. ಇದನ್ನು ತಿಳಿದುಕೊಂಡು ಪ್ರಾರ್ಥನೆ ಮಾಡಬೇಕು. ಪ್ರಾರ್ಥನೆಯ ಶಬ್ದಶಃ ಅರ್ಥವು ' ಬೇಡುವದು ' ಎಂದಾಗುತ್ತದೆ. ಹಾಗೆ ಬೇಡುವದಾದರೆ ' ಹೇಗೆ ಬೇಡುವದು ? ಏನನ್ನು ಬೇಡುವದು ? ಎಷ್ಟು ಬೇಡುವದು ? ಯಾವಾಗ ಬೇಡುವದು ? ಯಾರನ್ನು ಬೇಡುವದು ? ಯಾಕೆ ಬೇಡುವದು ? '— ಎಂಬ ಮಾತುಗಳು ಅತ್ಯಂತ ಗಮನಾರ್ಹವಾಗಿವೆ, ಎಂತಲೇ ವಿಚಾರಾರ್ಹ-ವಾಗಿವೆ. ' ಯಾರನ್ನು ಬೇಡುವದು ? '— ಎಂಬ ಪ್ರಶ್ನೆಯೇ ಪ್ರಾರ್ಥನೆಯಲ್ಲಿ ಮುಖ್ಯವಾಗಿದೆ.

ನಿಜವಾಗಿಯೂ ಪ್ರಾರ್ಥನೆಯು ಒಂದು ಅನನ್ಯವಾದ ಆಸಕ್ತಿ ಭಾವನೆ ಇಲ್ಲವೆ ಧಾರ್ಮಿಕ ಭಾವನೆಯಿಂದಲ್ಲದೆ ಸಾಧ್ಯವೇ ಇಲ್ಲ. ಈ ಮಾತನ್ನು ನಾವು ಸದಾ ಸ್ಮೃತಿಪಟಲದ ಮೇಲೆ ಕೊರೆದಿಟ್ಟುಕೊಂಡಿರಬೇಕು. ಮಾನವನು ಒಮ್ಮೊಮ್ಮೆ ತಾನೆಣಿಸದಿದ್ದ, ತನಗೆ ಯಾವ ಕಾಲಕ್ಕೂ ಸಾಧ್ಯವಾಗದ ಕೆಲವು ಅದ್ಭುತ ಅವರ್ಣನೀಯ ಕಾರ್ಯಗಳನ್ನೆಸಗಿಬಿಡುತ್ತಾನೆ. ಆ ಕಾಲಕ್ಕೆ ಈ ಕಾರ್ಯಗಳು ಹೇಗಾದವು ಎಂತಾದವು ಎಂಬುದನ್ನು ವಿಚಾರಿಸಿಕೊಂಡಾಗ ಅವನಿಗೆ ದಂಗುಬಡಿಯುತ್ತದೆ; ಅವನು ದಿಙ್ಮೂಢನಾಗುತ್ತಾನೆ. 'ನಿಜವಾಗಿಯೂ ಈ ಕಾರ್ಯವನ್ನು ಯಾರೋ ನನ್ನಿಂದ ಮಾಡಿಸಿರಲೇ ಬೇಕು; ಇದು ನನ್ನಿಂದ

ಸರ್ವಥಾ ಸಾಧ್ಯವಿಲ್ಲ!' ಎಂದು ಅವನು ಉದ್ಗಾರ ತೆಗೆಯುತ್ತಾನೆ. ಹಾಗಾದರೆ ಆ 'ಯಾರು' ಯಾವದಿರಬಹುದು? ಯಾವದೋ ಒಂದು ಅದ್ಭುತ ಅನುಪಮ ಅವರ್ಣನೀಯ ಅಗಮ್ಯ ಅಚಿಂತ್ಯ ಅತುಲ ಶಕ್ತಿಯಾಗಿದೆ ಅದು. ಈ ಶಕ್ತಿಯೇ ಮಾನವನ ಅದ್ವಿತೀಯ ಘಟನೆಗಳಿಗೆಲ್ಲ ಹಿನ್ನೆಲೆಯಾಗಿ ನಿಂತುಕೊಂಡು ಅವನ್ನು ಮಾಡಿಸುತ್ತದೆಂದು ನಿಧಾನವಾಗಿ ಸಾವಧಾನದಿಂದ ವಿಚಾರಿಸುವ ಪ್ರತಿಯೊಬ್ಬ-ನಿಗೂ ಅನ್ನಿಸದಿರದು. ಈ ಅಚಿಂತ್ಯವಾದ ಶಕ್ತಿಯನ್ನು ಧರ್ಮವು ಒಪ್ಪಿಕೊಳ್ಳು-ತ್ತದೆ, ವಿಜ್ಞಾನವೂ ಅಪ್ಪುತ್ತದೆ. ಆದರೆ ಈ ಶಕ್ತಿಯನ್ನು ತಿಳಿದುಕೊಳ್ಳುವ ಧರ್ಮ ವಿಜ್ಞಾನಗಳ ದೃಷ್ಟಿಕೋನಗಳಲ್ಲಿ ಮಾತ್ರ ಬಹಳ ಅಂತರವಿದೆ. ಧರ್ಮವು "ಈ ಶಕ್ತಿಯು ಅರುಹಿನಿಂದ ಕೂಡಿದ್ದಾಗಿದೆ, ಚೇತನಮಯವಾಗಿದೆ, ಸರ್ವಸಾಕ್ಷಿ-ಯಾಗಿದೆ, ಸರ್ವಾಂತರ್ಯಾಮಿಯಾಗಿದೆ, 'ಸರ್ವ ಕರ್ಮಫಲ–ಪದವಿ–ದಾತಾ' ಆಗಿದೆ"— ಎಂದು ಸ್ಪಷ್ಟವಾಣಿಯಲ್ಲಿ ಹೇಳುತ್ತಿದೆ. ಆದರೆ ವಿಜ್ಞಾನವು 'ಈ ಶಕ್ತಿಯು ಅಂಧವಾಗಿದೆ,ಕುರುಡಾಗಿದೆ' ಎಂದು ತಿಳಿಸುತ್ತದೆ. ಅಯ್ಯೋ! ಈ ಅಚಿಂತ್ಯ ಶಕ್ತಿಯ ಬಗೆಗಿನ ವಿಜ್ಞಾನದ ಈ ವಿನೂತನ ದೃಷ್ಟಿಯಿಂದ ಅದೆಂಥ ಹಾನಿಕಾರಕ ಪರಿಣಾಮವಾಗುತ್ತದೆಯಲ್ಲಾ! ಇಲ್ಲಿ ಪಾಪ–ಪುಣ್ಯಗಳ ಅರಿವೇ ಹಾರಿಹೋಯಿತು!! ಆದರೆ ಧರ್ಮದ ವಿಮಲದೃಷ್ಟಿಯಿಂದ ಅದೆಂಥ ಪ್ರಯೋಜನವು ಮಾನವ ಕುಲಕ್ಕೆ ಆಗುತ್ತಿದೆ ನೋಡಿ! ಆ ಅಚಿಂತ್ಯ ಶಕ್ತಿಯು ಸರ್ವಾಂತರ್ಯಾಮಿಯಾಗಿರುವದರಿಂದ ನಾವು ಮಾಡುವ ಬಿಡುವ ಪ್ರತಿಯೊಂದು ಕೆಲಸವನ್ನು ಅದು ನೋಡುತ್ತದೆ! ಇಲ್ಲಿ ಪಾಪ ಪುಣ್ಯ, ನೀತಿ ಅನೀತಿ, ನ್ಯಾಯಾನ್ಯಾಯ, ಧರ್ಮಾಧರ್ಮಗಳ ಕಲ್ಪನೆಯು ನಿತ್ಯ ಜಾಗೃತವಾಗಿದೆ! ಧರ್ಮ ದೃಷ್ಟಿಯಿಂದ ಪಾಪಭೀರುತ್ವವೂ ಪುಣ್ಯಪ್ರವೃತ್ತಿಯೂ ಮಾನವನಿಗೆ ಅಮೂಲ್ಯ ದೇಣಿಗೆಗಳಾಗಿ ದೊರಕುತ್ತವೆ. ಈ ಶಕ್ತಿಯನ್ನು ನೀವು ಯಾವ ಹೆಸರಿನಿಂದಾದರೂ ಕರೆದುಕೊಳ್ಳಿರಿ. ಅದೇನು ಬಹಳ ಮಹತ್ವದ ವಿಷಯವಲ್ಲ. ನಾವು ಈಗ ಅದಕ್ಕೆ ದೇವನೆಂದೋ, ದೇವಾಧಿದೇವನೆಂದೋ ಕರೆಯುತ್ತೇವೆ; ಕರೆಯೋಣ. ಆ ದೇವಾಧಿದೇವನ ವರ್ಣನೆಯನ್ನು ಶ್ರೀ ಬಸವಣ್ಣನವರು ಕೆಳಗಿನ ವಚನದಲ್ಲಿ ಬಹುಸುಂದರವಾಗಿ ಮಾಡಿದ್ದಾರೆ:

ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
ಹರದ ಕುಳ್ಳಿರ್ದ ನಮ್ಮ ಮಹದೇವಸೆಟ್ಟಿ.

ಒಮ್ಮನವಾದರೆ ಒಡನೆ ನುಡಿವನು; ಇಮ್ಮನವಾದರೆ ನುಡಿಯನು.
ಕಾಣಿಯ ಸೋಲ: ಅರ್ಧಗಾಣಿಯ ಗೆಲ್ಲ!
ಜಾಣ, ನೋಡವ್ವಾ ನಮ್ಮ ಕೂಡಲ ಸಂಗಮದೇವ!"

ಈ ಜಗತ್ತೆಂಬ ಒಂದು ದೊಡ್ಡ ಪೇಟೆಯಲ್ಲಿ ದೇವಾಧಿದೇವನು ಒಂದು ಹಿರಿದಪ್ಪ ಅಂಗಡಿಯನ್ನಿಕ್ಕಿದ್ದಾನೆ. ಭಾರಿ ವ್ಯಾಪಾರ ನಡೆದಿದೆ. ಆದರೆ ಗಿರಾಕಿಗಳ ಕೂಡ ಆವನ ವ್ಯವಹಾರವು ಹೇಗೆ? 'ಒಮ್ಮನವಾದರೆ ಒಡನೆ ನುಡಿವನು; ಇಮ್ಮನವಾದರೆ ನುಡಿಯನು.' ಹೃದಯದಲ್ಲಿ ಎರಡಿಲ್ಲದಿರಬೇಕು. ಅಂದರೆ ಮಾತ್ರ ಮುಂದಿನ ವ್ಯವಹಾರ! ಸೇರಿಗೆ ಮುಕ್ಕಾಲು ಸೇರಿನ ಮಾರಾಟವು ಆತನದಲ್ಲ! ಹಾಗೆಯೇ ಗ್ರಾಹಕರಿಂದ ಐದು ಕಾಲು ಸೇರು ತೆಗೆದುಕೊಳ್ಳುವವನಲ್ಲ. ಕಾಣಿಯ ಸೋಲ; ಅರ್ಧಗಾಣಿಯ ಗೆಲ್ಲ!! ಇದು ಆ ಅಚಿಂತ್ಯ ಶಕ್ತಿಯ ಅಥವಾ ನಾವು ಕರೆಯುವಂತೆ ಆ ದೇವಾಧಿದೇವನ, ಪ್ರಭುವಿನ ಯಥಾವತ್ತಾದ ಶಬ್ದ ಚಿತ್ರಣವು. ಪ್ರಭುಶಕ್ತಿಯಾದ ನ್ಯಾಯ-ದೇವತೆಯು ಅಚಿಂತ್ಯವಾದ ನಮುತೂಕದಿಂದ ಜಗತ್ತನ್ನಾಳುವದು. ಆವರವರು ಎಸಗುವ ಕರ್ಮಕ್ಕೆ ತಕ್ಕ ಫಲವನ್ನು ಎಳ್ಳನಿತು ಕೊರತೆಯಿಲ್ಲದಂತೆ ನೀಡುವದು— ಎಂಬುದು ನಿತ್ಯ ಸತ್ಯವಾಗಿದೆ. ಸಕಲ ವ್ಯಾಪಾರಗಳೂ ಮಾನವ ಜಗತ್ತಿನ ಸರ್ವ ಕರ್ಮಗಳಿಗೂ ಸಾಕ್ಷಿಯಾಗಿದ್ದ ಈ ದೃಷ್ಟಿಯ ನ್ಯಾಯದೇವತೆ ಸದಾ ನ್ಯಾಯನಿರ್ಣಯವನ್ನು ನೀಡುತ್ತ ಈ ವಿಶ್ವದಲ್ಲಿ ವಿರಾಜಿಸುತ್ತಿದೆ. ಎಂತಲೇ ಈ ವಿಶ್ವದ ಗತಿಯು ಪ್ರಗತಿಪಥದಲ್ಲಿ ಸಾಗಿದೆ. ಆದ್ದರಿಂದ ಅಚಿಂತ್ಯವಾದ, ಸಮಸ್ತ ಸೃಷ್ಟಿಯನ್ನು ವ್ಯಾಪಿಸಿದ ಆ ಶಕ್ತಿಯಲ್ಲಿ ಶ್ರದ್ಧೆ ಇರಬೇಕು. ಮಾನವನಲ್ಲಿ ಕಾಲಕಾಲಕ್ಕೆ ಉಂಟಾಗುವ ಸಂಶಯ ನಿವಾರಣೆಗಾಗಿ, ಅವನ ಬುದ್ಧಿಯನ್ನು ತಣಿಸುವದಕ್ಕಾಗಿ ಮಾತ್ರ ಶಾಸ್ತ್ರ ಸಹಾಯ ಮಾಡೀತು. ಆದರೆ ಶಾಸ್ತ್ರದ ತೊಡಕಿಗೆ ಸಿಲುಕಿ ಪ್ರಭುವಿನ ಅಸ್ತಿತ್ವವನ್ನು ಸಿದ್ಧಮಾಡಹೋಗುವ-ದಕ್ಕಿಂತ ಅನುಭಾವಿಗಳ ಅನುಭವದ ಮಾತಿನಿಂದ ಅವನ ಅಸ್ತಿತ್ವವನ್ನು ಒಪ್ಪಿಕೊಳ್ಳುವದು ವಿಹಿತ. ಇಂತಹ ಪ್ರಭುವಿನಲ್ಲಿ ಆವೊಂದು ನ್ಯೂನತೆಯಿಲ್ಲದ, ನಿರಂತರ ನಿತ್ಯ ನವೀನವಾದ, ನಿರುಪಮವಾದ, ನಿರರ್ಗಳವಾದ ನಂಬಿಗೆ—ನಿಷ್ಠೆಗಳು ನೆಲೆಗೊಂಡ ಹೊರತು ಪ್ರಾರ್ಥನೆಗೆ ಇಂಬಿಲ್ಲ; ಒಂದು ವೇಳೆ ಪ್ರಾರ್ಥನೆ ಮಾಡಿದರೆ, ಅದು ಪ್ರಯೋಜನಕಾರಿಯೂ ಆಗಲಾರದು.

## ಸರ್ವಜ್ಞ–ಸರ್ವಶಕ್ತ–ಸರ್ವಾಂತರ್ಯಾಮಿ

ಈ ದೇವಾಧಿದೇವನ ಅಸ್ತಿತ್ವವನ್ನು ಸಿದ್ಧಮಾಡುವ ದಿಶೆಯಲ್ಲಿ ಅನೇಕ ಪ್ರಯತ್ನಗಳು ನಡೆದಿವೆ, ನಡೆಯುತ್ತಿವೆ. ಕ್ಷೇತ್ರ–ಕ್ಷೇತ್ರಜ್ಞ, ಕ್ಷರ–ಅಕ್ಷರ, ಕಾರ್ಯ–ಕಾರಣ, ಬ್ರಹ್ಮಾಂಡ–ಪಿಂಡಾಂಡ ಮುಂತಾದ ಸಂಬಂಧಗಳಲ್ಲಿ ಉಪಾಯಾಂತರದಿಂದ ಇದನ್ನು ಸಿದ್ಧಮಾಡಲು ಯತ್ನಿಸಿದ್ದಾರೆ. ನಾವೀಗ ಸರ್ವಜ್ಞನ ವಚನವೊಂದರಿಂದ ದೇವರ ಅಸ್ತಿತ್ವವನ್ನು ಸಿದ್ಧಮಾಡುವಾ :

ಎಲ್ಲ ಬಲ್ಲವರಿಲ್ಲ ! ಬಲ್ಲವರು ಬಹಳಿಲ್ಲ ।
ಬಲ್ಲಿದರಿದ್ದು ಬಲವಿಲ್ಲ ಸಾಹಿತ್ಯ– ।
ವೆಲ್ಲರಿಗಿಲ್ಲ ಸರ್ವಜ್ಞ ॥

ವಿಜ್ಞಾನಿಗೆ ಬಹಳ ತಿಳಿದಿದೆಯೆಂದು ಇಂದಿನ ಹೊಸ ಹೊಸ ಸಂಶೋಧನಗಳನ್ನು ವಿಚಾರಿಸಿ ನೋಡಿದರೆ ಯಾರಿಗೂ ಅನಿಸುತ್ತದೆ. ಅರುಹುವುಳ್ಳ ಪ್ರಾಣಿಯಾದ ಮಾನವನು ಎಸಗುತ್ತಿರುವ ಕಾರ್ಯಕಲಾಪಗಳಿಗೆ ಹಿನ್ನೆಲೆಯಾಗಿ ಅರಿವು ಇಡುತ್ತದೆ. ಮಾನವರೆಲ್ಲರಲ್ಲಿ ಒಂದೇ ಬಗೆಯ ಜ್ಞಾನವಿಲ್ಲ, ಅದು ಭಿನ್ನ ಭಿನ್ನವಾಗಿರುತ್ತದೆ. ವಿಜ್ಞಾನಿಗೂ ಜ್ಞಾನವುಂಟು, ಯೋಗಿಗೂ ಜ್ಞಾನವುಂಟು. ಆದರೆ, ವಿಜ್ಞಾನಿಗೆ ಅಲ್ಪ ಸೃಷ್ಟಿಯಲ್ಲಿ ಮಾತ್ರ ಅರಿವು ಜನಿಸಿದೆ. ಯೋಗಿಗೂ ಪೂರ್ಣ ಅರಿವು ಸಾಧ್ಯವಾಗುತ್ತ ನಡೆಯುತ್ತದೆ. ಸಾಮಾನ್ಯ ಪುರುಷನಿಗಂತೂ ಎಷ್ಟು ಜ್ಞಾನವಿರಬೇಕೆಂಬುದನ್ನು ಊಹಿಸಿ ತಿಳಿದುಕೊಳ್ಳುವದೇನೂ ಕಠಕಷ್ಟವಲ್ಲ. ಪ್ರತಿಯೊಬ್ಬರ ಜ್ಞಾನದಲ್ಲಿ ತಾರತಮ್ಯವಿದೆ. ಸಾಮಾನ್ಯ ಪುರುಷನಿಗಿಂತಲೂ ಸಾಹಿತಿಗೆ, ಸಾಹಿತಿಗಿಂತಲೂ ವಿಜ್ಞಾನಿಗೆ, ವಿಜ್ಞಾನಿಗಿಂತಲೂ ಯೋಗಿಗೆ, ಯೋಗಿಗಿಂತಲೂ ಸ್ವಾನುಭಾವಿಗೆ ಜ್ಞಾನವು ಹೆಚ್ಚೆಚ್ಚು ಪ್ರಮಾಣದಲ್ಲಿ ಅಳವಡಿಕೆ ಆಗಿರುತ್ತದೆ. ಅಲ್ಪ ಜ್ಞಾನ ಅಧಿಕಜ್ಞಾನ ಇವುಗಳ ಜಾಡನ್ನು ಹಿಡಿದುಕೊಂಡು ನೋಡಿದರೆ ಅದಕ್ಕೆಲ್ಲ ಅಖಂಡಜ್ಞಾನ ಹಿನ್ನೆಲೆಯಾಗಿರಬೇಕು. ಈ ಅಖಂಡ ಜ್ಞಾನಕ್ಕೆ ಪರಮಾತ್ಮ ಎಂದು ಕರೆಯೋಣ. ಈ ಜಗತ್ತಿನಲ್ಲಿ ಯಾವದೂ ಪರಿಪೂರ್ಣವಲ್ಲ. ಪರಮಾತ್ಮನೊಬ್ಬನೆ ಪರಿಪೂರ್ಣ ಜ್ಞಾನಿಯು. ಚಿತ್‌ಪ್ರಭಾಚೈತನ್ಯ ಸಾಮರ್ಥ್ಯವು ಆತನಿಗೊಬ್ಬನಿಗೆ ಮಾತ್ರ ಸಾಧ್ಯ. ಹಿಂದು ಇಂದು ಮುಂದುಗಳ ಜ್ಞಾನದ ಪರಿಪೂರ್ಣ ಆಕಲನಶಕ್ತಿ ಅವನಿಗೊಬ್ಬನಲ್ಲಿ ಮಾತ್ರ ! ಆದ್ದರಿಂದ 'ಎಲ್ಲ ಬಲ್ಲವರಿಲ್ಲ' ಎಂಬುದು ಸಿದ್ಧವಾಗುತ್ತದೆ.

ಉಪನಿಷತ್ತುಗಳಲ್ಲಿ 'ಒಂದನ್ನು ಅರಿತರೆ, ಎಲ್ಲದರ ಅರಿವೂ ಸಾಧ್ಯ' ಎಂಬರ್ಥದ ಒಂದು ಮಾತು ಬರುತ್ತದೆ. ಅದು ಹೇಳುವಂತೆ, ಒಂದು ಕಬ್ಬಿಣದ ತುಂಡನ್ನು ಪರೀಕ್ಷಿಸಿ, ಕಬ್ಬಿಣದ ಗುಣಧರ್ಮಗಳೇನೆಂದು ಹೇಳಲಿಕ್ಕೆ ಬರುವ ದಿಲ್ಲವೆ? ಭೂಮಿಯ ಮೇಲಿನ ಎಲ್ಲ ಕಬ್ಬಿಣವನ್ನೂ ಸಂಗ್ರಹಿಸಿ ಅಷ್ಟನ್ನೂ ಪರೀಕ್ಷಿಸಿ ಆಮೇಲೆ ಮಾತ್ರ ಅದರ ಗುಣಧರ್ಮಗಳನ್ನು ನಿರ್ದಿಷ್ಟಪಡಿಸಿದರೆ ಆಗ ಅದು ಮಾತ್ರ ನಂಬಲರ್ಹವಾದುದು ಎಂದು ಹೇಳುವದು ನಿಜವಾಗಿಯೂ ಜಾಣ ತನದ ಲಕ್ಷಣವಲ್ಲ. ಸ್ವಾತ್ಮಾವಲೋಕನದಿಂದ ತತ್ ಜ್ಞೇಯ ವಸ್ತುವಿನ ಜ್ಞಾನವು ತಾನೇ ಆಕಲನವಾಗುತ್ತದೆ. ಆದರೆ ಬೇರೆ ಬೇರೆ ಜ್ಞಾನಿಗಳು ಅದರ ವರ್ಣನೆಯನ್ನು ಬೇರೆ ಬೇರೆ ಮಾಡಿರಬಹುದು. "ಏಕಂ ಸತ್ ವಿಪ್ರಾಃ ಬಹುಧಾ ವದಂತಿ" ಎಂಬುದು ಸರಿ. ಹೀಗೆ ತಿಳಿದುಕೊಂಡ ಜ್ಞಾನಿಗಳು ಎಷ್ಟು ಜನರಿದ್ದಾರೆ? ಕೇವಲ ಕೈಬೆರಳುಗಳ ಮೇಲೆ ಎಣಿಸುವಷ್ಟು ಸಿಗಬೇಕೆಂದರೆ ಅದೂ ಕಠಿಣವಾದೀತು. ಆದ್ದರಿಂದ 'ಬಲ್ಲವರು ಬಹಳಿಲ್ಲ!'

ಈ ಜ್ಞಾನಿಗಳಲ್ಲಿರುವ ಜ್ಞಾನವಾದರೂ ಅನೇಕ ಸಲ ಕೇವಲ ಬೌದ್ಧಿಕ-ಜ್ಞಾನ! ಬರಿಯ ಪುಸ್ತಕದ ಜ್ಞಾನ! ಅದು ಬುದ್ಧಿಗತವಾದುದು, ಭಾವಗತ-ವಾದುದಲ್ಲ; ವ್ಯಕ್ತಿಗತವೂ ಆಗಿಲ್ಲ! ಇಲ್ಲಿ ವಿಜ್ಞಾನಿಗಳು ಸ್ವಲ್ಪ ಮುಂದೆ ಹೋಗಿದ್ದಾರೆ. ಅವರು ಪ್ರಯೋಗ ಪ್ರಿಯರು. ಪ್ರಯೋಗಕ್ಕೆ ಅಣಿಯಾದಾಗ ಮಾತ್ರ ತಜ್ಞತೆಯು ಕರಗತವಾಗುತ್ತದೆ. ಈ ಮಾತು ವಿಜ್ಞಾನಿಗೆ ಸಂಪೂರ್ಣವಾಗಿ ಅನ್ವಯಿಸುವದೆಂದು ಇದರರ್ಥವಲ್ಲ. ಯಾಕೆಂದರೆ, ಒಂದು ವಿಷಯದಲ್ಲಿ ವಿಜ್ಞಾನಿಯಾದವನು ಇನ್ನೊಂದು ವಿಷಯದಲ್ಲಿ ಅಜ್ಞಾನಿಯಾಗಿರಬಹುದು. ಇದು ವಿಚಿತ್ರವೇನೂ ಅಲ್ಲ, ಅತಿ ಸಹಜ, ಅತ್ಯಂತ ಸ್ವಾಭಾವಿಕವಾಗಿದೆ. 'Knowledge is Power!' ಎಂದು ಹೇಳುವದನ್ನು ನಾವು ಕೇಳಿಲ್ಲವೆ? ಜ್ಞಾನವು ಒಂದು ಶಕ್ತಿಯಾಗಿದೆ. ಇಲ್ಲಿ ಜ್ಞಾನಕ್ಕೆ 'ಚಿತ್' ಎಂದೂ, ಶಕ್ತಿಗೆ ಚಿಚ್ಛಕ್ತಿಯೆಂದೂ ಇಟ್ಟುಕೊಂಡರೆ 'Knowledge is Power' ಎನ್ನುವ-ವದರ ಅರ್ಥವು ಸರಿಯಾಗಿ ಸ್ಪಷ್ಟವಾಗಿ ತಿಳಿಯುತ್ತದೆ. ಈ ಚಿಚ್ಛಕ್ತಿಯು ಪೂರ್ಣತಯಾ ಯಾರಲ್ಲಿಯಾದರೂ ಇದ್ದರೆ ಅದು ಪರಮಾತ್ಮನೊಬ್ಬನಲ್ಲಿ ಮಾತ್ರ. ಆದ್ದರಿಂದ ಅವನಿಗೆ ಸರ್ವಶಕ್ತಿತ್ವ–ಸರ್ವ ಬಲವಿರುತ್ತದೆ. ಎಂಥ ಪ್ರಗಲ್ಭ ಜ್ಞಾನಿಯಿರುವನೆಂದರೂ, ಅವನಲ್ಲಿರುವ ಶಕ್ತಿಯು ಪ್ರಚಂಡ ಶಕ್ತಿಯಾಗಿರಲಾ

ರದು. ಇದರಿಂದ 'ಬಲ್ಲಿದರಿದ್ದು ಬಲವಿಲ್ಲ!' ಎಂಬ ಮಾತಿನ ರಹಸ್ಯವು ವಿದಿತವಾಗುತ್ತದೆ.

ಇನ್ನು 'ಸಾಹಿತ್ಯವೆಲ್ಲರಿಗಿಲ್ಲ' ಎಂದು ಹೇಳಿದ ಮಾತಿನ ಮಥಿತಾರ್ಥ-ವೇನು? 'ಸಾಹಿತ್ಯ' ಶಬ್ದವನ್ನು ನಾವು ಲಲಿತ-ಕಲೆಗಳ ಮಾಲಿಕೆಯಲ್ಲಿ ಕಾಣುತ್ತೇವೆ. ಅರ್ಥಾತ್ ಸಾಹಿತ್ಯವು ಒಂದು ಕಲೆಯಾಗಿದೆ. ಅದರಂತೆ ಸ್ವಾನುಭವವೂ ಒಂದು ಕಲೆಯಾಗಿದೆ. 'ಕಲೆ' ಎಂದರೇನು? 'ಕಲ್' ಧಾತುವಿಗೆ 'ನೂಕು' ಎಂದು ಅರ್ಥವಿದೆ. ಅಂತರಗಂಗೆಯನ್ನು ನೂಕಿ ನೋಡಿದಾಗ ನಾವು ನೀರನ್ನು ಕಾಣುತ್ತೇವೆ. ನಿರ್ಮಲವಾದ ಆತ್ಮನ ಮೇಲೆ ಅಂತರಗಂಗೆಯಂತೆ ಮಲಾವರಣವು ಮುಸುಕಿಕೊಂಡಿದೆ. ಆ ಆವರಣವನ್ನು ನೂಕಲಿಕ್ಕೆ ಯಾವದು ಸಹಾಯ ಮಾಡುವದೊ ಅದೆಲ್ಲವೂ ಕಲೆಯಲ್ಲಿ ಸಮಾವೇಶವಾಗುತ್ತದೆ. ಅನುಭಾವಿಗಳು ಮನಸ್ಸನ್ನು ಕನ್ನಡಿಗೆ, ದರ್ಪಣಕ್ಕೆ ಹೋಲಿಸಿದ್ದಾರೆ. ಮಲ–ಆವರಣ–ವಿಕ್ಷೇಪ ಎಂಬ ಮಾತುಗಳು ವೇದಾಂತದಲ್ಲಿ–ಯೋಗದಲ್ಲಿ ಈ ಕನ್ನಡಿಯ ಹಿನ್ನೆಲೆಯಲ್ಲಿಯೇ ಬಂದಿವೆ. ಕನ್ನಡಿಯ ಮೇಲೆ ಧೂಳು ಕುಳಿತಾಗ ನಮ್ಮ ಮುಖವನ್ನು ಕಾಣಲಿಕ್ಕೆ ಸಾಧ್ಯವಿಲ್ಲ; ಇದು ಮಲ. ಕನ್ನಡಿಯು ಹೊಯ್ದಾಡುತ್ತಾ ಇದ್ದರೆ ನಮ್ಮ ಮುಖ ಸ್ಪಷ್ಟವಾಗಿ ಕಾಣಲಾರದು; ಇದು ವಿಕ್ಷೇಪ. ಕನ್ನಡಿಯ ಮೇಲೆ ಒಂದು ಹೊದಿಕೆಯಿದ್ದಾಗ ನಮ್ಮ ಮುಖವು ಗೋಚರಿಸಲಾರದು; ಇದು ಆವರಣ. ಇದೇ ರೀತಿಯಾಗಿ, ಮನಸ್ಸು ಅನೇಕ ಬಗೆಯಾದ ಕಿಲ್ಬಿಷ ಕಶ್ಮಲ ಹೊಲಸು ಅಥವಾ ಕಲುಷಿತ ವಿಚಾರಗಳಿಂದ ತುಂಬಿದ್ದರೆ ಅದು ಮಲಪೂರಿತ ಮನಸ್ಸು; ಅದರಲ್ಲಿ ಸ್ವರೂಪ ಸಾಕ್ಷಾತ್ಕಾರವು ಸಾಧ್ಯವಿಲ್ಲ. ಮನಸ್ಸು ಚಾಂಚಲ್ಯ–ಚಪಲತೆಗಳಿಂದ ಕೂಡಿದ್ದರೆ ಆತ್ಮದರ್ಶನವು ಎಂದೂ ಆಗಲಾರದು. ಮನಸ್ಸು ಅಜ್ಞಾನದ ಹೊದಿಕೆಯಿಂದ ಆವೃತವಾಗಿದ್ದರೆ ಆತ್ಮಜ್ಞಾನವು ನಿಲುಕದು. ಹುಡಿ ಹೊಯ್ದಾಟ ಹೊದಿಕೆಗಳಿಲ್ಲದ ಕನ್ನಡಿಯಲ್ಲಿ ಮಾತ್ರ ಮುಖಾವಲೋಕನ ಸಾಧ್ಯವಾಗುವಂತೆ, ಸ್ವರೂಪಜ್ಞಾನವು ಸುಲಭ-ವಾಗಬೇಕಾದರೆ ಮಲ–ಆವರಣ–ವಿಕ್ಷೇಪಗಳಿಲ್ಲದ ಮನಸ್ಸು ಬೇಕು. ಸ್ವರೂಪ ಜ್ಞಾನಕ್ಕೆ ಸಹಕಾರಿಯಾದ ಮಲಾವರಣವಿಕ್ಷೇಪರಹಿತ ಮನಸ್ಸನ್ನು ಸಾಧಿಸಲು ಸಹಾಯ ನೀಡುವದೇ ಕಲೆ. ಇದುವೆ ಸಾಹಿತ್ಯ! ನಾವಿಂದು ನಿಷ್ಪಕ್ಷಪಾತ ದೃಷ್ಟಿಯಿಂದ, ನಿಷ್ಕಲ್ಮಷ ಹೃದಯದಿಂದ ನಿರೀಕ್ಷಿಸಿದಾಗ ಇಂಥ 'ಸಾಹಿತ್ಯ' ವಿದ್ದವರು ನಮಗೆಷ್ಟು ಜನ ಸಿಕ್ಕುತ್ತಾರೆ? ಸಿಕ್ಕುವದೇ ಮೊದಲು ಕಷ್ಟ; ಒಂದು

ವೇಳೆ ಸಿಕ್ಕಿವರೆ ಅತ್ಯಲ್ಪ ಜನ ಮಾತ್ರ ಸಿಕ್ಕುತ್ತಾರೆ. ಹೀಗೆಂದ ಮೇಲೆ 'ಸಾಹಿತ್ಯ-ವೆಲ್ಲರಿಗಿಲ್ಲ' ಎಂದೆನಿಸುವದಿಲ್ಲವೆ? ನಿಜವಾಗಿ ಇಂಥ ಸಾಹಿತ್ಯವುಳ್ಳವರು ಅಪರೂಪ.

ದೇವನು ಪ್ರೇಮರೂಪವಾಗಿದ್ದಾನೆ. ನಮಗಾಗಿ ಅನುಗ್ರಹಿಸಿದ ಈ ವಿಶಾಲವಾದ ವಿಶ್ವವು, ಬಗೆಬಗೆಯ ವೈಚಿತ್ರ್ಯಗಳಿಂದ ಕೂಡಿದ ಈ ಸೃಷ್ಟಿಯು ಆತನ ಪ್ರೇಮದ ಪ್ರತೀಕ.

ಬಾಳು ಸಾರ್ಥಕವಾಗಲೆಂದು ನೀ ಕಾಡದಿರು
ಆವುದೊಂದನು ವ್ಯರ್ಥ ಮಾಡನವನು.
ಮೇಲಾಗಿ ನೀ ಬಾಳುವದು ನಿನ್ನ ಛಲವಲ್ಲ,
ದೇವನ ವಿಶಾಲ ಮಮತೆಯ ಫಲವದು.

ಇಹದಲ್ಲಿಯ ಮಾನವನ ಬಾಳುವೆ ಆ ದೇವನ ಅಪಾರವಾದ ಕರುಣೆ ಪ್ರೇಮಗಳ ಫಲವಾಗಿದೆ. ಆತನ ಕರುಣೆಯೆಂಬ ಬಳ್ಳಿಯಲ್ಲಿ ನಾವೂ ನೀವೂ ಎಲ್ಲರೂ ಮೊಗ್ಗುಗಳು, ಸುಗಂಧ ಬೀರುವ ಪುಷ್ಪಗಳಾಗಿ ಅರಳಬೇಕು. ಇಂಥ ದೇವನನ್ನು ಮರೆಯುವದು, ದಾನ ಕೊಟ್ಟ ದಾನಿಯನ್ನು ಮರೆಯುವದು ಅಸಂಸ್ಕೃತಿಯ ಲಕ್ಷಣ. ಆದ್ದರಿಂದ ನಮ್ಮ ಅಸಂಸ್ಕೃತಿಯು ತಲೆಯೆತ್ತಿ ವ್ಯಕ್ತವಾಗದಿರಲೋಸುಗ ಅಚಿಂತ್ಯವಾದ ಪರವಸ್ತುವನ್ನು ಬೆಳಗಿನಲ್ಲಿ ಅನನ್ಯಭಾವದಿಂದ ನೆನೆಯಬೇಕು. ಹಾಗೆ ನೆನೆಯುವುದೇ ಪೂಜೆ, ಪ್ರಾರ್ಥನೆ. ಕೃತಜ್ಞತಾ ಬುದ್ಧಿಯೇ ಪೂಜೆಯ ಪ್ರತೀಕ. ಪ್ರಾರ್ಥನೆಯೂ ಒಂದು ಕಾಯಕವಾದ್ದರಿಂದ ಅದನ್ನು ಸದ್ಭಾವ-ದಿಂದಲೇ ಮಾಡಬೇಕು. ವಿದ್ಯುತ್ತನ್ನು ಪ್ರಕಟಿಸಲಿಕ್ಕೆ ಒಂದು ವಿಧಾನವಿದ್ದಂತೆ ಪ್ರಕಾಶಮಯನಾದ ಪರಮಾತ್ಮನನ್ನು ಪ್ರಕಟಿಸಲಿಕ್ಕೆ ಒಂದು ವಿಧಾನವಿರುತ್ತದೆ; ಅದುವೆ ಪ್ರಾರ್ಥನೆ.

ಇಂಥ ಪ್ರಭುವನ್ನು ಇಂಥ ದೇವನನ್ನು ಒಂದು ಹೆಸರಿನಿಂದ ಕರೆಯ ಬೇಕಲ್ಲವೆ ಮಾನವರನ್ನು ಒಂದು ಹೆಸರಿನಿಂದ ಕರೆಯುವಂತೆ! ಪಾತಂಜಲ ಯೋಗಸೂತ್ರಗಳಲ್ಲಿ ಈಶ್ವರನ ಲಕ್ಷಣಗಳನ್ನು ತಿಳಿಸುತ್ತ ಅವನನ್ನು ಯಾವ ಹೆಸರಿನಿಂದ ಸಂಬೋಧಿಸಬೇಕೆಂಬುದನ್ನೂ ಅದರಿಂದ ಉಂಟಾಗುವ ಪರಿಣಾಮ ಗಳನ್ನೂ ಬಹಳ ಮಾರ್ಮಿಕವಾಗಿ ವಿವರಿಸಲಾಗಿದೆ. ಪಾತಂಜಲರು ಹೇಳುವರು:

ಕ್ಲೇಶಕರ್ಮವಿಪಾಕಾಶಯೈರಪರಾಮೃಷ್ಟಃ ಪುರುಷವಿಶೇಷ ಈಶ್ವರಃ ।

ಇಲ್ಲಿ ಮಾನವರಲ್ಲಿಯ ಲೋಪದೋಷ ನಿರ್ದೇಶದೊಡನೆ ದೇವನ ಕಲ್ಯಾಣ ಗುಣಗಳನ್ನು ಸೂಚ್ಯವಾಗಿ ತಿಳಿಸಲಾಗಿದೆ. ಮನುಷ್ಯರು ಅವಿದ್ಯಾ, ಅಸ್ಮಿತೆ, ರಾಗ, ದ್ವೇಷ ಮತ್ತು ಅಭಿನಿವೇಶ ಎಂಬ ಐದು ತರಹದ ದುಃಖಗಳಿಗೆ ಒಳಗಾಗಿರುವರು. ಸಂಚಿತ ಆಗಾಮಿ ಪ್ರಾರಬ್ಧ ಎಂಬ ಕರ್ಮತ್ರಯಗಳೂ ಅವರಿಗೆ ಗಂಟು ಬಿದ್ದಿರುತ್ತವೆ. ಪಾತಂಜಲ ಯೋಗಸೂತ್ರಗಳೇ ತಿಳಿಸುವಂತೆ ಪುಣ್ಯ, ಪಾಪ, ಪುಣ್ಯಪಾಪ ಮಿಶ್ರಿತ ಮತ್ತು ಪುಣ್ಯಪಾಪರಹಿತವಾದ ನಾಲ್ಕು ತರದ ಕರ್ಮ ಬಂಧನಕ್ಕೆ ಅವರು ಒಳಗಾಗಿರುವರು. ಕರ್ಮದ ಫಲಕ್ಕೆ ವಿಪಾಕ ಎನ್ನುವರು. ಹಾಗು ಕರ್ಮಗಳಿಂದುಂಟಾಗುವ ಸಂಸ್ಕಾರಗಳಿಗೆ ಆಶಯ ಎಂದು ಹೆಸರು. ಕರ್ಮದ ಫಲ ಹಾಗು ಸಂಸ್ಕಾರಗಳು ಒಲ್ಲೆವೆಂದರೂ ಬಿಡವು. ಕರ್ಮಗಳನ್ನೆಸಗಿದರೂ ಅವುಗಳ ಫಲಪ್ರಾಪ್ತಿಯ ವಿಷಯದಲ್ಲಿ ನಿಷ್ಕಾಮವನ್ನು ಹೊಂದಲೇಬೇಕೆಂದು ಗೀತೆಯು ಬೋಧಿಸುತ್ತದೆ. ಕರ್ಮಗಳಿಂದುಂಟಾಗುವ ಸಂಸ್ಕಾರ ವಿಶೇಷಗಳು ಮಾನವರ ಉತ್ತರೋತ್ತರ ಅಧ್ಯಾತ್ಮ ಪ್ರಗತಿಗೆ ಅನುಕೂಲಿಸುವಂಥವುಗಳಾಗಿರಬೇಕು. ಆತ್ಮರುಗಳೆಲ್ಲರಿಗೆ ಕ್ಲೇಶ ಕರ್ಮ ವಿಪಾಕ ಆಶಯಗಳು ಅನಾದಿ ಸಂಬಂಧವಾಗಿ ಬಂದಿರುತ್ತವೆ. ಪರಮಾತ್ಮನಿಗೆ ಇವುಗಳ ಸಂಬಂಧವಿರುವದಿಲ್ಲ. ಆದ್ದರಿಂದ ಅವನು ಪುರುಷವಿಶೇಷ, ವಿಶಿಷ್ಟವಾದ ಪುರುಷ ಎಂದು ಕರೆಯಿಸಿಕೊಳ್ಳಲ್ಪಡುವನು. ಮುಕ್ತಾತ್ಮರುಗಳಿಂದಲೂ ಪರಮಾತ್ಮನು ವಿಶಿಷ್ಟನಾಗಿಯೇ ಇರುತ್ತಾನೆ. ಆತನ ಈ ವೈಶಿಷ್ಟ್ಯವನ್ನೇ ಮುಂದುವರಿಸುತ್ತ ಪಾತಂಜಲರು

ತತ್ರ ನಿರತಿಶಯಂ ಸರ್ವಜ್ಞಬೀಜಂ।
ಪೂರ್ವೇಷಾಮಪಿ ಗುರುಃ ಕಾಲೇನಾನವಚ್ಛೇದಾತ್ ।

ಎಂದು ಹೇಳಿದ್ದಾರೆ.

ಈ ಸೃಷ್ಟಿಯು ಈಶ್ವರ ನಿರ್ಮಿತವು. ಈಶ್ವರ ನಿರ್ಮಿತವಾದ ಇಲ್ಲಿ ಇನ್ನುಳಿದವರಾರು ಅವನಿಗಿಂತ ಹೆಚ್ಚಿನವರಿಲ್ಲ, ಹೆಚ್ಚಿನ ಜ್ಞಾನಿಗಳಿಲ್ಲ. ಮನುಷ್ಯದೇಹಧಾರಿಯಾಗಿರುವ ಆತ್ಮರು ಜ್ಞಾನ ಸಂಪಾದನೆಯನ್ನು ಪಡೆದು ಅದರ ಪರಾಕಾಷ್ಠೆಯನ್ನು ಹೊಂದಿರುವರು ಎಂದು ಅಂದರೂ ಅದು ತುಲನಾತ್ಮಕವಾದ ಜ್ಞಾನವು. ಹೀಗೆ ಜ್ಞಾನಪಡೆದ ಆತ್ಮರುಗಳ ಜ್ಞಾನದ ಮೊತ್ತವನ್ನೆಲ್ಲ ಒಂದೆಡೆಗೆ ಸೇರಿಸಿದರೂ ಪರಮಾತ್ಮನ ದಿವ್ಯಜ್ಞಾನಕ್ಕೆ ಅದು ಸಮಾನವಾಗದು. ‘ಸರ್ವ’ ಶಬ್ದದಲ್ಲಿ

ಯಾವ ಯಾವ ಅರ್ಥವನ್ನು ಕಾಣಲಪೇಕ್ಷೆ ಪಡುವರೋ ಅವನ್ನೆಲ್ಲ ಪರಮಾತ್ಮನು ತನ್ನಲ್ಲಿ ಗರ್ಭೀಕರಿಸಿಕೊಂಡಿರುವನು. ಅಂತೆಯೇ ಅವನನ್ನು ಸರ್ವಜ್ಞ ಎಂದು ಕರೆಯುತ್ತಾರೆ. ಸರ್ವಜ್ಞನಾದ ಅವನು ಸರ್ವಶಕ್ತಿಮಂತನೂ ಸರ್ವಕಾರಣ ಕರ್ತೃವೂ ಆಗಿದ್ದಾನೆ. ಜ್ಞಾನಕ್ಕೆ ಅವನೇ ಉಗಮಸ್ಥಾನವು. ಸೃಷ್ಟಿಗೆ ಆದಿಯುಂಟು. ಯಾಕಂದರೆ ಅದು ನಿರ್ಮಿತವಾದುದು. ಅದು ನಿರ್ಮಿಸಲ್ಪಡುವ ಪೂರ್ವದಲ್ಲಿಯೇ ಅದರ ನಿರ್ಮಾತೃವಿರಬೇಕಷ್ಟೆ ! ಅಂತೆಯೇ ಅವನು ಅನಾದಿಯಾಗಿದ್ದಾನೆ. ಆದಿ ಅಂತ್ಯಗಳಿಲ್ಲದ ಅವನು ಕಾಲಾತೀತನಾಗಿದ್ದಾನೆ. ಸಚರ ಅಚರ ಸೃಷ್ಟಿಗೆಲ್ಲ ಅವನು ಮೊದಲಿಗನೂ ಜ್ಞಾನಗಮ್ಯನೂ ಜ್ಞಾನನಿಧಿಯೂ ಆಗಿರುವದರಿಂದ ಅವನು ಗುರುವಾಗಿದ್ದಾನೆ.

ಇಂಥ ಪರಮಾತ್ಮನನ್ನು ಸಂಬೋಧಿಸಬೇಕಾದರೆ ಒಂದು ಹೆಸರಿನಿಂದ ಅವನನ್ನು ಕರೆಯಬೇಕಾಗುವದು. ಅದನ್ನು ಕುರಿತು ಪಾತಂಜಲರು

ತಸ್ಯ ವಾಚಕಃ ಪ್ರಣವಃ ।

ಎಂದು ಹೇಳುತ್ತಾರೆ. ಪರಮಾತ್ಮನು 'ಓಂ'ಕಾರ ರೂಪಿಯಾಗಿದ್ದಾನೆ. 'ಓಂ' ಕಾರದಿಂದಲೇ ಅವನು ಕರೆಯಲ್ಪಡುತ್ತಲಿದ್ದಾನೆ. 'ಓಂ' ಕಾರವು ನಿಸರ್ಗ ಮಾತ್ರವಾಗಿರುತ್ತದೆ. ಶಬ್ದಗಳು 'ಓಂ'ಕಾರದ ವಿಕೃತರೂಪಗಳು. ಪರಮಾತ್ಮನು ಅನಾದಿಯಾಗಿರುವಂತೆ ಅವನ ಹೆಸರಾದ 'ಓಂ'ಕಾರವೂ ಅನಾದಿಯಾಗಿಯೇ ಇರುತ್ತದೆ. ಆದ್ದರಿಂದ ಅನಾದಿಯಾದ ಈ ಹೆಸರಿನಿಂದ ಈ ಓಂಕಾರ ಮಂತ್ರದಿಂದ ಪರಮೇಶ್ವರನನ್ನು ಪ್ರಾರ್ಥಿಸುವದು ಬಹಳ ಮಹತ್ವದ ಸಂಗತಿಯಾಗಿರುತ್ತದೆ. ಈ ಮಂತ್ರವನ್ನು ಜಪಿಸುವದರಿಂದ ಅಂತರಾಯ ಭಾವನೆಗಳೆಲ್ಲ ಅಳಿದು ಆ ಪರಮಾತ್ಮ ಭಾವನೆಗಳೇ ಮೂಡಿಕೊಳ್ಳುತ್ತವೆ. ಅರ್ಥಾತ್ ಆ ಮಂತ್ರಜಾಪಿಯು ಪರಮಾತ್ಮ ಸ್ವರೂಪವೇ ಆಗುತ್ತಾನೆ. ಅದಕ್ಕಾಗಿ ಪಾತಂಜಲರು ಹೇಳುತ್ತಾರೆ. 'ತಜ್ಜಪಃ ತದರ್ಥಭಾವನಂ' ಎಂದು.

ಪರಮಾತ್ಮನು ಎಲ್ಲಿ ಇದ್ದಾನೆ, ಯಾವ ದಿಕ್ಕಿಗೆ ಮುಖ ಮಾಡಿದ್ದಾನೆ, ಮತ್ತು ಅವನು ಏನನ್ನು ಮಾಡುತ್ತಾನೆ ಎಂಬವು ಸಾಮಾನ್ಯವಾಗಿ ಬಹುಜನರಲ್ಲಿ ಮೂಡುವ ಪ್ರಶ್ನೆಗಳು. ಅವನ ಸರ್ವವ್ಯಾಪಕತ್ವ, ಸರ್ವಜ್ಞತ್ವ, ಸರ್ವಶಕ್ತಿತ್ವ, ಸರ್ವಕಾರಣಕರ್ತೃತ್ವ ಗುಣಗಳಲ್ಲಿ ಅಪನಂಬಿಗೆ ತಾಳುವ ವ್ಯಕ್ತಿಗಳಲ್ಲಿ ಬಹುತರ

ವಾಗಿ ಈ ಪ್ರಶ್ನೆಗಳು ಹುಟ್ಟದೆ ಇರುವದಿಲ್ಲ. ಈ ಪ್ರಶ್ನೆಗಳ ಉತ್ತರಗಳನ್ನು ಶಾಸ್ತ್ರ-ಪಾಂಡಿತ್ಯಬಲದಿಂದ ಹುಡುಕುವದೇನು ಅವಶ್ಯವಿಲ್ಲ. ಸಾಮಾನ್ಯವಾದ ವ್ಯಾವಹಾರಿಕ ಉದಾಹರಣೆಗಳಿಂದ ಇವುಗಳಿಗೆ ಪರಿಹಾರ ಸುಲಭವಾಗಿ ಸಿಗಬಲ್ಲದು. ಆಕಳ ಮೈಯಲ್ಲಿ ತುಂಬಾ ಹಾಲು ಇರುತ್ತಿದ್ದರೂ ಕೆಚ್ಚಲಿನ ಮುಖಾಂತರವಾಗಿಯೇ ಅದನ್ನು ಹೇಗೆ ಪಡೆಯಬಹುದೋ ಹಾಗೆಯೇ ಎಲ್ಲ ಕಡೆಗೂ ಪರಮಾತ್ಮನು ತುಂಬಾ ತುಂಬಿ ತುಳುಕುತ್ತಿದ್ದರೂ ಅವನು ಮಾನವರ ಹೃದಯದ ಮುಖಾಂತರವಾಗಿಯೇ ವ್ಯಕ್ತವಾಗುತ್ತಾನೆ. ಹೃದಯವು ದೇವನಿಗಾಗಿ ಹಗಲಿರುಳು ಹಂಬಲಿಸಿದಾಗ, ಅದು ಅವನಿಗಾಗಿ ಪರಿತಪಿಸಿ ಪ್ರಫುಲ್ಲಿತವಾಗಿ ಅರಳಿ ನಿಂತಾಗ ಅವನ ಅಸ್ತಿತ್ವವನ್ನು ಕಂಡುಕೊಂಡೀತು. ಎಲ್ಲರಲ್ಲಿಯೂ ಎಲ್ಲದರಲ್ಲಿಯೂ ಆತನು ಹುದುಗಿದ್ದರೂ ಸುಜ್ಞಾನ-ಸತ್ಕ್ರಿಯೆಗಳಿಂದೊಡಗೂಡಿದ ಮಾನವರ ಹೃದಯದಲ್ಲಿ ಅವನು ಹೊರಹೊಮ್ಮುವನು. ಹಾಗೆಯೇ ಸುತ್ತಲೂ ತನ್ನ ಪ್ರಕಾಶವನ್ನು ಬೀರುವ ಮೇಣಬತ್ತಿಯ ದೀವಿಗೆಯೊಂದು ಯಾವುದೇ ದಿಕ್ಕಿನಿಂದ ನೋಡಿದರೂ ಆ ಕಡೆಗೇ ಮುಖಮಾಡಿ ಕಾಣುತ್ತಿರುವಂತೆ ತೇಜಃಪುಂಜನಾದ ಪರಮಾತ್ಮನು ಎಲ್ಲ ಕಡೆಗೂ ಮುಖಮಾಡಿಕೊಂಡೆ ಇರುತ್ತಾನೆ. ಆ ಶಾಂತ ತೇಜಸ್ವಿ ಮುಖಮುದ್ರೆಯನ್ನು ಯಾರು ನೋಡಬಯಸುವರೋ ಅವರಿಗೆ ಆ ತೇಜೋರೂಪವು ಕಾಣಿಸಿಕೊಳ್ಳುವದು. ಮಾನವನ ಬುದ್ಧಿಸಾಮರ್ಥ್ಯಕ್ಕೆ ಒಂದು ಪರಿಮಿತಿಯುಂಟು. ದೇವನ ದಿವ್ಯ ಸಾಮರ್ಥ್ಯದ ಮಾತು ಹಾಗಲ್ಲ. ಅದು ಅಘಟಿತ ಘಟನಾ ಸಾಮರ್ಥ್ಯವುಳ್ಳದ್ದು. ಅವನ ಸೃಷ್ಟಿಯಲ್ಲಿ ಆಳು ಅರಸನೂ, ಅರಸನು ಆಳೂ, ಪಂಡಿತನು ಪಾಮರನೂ, ಪಾಮರನು ಪಂಡಿತನೂ, ತಿಪ್ಪೆ ಉಪ್ಪರಿಗೆ ಉಪ್ಪರಿಗೆ ತಿಪ್ಪೆಯೂ ಆಗಬಲ್ಲದು. ಇದನ್ನು ನಿತ್ಯದಲ್ಲಿಯೂ ನೋಡುತ್ತಲೇ ಇದ್ದರೂ ಅವನ ಅಸ್ತಿತ್ವದಲ್ಲಿ ಸಂಶಯ ಬುದ್ಧಿಯನ್ನು ತಾಳಿದ ವ್ಯಕ್ತಿಗಳಿಗೆ ಇದರ ಬಗೆಗೆ ಯಾವ ಆಲೋಚನೆಯೂ ಬರುವದಿಲ್ಲ. ಅಷ್ಟೇ ಏಕೆ, ಇವನ್ನೆಲ್ಲ ಆಕಸ್ಮಿಕ ಘಟನೆಗಳಿಂದೂ, ಇಲ್ಲವೆ ಸೃಷ್ಟಿಯ ಕ್ರಮದಲ್ಲಿ ಈ ತರಹದ ಏರಿಳಿತಗಳು ಜರುಗುವದು ಸಾಭಾವಿಕವೆಂದೂ ತಿರಸ್ಕಾರ ದೃಷ್ಟಿಯಿಂದಲೋ, ಉದಾಸೀನ ಭಾವನೆಯಿಂದಲೋ ತಿಳಿದುಕೊಳ್ಳುವದು ಇಂದಿನ ಪ್ರವೃತ್ತಿಯಾಗಿ ಬಿಡಹತ್ತಿರುತ್ತದೆ. ಆದರೆ 'ನಾವು' ಇದ್ದೇವೆ ಎಂಬ ನಂಬಿಗೆ ಇದ್ದುದ್ದಾದರೆ ದೇವನೂ ಇರುತ್ತಾನೆ ಎಂಬುದನ್ನು ನಿರ್ಣಯಿಸುವದು ಜಡವಲ್ಲ. ದೇವನಿರುವ ವಿಷಯದಲ್ಲಿ ಸಂಶಯವನ್ನು ತಾಳುವದು ತನ್ನ ಅಸ್ತಿತ್ವದಲ್ಲಿಯೇ ನಂಬಿಗೆ

ಇರುವದಿಲ್ಲವೆಂಬುದನ್ನು ವ್ಯಕ್ತಗೊಳಿಸಿದಂತಾಗುವದು. ನಿಜಸ್ಥಿತಿಯು ಹೀಗಲ್ಲ, ನಾವೂ ಇದ್ದೇವೆ, ಈ ಸೃಷ್ಟಿಯೂ ಇರುತ್ತದೆ; ಈ ಸೃಷ್ಟಿಕರ್ತನಾದ ಪರಮಾತ್ಮನೂ ಇರುತ್ತಾನೆ. ನಮ್ಮ ಅಸ್ತಿತ್ವವೂ ಈ ಸೃಷ್ಟಿಯ ಅಸ್ತಿತ್ವವೂ ನಮ್ಮ ಅನುಭವ ಗಮ್ಯವಾಗುತ್ತದೆ, ಅದು ಅಷ್ಟು ಸ್ಪಷ್ಟವಾಗಿರುತ್ತದೆ. ಸೃಷ್ಟಿಕರ್ತನಾದ ಆ ದೇವನ ಅಸ್ತಿತ್ವವನ್ನು ಅನುಭವದೃಷ್ಟಿಯೇ ಅರಿಯಬೇಕು, ಚರ್ಮಚಕ್ಷುವಿಗೆ ಅದು ಸಾಧ್ಯವಿಲ್ಲ. ಅನುಭವ ದೃಷ್ಟಿಯನ್ನು ಬೆಳಿಸಿಕೊಂಡವರು ಒಬ್ಬರನ್ನು ಇನ್ನೊಬ್ಬರು ಕಾಣುವಂತೆ ಆ ದೇವನನ್ನು ಪ್ರತ್ಯಕ್ಷವಾಗಿಯೂ ಕಂಡಾರು. ಅವನ ಅಸ್ತಿತ್ವವನ್ನು ಮಾತ್ರ ಅಲ್ಲಗಳೆಯಲಿಕ್ಕೆ ಆಗದು.

ಇಂಥ ಒಬ್ಬ ಪುರುಷನಿದ್ದಾನೆ. ಅವನೇ ದೇವಾಧಿದೇವನು. ಇಷ್ಟೊಂದು ನಿಯಮಬದ್ಧವಾಗಿ ನಿರರ್ಗಳವಾಗಿ ಈ ಸೃಷ್ಟಿಕಾರ್ಯವು ನಡೆಯಬೇಕಾದರೆ ಆ ದೇವಾಧಿದೇವನ–ಎಲ್ಲ ಬಲ್ಲತನಕ್ಕೆ ತಕ್ಕ ಬಲವುಳ್ಳ ಹಾಗೂ ಸಾಹಿತ್ಯ ಸಂಪೂರ್ಣ-ವಾಗುಳ್ಳ – ಒಂದಾನೊಂದು ಅಚಿಂತ್ಯ ಶಕ್ತಿಯನ್ನು ನಾವು ಒಪ್ಪಲೇಬೇಕು. ಇಂಥ ಸರ್ವಾಂತರ್ಯಾಮಿಯಾದ (Omni-present) ಸರ್ವಜ್ಞಮೂರ್ತಿ-ಯಾದ (Omni-scient) ಹಾಗು ಸರ್ವಕಾರಣ ಕರ್ತೃವಾದ (Omni-potent) ಆ ದೇವಾಧಿದೇವನು ಎಳ್ಳುಗೊನೆ, ಮುಳ್ಳು ಮೊನೆಗಳಲ್ಲಿ ತುಂಬಿ ತುಳುಕುತ್ತಾನೆ. Feel the presence of God in the loving embrace as well as in the cutting sword. ಅವನು ಜ್ಯೋತಿ ಸ್ವರೂಪನಾಗಿದ್ದಾನೆ, ಅವನ ತೇಜಃಪುಂಜದ ಪ್ರಭೆ ಸರ್ವತ್ರ ವ್ಯಾಪಿ-ಸಿದೆ ಎಂಬ ತಿಳಿಯೊಡನೆ ಅವನೊಬ್ಬ ಮಹಾದಾನಿ; ಇಳೆ, ಮಳೆ, ಬೆಳೆ, ಗಾಳಿ, ಎತ್ತು, ಬಿತ್ತು ಇತ್ಯಾದಿಗಳನ್ನು ನಮಗಾಗಿ ನೀಡಿದ ಮಹಾದಾನಿ; ತನ್ನ ಆನಂದದಿಂದ ಉಕ್ಕಿ ಹೊರಹೊಮ್ಮಿದ ಈ ಸೃಷ್ಟಿಯನ್ನೇ ಪ್ರಸಾದ ರೂಪವಾಗಿ ನಮಗಾಗಿ ಅನುಗ್ರಹಿಸಿದ ಮಹಾದಾನಿ ಅವನು — ಎಂಬ ಅನಿಸಿಕೆಯೂ ನಮಗಾಗುತ್ತದೆ. ಆದ್ದರಿಂದ ಆ ಮಹಾದೇವನನ್ನು ನಾವು ಪ್ರಾರ್ಥಿಸಬೇಕು. ಬೇಡಬೇಕು. ಈ ಲೋಕದ ಮಾನವರು ಏನು ಕೊಟ್ಟಾರು, ಏನು ಬಿಟ್ಟಾರು? ಸ್ವಲ್ಪ ಕೊಟ್ಟರೂ ಕಡೆಗೆ ಹಂಗಿಸುವರು! ಆದ್ದರಿಂದ ಬೇಡುವದಾದರೆ, ಆ ದೇವಾಧಿದೇವನನ್ನು, ಆ ಪರಮ ಪ್ರಭುವನ್ನು ಬೇಡು; ನೀ ಬೇಡಿದ್ದನ್ನು ನೀಡ-ಬಲ್ಲವನು ಅವನೊಬ್ಬನೆ.

## ಬೇಡುವ ಕಲೆ

ಪ್ರಾರ್ಥನಾಯೋಗಕ್ಕೂ ಇನ್ನುಳಿದ ಯೋಗಗಳಿಗೂ ಅಂತರವಿದೆ. ಪ್ರಾರ್ಥನಾಯೋಗದಲ್ಲಿ ನಾವು ಸಾಕ್ಷಾತ್ ಆ ಪ್ರಭುಶಕ್ತಿಯನ್ನೇ ಆಹ್ವಾನಿಸಿ, ಅದು ನಮ್ಮ ಜೀವನದಲ್ಲಿ ಇಳಿದು ಬಂದು ನಮಗಾಗಿ ಅಭೂತಪೂರ್ವವಾದ – ಅದ್ಭುತ ಘಟನೆಗಳನ್ನು ಜರುಗಿಸುವಂತೆ ಮಾಡುತ್ತಿದ್ದರೆ, ಉಳಿದ ಯೋಗಗಳಲ್ಲಿ ಪ್ರತ್ಯೇಕ ವ್ಯಕ್ತಿಯು ತನ್ನ ಕೆಲವು ವೈಯಕ್ತಿಕ ಅಂತಃಶಕ್ತಿಗಳನ್ನು ಜಾಗೃತ ಮಾಡಿಕೊಂಡು ಆ ಶಕ್ತಿಗಳ ಮುಖಾಂತರ ಅನೇಕ ಪವಾಡಗಳನ್ನು ಎಸಗುತ್ತಾನೆ. ಎಷ್ಟಾದರೂ ಮಾನವದೇಹದಿಂದ ಒಡಗೂಡಿದ ಯೋಗಿಯಲ್ಲಿ ಜಾಗೃತವಾದ ಅಪಾರ ಶಕ್ತಿಗಳು ಆ ಪ್ರಭುಶಕ್ತಿಯ ಮುಂದೆ ಏನನ್ನು ಮಾಡಬಲ್ಲವು ? ಆದ್ದರಿಂದ ಆ ಪ್ರಭುವನ್ನು ಬೇಡಿರಿ; ಅವನ ಅಪಾರ ಶಕ್ತಿಯು ಇಳಿದು ಬಂದು ನಿಮಗಾಗಿ ಏನು ಬೇಕಾದುದನ್ನೂ ಮಾಡುವದು. ಆದರೆ ಏನನ್ನು ಬೇಡುವದು ? ಬೇಡುವದಾದರೆ ಸಿಕ್ಕ ಸಿಕ್ಕಂತೆ ಬೇಡುವದಲ್ಲ. ಬೇಡುವದೂ ಒಂದು ಕಲೆ. ಆತ್ಮಕಲ್ಯಾಣಕ್ಕೂ ಲೋಕ ಕಲ್ಯಾಣಕ್ಕೂ ಕಾರಣವಾಗಬಲ್ಲುದನ್ನು ಬೇಡಬೇಕು. ಸಂಕುಚಿತ ಮನಸ್ಸಿನ ಅದೂರದರ್ಶಿತ್ವಕ್ಕೊಳಗಾಗಿ, ಚಪಲತೆಯ ಸೆಳವಿಗೆ ಸಿಕ್ಕುಬಿದ್ದು, ನಿರರ್ಥಕವಾದ ನೀರಸವಾದ ನಿರುಪಯುಕ್ತವಾದ ಹಾಸ್ಯಾಸ್ಪದವಾದ ಹೀನವಾದ ಸಂಗತಿಗಳಿಗಾಗಿ ಆ ದೇವನನ್ನು ಕೇಳುವದೇ? ಈಗಾಗಲೇ ಶಾಸ್ತ್ರೀಯ ಸಂಶೋಧನೆಗಳನ್ನೂ ನಾಗರಿಕತೆಯ ಇನ್ನಿತರ ಸಂಗತಿಗಳನ್ನೂ ವಿಸಂಗತ ರೀತಿಯಲ್ಲಿ ಉಪಯೋಗಿಸುತ್ತಿರುವಂತೆ ಆ ಪ್ರಭುಶಕ್ತಿಯ ದುರುಪಯೋಗವನ್ನು ಮಾಡಿದ್ದಾದರೆ, ನಾವು ಎಂದೂ ನೆನೆಯದ ನಿರೀಕ್ಷಿಸದ ಅನರ್ಥಪರಂಪರೆಯೇ ನಮಗೆ ಕಟ್ಟಿಟ್ಟ ಪರಿಣಾಮ! ಶ್ರೀ ನಿಜಗುಣ ಶಿವಯೋಗಿಗಳು ಹೇಳುವಂತೆ ಬೇಡಿಕೆಯಿರಬೇಕು :

" ಬೇಡುವೆನಭವ ನಿಮ್ಮನು ಭವಭವದೊಳು ।
ಮಾಡೆನಗೊಲಿದು ಸುಗುಣಸಂತತಿಯನಿಂತು ॥ ಪ ॥

ಎಡರಡಸಿದ ವೇಳೆಯೊಳು ಧೈರ್ಯವನು ಸಿರಿ–
ವಡೆದು ಜೀವಿಸುವೆಡೆಯೊಳು ವಿನಯವನು ॥
ಕಡುಜವ್ವನದೊಳು ವಿಕೃತಿದೋರದಿಹುದನು
ಪಿಡಿದ ನೇಮವನೆಡೆವಿಡದತಿ ಛಲವನು ॥




ಅಸುವಳಿಯಲು ದೇಹಿಯೆನಲೊಲ್ಲದಧಟನು
ಪುಸಿಯನೆಲ್ಲಿಯು ನುಡಿಯದ ಸತ್ಯವಿದನು ||
ಮಸುಳಿಸದಿಹ ಪುಣ್ಯಮಯ ಕೀರ್ತಿಯನು ಶಾಂತ-
ರೊಸೆದಹುದೆಂದು ಬಣ್ಣಿಸುವ ವರ್ತನವನು ||

ವಿತರಣದೊಡನೆ ಭೋಗಿಸುವರ್ಥದೊದವನು
ಹಿತವಚನವೆ ತೊಡವೆನಿಸಿಪ ದಾನವನು ||
ಶ್ರುತಿಬೋಧನೆಯೊಳುಪರತಿಯಿಲ್ಲದಿಹುದನು
ನುತಿವೆತ್ತ ಕೈಸಾರುತಿಹ ಮನೋರಥವನು ||

ಕೋಪವಂಟದ ತಪವನು ಪರವಧುವಿನ
ರೂಪು ಕಂಡೆಳಸದ ಕರಣವಿಜಯವನು ||
ತಾಪವಡರಿ ಕೆಡಿಸದ ಸಾರ ಸುಖವನು
ಕಾಪಟ್ಯವಿಲ್ಲದಾಶ್ರಮಧರ್ಮರತಿಯನು ||

ಧರೆಯೊಳತ್ಯಧಿಕವೆನಿಸಿಪ ಶಾಂತಿಮತವನು
ಕರುಣ ವಿದ್ಯೆಗಳುಳ್ಳ ಗುರುಭಜನೆಯನು ||
ಪರತರ ಮುಕುತಿದೋರುವ ಶಾಸ್ತ್ರವನು ಕಂತು-
ಹರ ಶಂಭುಲಿಂಗ ನಿಮ್ಮಡಿಯ ಭಕ್ತಿಯನು ||

ಯಾಚನೆಯ ಕ್ರಮವು ಇಲ್ಲಿ ಮಾರ್ಮಿಕವಾಗಿ ಮೂಡಿಬಂದಿದೆ. ಮಾನವನು ಮರಳಿ ಮರಳಿ ಹುಟ್ಟಿಬಂದ ಜನ್ಮಾಂತರಗಳು ಲೆಕ್ಕವಿಲ್ಲದಷ್ಟು. ಅವನು ಕುಡಿದ ತಾಯಿಯ ಮೊಲೆ ಹಾಲು ಸಪ್ತಸಾಗರಗಳಷ್ಟು! ಅವನು ಜನುಮ ಜನುಮಗಳಲ್ಲಿ ಬಿಟ್ಟುಹೋದ ಎಲುವುಗಳು ಹಿಮಾಲಯ ಪರ್ವತದಷ್ಟು! ಇಂತಹ ಪ್ರತಿಯೊಂದು ಜನ್ಮದಲ್ಲಿ ಆ ದೇವನನ್ನು ಬೇಡುವ ಜನ್ಮಸಿದ್ಧವಾದ ಅಧಿಕಾರವನ್ನು ಅವನು ಪಡೆದುಕೊಂಡು ಬರುತ್ತಾನೆ. ಈ ಜೀವನವು ಎಡರು-ತೊಡರುಗಳ ಆಗರ, ಕಷ್ಟ-ನಷ್ಟಗಳ ದುಃಖ-ದುಮ್ಮಾನಗಳ ಸಾಗರ! ಮಾನವನಿಗೆ ಹಸಿವು ತೃಷೆ, ಶೋಕ ಮೋಹ ಇತ್ಯಾದಿ ದ್ವಂದ್ವಗಳು ಎಂದಿನಿಂದಲೂ ಪೀಡೆಯನ್ನು ಕೊಡುತ್ತಲೇ ಇರುತ್ತವೆ. ಈ ದ್ವಂದ್ವಗಳ ಬಡಿದಾಟವಿಲ್ಲದಿದ್ದರೆ

ಅದು ಪ್ರಪಂಚವೇ ಅಲ್ಲ. ಆದರೂ ಈ ಪ್ರಪಂಚದಲ್ಲಿ ಅವನ್ನು ಎದುರಿಸುವ ಧೈರ್ಯ ಬೇಕು. ಆ ಧೈರ್ಯವೇ ಸಕಲ ಸ್ವತ್ತು, ಸರ್ವ ಸಂಪತ್ತು ! ಆಪತ್ತು-ವಿಪತ್ತುಗಳು ಜೀವನದಲ್ಲಿ ಸಂಭವಿಸಿದಾಗ ಈ ಧೈರ್ಯವೆಂಬ ಸಂಪತ್ತು ಬಳಕೆಗೆ ಬರುವದು. ಧೈರ್ಯವಿಲ್ಲದ ಜೀವನದ ಗತಿಯಿಂದೇನು ? ಜೀವನವೇ ಮುಖ್ಯವಲ್ಲ. ಆದರೆ ಆ ಜೀವನದಲ್ಲಿ ತುಂಬಿಕೊಳ್ಳುವ ಧೈರ್ಯವು ಮುಖ್ಯವಾದ ಸಂಗತಿ-ಯಾಗಿದೆ.

ದುಡ್ಡಿದ್ದಾಗ ಸೊಕ್ಕು, ಮದ, ಮಬ್ಬು ಬರದಿರುವದು ಅಪರೂಪ. ದುಡ್ಡುಳ್ಳ ಕಾಲದಲ್ಲಿ ಧರ್ಮದರ್ಶಿ ( Trustee ) ಯಾಗುವ ಬದಲು ದರ್ಪರಾಶಿ-ಯಾಗಿದ್ದಾನೆ ಮನುಷ್ಯನು. ಈ ದುಡ್ಡೇ ದೊಡ್ಡಪ್ಪ. ಇದು ಸಕಲ ಅಧಿಕಾರದ ತಾಯಿ. ಅಧಿಕಾರವು ಮಾನವನಲ್ಲಿ ಕೊಳೆಯುನ್ನುಂಟು ಮಾಡುವದು. ಅಂಕೆ-ಯಿಲ್ಲದ ಅಧಿಕಾರವು ಆ ಮಾನವನನ್ನು ಅಳತೆಯಿಲ್ಲದಷ್ಟು ಹೀನಾಯಗೊಳಿಸು-ವದು. ಆದರೆ ಇದು ನಿಜವಾದ ಜೀವನವಲ್ಲ. 'ವಿನಯ'ವಿದ್ದರೆ ಅದುವೇ ಜೀವನ. ನಡುವಿನಯವೇ ಸದಾಶಿವನ ಒಲುಮೆ. 'ಕಲ್ಲು ಕಲ್ಲುತಾಗಿದಂತೆ ಸೊಲ್ಲು ಬಿರಿಯಾದರೆ, ಅಲ್ಲಿ ನಿಲ್ಲನಯ್ಯಾ ನಮ್ಮ ಅಖಂಡೇಶ್ವರ' ಎಂಬ ಮಾತು-ಗಳು ಸ್ಮರಣೆಯಲ್ಲಿರಬೇಕು.

ಬಿದಿರಲಂದಣವಕ್ಕು, ಬಿದಿರೆ ಸತ್ತಿಗೆಯಕ್ಕು;
ಬಿದಿರಲ್ಲಿ ಗುಡಿಯು ಗೂಡಾರವಕ್ಕು;
ಬಿದಿರಲ್ಲಿ ಸಕಲ ಸಂಪದವೆಲ್ಲವು !
ಬಿದಿರದವರ ಮೆಚ್ಚ ನಮ್ಮ ಕೂಡಲ ಸಂಗಮದೇವ !

ಎಂದು ಹೇಳುವಾಗ ಬಸವಣ್ಣನವರು ಜೀವನದಲ್ಲಿ ವಿನಯದ ಮಹತಿಯು ಬಹಳವಾಗಿದೆ ಎಂಬುದನ್ನು ತೋರಿಸಿಕೊಡುತ್ತಾರೆ.

ಪ್ರಾಯ ಪ್ರಾಪ್ತವಾದಾಗ ಪುರುಷನಲ್ಲಿ ಅನೇಕ ವಿಕಾರಗಳು ತೆರೆತೆರೆಯಾಗಿ ಏಳುತ್ತವೆ. ಸುಮಾರು ೧೬ ರಿಂದ ೩೦ ವರ್ಷಗಳ ನಡುವಿನ ಅವಧಿಯಲ್ಲಿ ಮಾನವನ ಅಂತರಂಗ ಒಂದು ಭೀಕರವಾದ ನರಕಕುಂಡವಂತೆ ಇರುತ್ತದೆ. ಆಗ ಆ ಪ್ರಭುವೇ ಅವನನ್ನು ಪಾರುಮಾಡಬೇಕು, ಕಾಪಾಡಬೇಕು. ಯಾಕಂದರೆ ಆಗ ಕಾಮಪ್ರವೃತ್ತಿಯು ಅತ್ಯಂತ ಜಾಗೃತವಾಗಿರುತ್ತದೆ. ಈ ಕಾಮಪ್ರವೃತ್ತಿಯ

ಆಧಾರದ ಮೇಲೆಯೇ ಫ್ರಾಯಿಡನು ತನ್ನ ಮನೋವಿಜ್ಞಾನ ಶಾಸ್ತ್ರವನ್ನು ನಿರ್ಮಿಸಿದ್ದಾನೆ. ಕೈಕೊಂಡ ನಿಯಮಗಳನ್ನು ಕೊನೆಯವರೆಗೆ ಮುಟ್ಟಿಸುವೆನೆಂಬ ಜಿಗುಟತನಬೇಕು ಮನುಷ್ಯನಿಗೆ.

ಅನಾರಂಭೋ ಹಿ ಕಾರ್ಯಾಣಾಂ ಪ್ರಥಮಂ ಬುದ್ಧಿಲಕ್ಷಣಂ ।
ಆರಬ್ಧಸ್ಯಾಂತಗಮನಂ ದ್ವಿತೀಯಂ ಬುದ್ಧಿಲಕ್ಷಣಂ ॥
ವಿಘ್ನೈಃ ಪುನಃ ಪುನರಪಿ ಪ್ರತಿಹನ್ಯಮಾನಾಃ ।
ಪ್ರಾರಬ್ಧಮುತ್ತಮಜನಾ ನ ಪರಿತ್ಯಜಂತಿ ॥

ಮಾನವನು ತನ್ನ ಜೀವನದುದ್ದಕ್ಕೂ ಗಳಿಸಬೇಕಾದ ಸಂಗತಿಗಳು ನಾಕಷ್ಟಿವೆ. ಅವುಗಳಲ್ಲಿ ಆವನಿಗೆ ಪ್ರಾಣಹೋಗುವ ಪ್ರಸಂಗ ಒದಗಿದರೂ 'ನನಗಿಲ್ಲ, ಕೊಡು' ಎಂದು ಬೇಡಿಕೊಳ್ಳದಿರುವ ಧೈರ್ಯವು ಬೇಕು. ಬೇಡುವದು ಹೇಡಿತನದ ಆದರ್ಶವು; ಮಾಡುವದು ಪರಶಿವನ ಒಲುಮೆಯಹುದು. ಬೇಡಿದರೆ ನೀಡಿದಷ್ಟು ಸಿಗುವದು; ಮಾಡಿದರೆ ಮಾಟಕ್ಕೆ ಸರಿಯಾದುದೆಲ್ಲವೂ ದೊರೆಯುವದು. ಆದ್ದರಿಂದ ಬೇಡಕಲಿಯದೆ, ಬೇಡಿ ಬಾಯಿಯನ್ನು ಹೊಲಸು ಮಾಡಿಕೊಳ್ಳದೆ, ಮಾಡಬಯಸಬೇಕು; ಮಾಡಿ ಕೈಯನ್ನು ಹುಲಸು ಮಾಡಿಕೊಳ್ಳಬೇಕು ಅಸತ್ಯವನ್ನು ಎಲ್ಲಿಯೂ ಯಾವ ಕಾಲಕ್ಕೂ ಬಳಸದೆ ಸತ್ಯವನ್ನೇ ಎದುರಿಟ್ಟು ನಡೆಯಬೇಕು. ಎಂದೆಂದಿಗೂ ಮಾಸದಿದ್ದ ಶುಭ್ರವಾದ ಯಶಸ್ಸನ್ನು ಪಡೆಯು-ಬೇಕು. ಶಾಂತಚಿತ್ತರಾದ ಮಹಾಮಹಿಮರು ಮೆಚ್ಚುವ ನಡತೆಯನ್ನಿಟ್ಟು-ಕೊಳ್ಳಬೇಕು. ಒಳ್ನುಡಿಗಳೇ ಮಾನವನಿಗೆ ಆಭರಣಗಳು. ಅನುಭವದ ಮಾತುಗಳನ್ನು ಆಲಸಿಕೆಯಿಲ್ಲದೆ ಕೇಳಬೇಕು. ಘನವಾದ ಉದ್ದೇಶದಿಂದ ಕೂಡಿದ ಬಯಕೆಯು ಕೈಗೂಡಬೇಕು. ತಪೋನುಷ್ಠಾನ ಮುಂತಾದ ಸಾಧಕ ಜೀವನಕ್ಕೆ ಸಿಟ್ಟು ತರವಲ್ಲ, ಅದು ಅಂಟಿಕೊಳ್ಳದಂತಿರಬೇಕು. ಪರಸ್ತ್ರೀಯರನ್ನು ಕಂಡು ಮನವು ಅಳಿಯಾನೆಗೊಳ್ಳಕೂಡದು. ಅದಕ್ಕಾಗಿ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳಬೇಕು. ಜೀವನದಲ್ಲಿ ಈತಿಬಾಧೆಗಳ ಸೋಂಕಿಗೆ ಈಡಾಗ ದಂತಿರಬೇಕು. ಅದುವೆ ಶ್ರೇಷ್ಠವಾದ ಸುಖಜೀವನ. ಆಶ್ರಮ ಧರ್ಮವನ್ನು ಸರಿಯಾಗಿ ನಡೆಸಬೇಕೆಂಬ ವಂಚನೆಯಿಲ್ಲದ ಲವಲವಿಕೆಯಿರಬೇಕು. ದೇವನನ್ನು ಮೊರೆಹೊಕ್ಕು ಬೇಡಿಕೊಳ್ಳಬೇಕೆಂಬ ಹಂಬಲವುಳ್ಳವರು ಈ ಮಾತುಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.— ಎಂದು ನಿಜಗುಣ ಶಿವಯೋಗಿಗಳ ಬೋಧೆ.

ಮಾನವನು ತನ್ನ ಹಾಗೂ ಮಾನವಸಮಾಜದ ಉನ್ನತಿಯು ಯಾವ ಗುಣ-ಗಳಿಂದ, ಯಾವ ಆಚರಣೆಗಳಿಂದ ಸಾಧ್ಯವೋ ಅವುಗಳನ್ನೇ ದೇವರಲ್ಲಿ ಬೇಡ-ಬೇಕೆಂದು ಹೇಳುತ್ತ, ಕೊನೆಯಲ್ಲಿ 'ಧರೆಯೊಳತ್ಯಧಿಕ ಶಾಂತಿಮತವನು' ಬೇಡಿಕೊಳ್ಳಬೇಕೆಂದು ನಿಜಗುಣ ಶಿವಯೋಗಿಗಳು ನಮೆಲ್ಲರಿಗೆ ಬೋಧಿ-ಸುತ್ತಾರೆ.

ಜಗತ್ತಿನಲ್ಲಿ ಅತ್ಯಮೌಲ್ಯವಾದ ವಸ್ತುವಾವುದು? ಅದು ಶಾಂತಿ! ಇಂದು ಈ ಶಾಂತಿಯು ಕೇವಲ ವೈಯಕ್ತಿಕ ಜೀವನಕ್ಕಷ್ಟೇ ಅಗತ್ಯವಾಗಿರದೆ, ಒಂದು ಕುಟುಂಬ ಜೀವನಕ್ಕೆ ಮಾತ್ರ ಅವಶ್ಯವಾಗಿರದೆ, ರಾಷ್ಟ್ರೀಯ ಜೀವನಕ್ಕೂ ಅಂತರ್ ರಾಷ್ಟ್ರೀಯ ಜೀವನಕ್ಕೂ ಬಿಡಲಾರದ ಅಗತ್ಯವಾಗಿದೆ. ಶಾಂತಿ ಅಧ್ಯಾತ್ಮಜೀವಿಗಳ ಆಹಾರ ಎಂಬ ತಿಳಿವಳಿಕೆ ಒಂದು ಕಾಲಕ್ಕೆ ಇತ್ತು. ಅದು ಕೈಸಾಗದ ಕೈಯಿಂದಾಗದ ಒಬ್ಬವ್ಯಕ್ತಿಯು ಹೊಂದಬೇಕಾದ ವಸ್ತುವೆಂಬ ಭಾವನೆ ಬಹು ಜನರಿಗಿತ್ತು. ಆದರೆ ಜಗತ್ತಿನ ಇಂದಿನ ಪರಿಸ್ಥಿತಿಯಲ್ಲಿ ಶಾಂತಿಯು(ಪಡುವಣದವರಿಗೂ ಮೂಡಣದವರಿಗೂ) ಪ್ರತಿಯೊಬ್ಬರಿಗೂ ಅವಶ್ಯವಾಗಿದೆ. ಶಾಂತಿಯು ಎಲ್ಲಿ ಇರುತ್ತದೆ ಎಂದು ಕೇಳಿದ್ದಕ್ಕೆ ಪ್ರಖ್ಯಾತ ವಿಜ್ಞಾನಿ ಐನ್‌ಸ್ಟನನು ನಿನ್ನಲ್ಲಿಯೆ ಇರುತ್ತದೆ ಎಂದು ಹೇಳಿದನಂತೆ! ಮಂತ್ರದ ಕೊನೆಗೆ 'ಓಂ ಶಾಂತಿಃ ಶಾಂತಿಃ ಶಾಂತಿಃ' ಎಂದು ಹೇಳುವ ಭಾರತೀಯರು ಆ ಶಾಂತಿಯು ಸುಷುಪ್ತಿಯಲ್ಲಿ ಇರುತ್ತದೆಂದು ಹೇಳುತ್ತಾರೆ. ಆ ಸುಷುಪ್ತಿಯಲ್ಲಿ ವೃತ್ತಿಗಳು ಲಯವಾಗುವ ಕಾರಣ ನಿಸರ್ಗದಲ್ಲಿ ಆಗುವ ಶಾಂತಿಯನ್ನು ನಿನ್ನಲ್ಲಿಯೇ ಕಾಣುವಿ ಎಂಬುದೇ ಶಾಂತಿ ಮಂತ್ರದ ಉದ್ದೇಶವಾಗಿದೆ. ಆ್ಯಟಂ ಬಾಂಬು, ಹೈಡ್ರೋಜನ್ ಬಾಂಬು, ಅಂತರಿಕ್ಷ ಕ್ಷಿಪಣಿ ಮುಂತಾದ ವಿಧ್ವಂಸಕ ಶಸ್ತ್ರಗಳ ಶೋಧನೆಯಿಂದ ಇಂದು ಇಡಿಯ ವಿಶ್ವವೇ ಒಂದು ಭೀಕರವಾದ ಪರಿಸ್ಥಿತಿಯಲ್ಲಿನಿಂತಂತಿದೆ. ಹೀಗೆ ಆ ಜಗತ್ತು ಶಾಂತಿಗಾಗಿ ಇಂದು ಬಾಯಿ ಬಿಡುತ್ತಲಿದೆ. ಶಾಂತಿಮತಸ್ಥಾಪನೆಯ ಹೊರತು ಜಗತ್ತಿಗೆ ಉಳಿಗಾಲವಿರುವಂತೆ ಕಾಣುವದಿಲ್ಲ. ಇಲ್ಲಿಯವರೆಗೆ ಈ ವಿಶ್ವಶಾಂತಿಗಾಗಿ ಅನೇಕ ಪ್ರಯತ್ನಗಳು ನಡೆದವು; ಆದರೆ ಅದರಲ್ಲಿ ಒಂದೂ ಫಲಕಾರಿಯಾಗಿಲ್ಲ. ಆ ಪ್ರಯತ್ನಗಳು ಕೇವಲ ಬಾಹ್ಯಸ್ಥಿತಿಯನ್ನು ಸುಧಾರಿಸುವ ದಿಶೆಯಲ್ಲಿ ನಡೆದವು, ನಡೆಯುತ್ತಿವೆ. ಆದರೆ ಶಾಂತಿಯು ಬಾಹ್ಯಸ್ಥಿತಿಯಲ್ಲಿ ಪರಿಣಮಿಸಬಹುದಾದ ಮಾರ್ಪಾಟಿನ ಮೇಲೆ ನಿಂತಿಲ್ಲ. ಅದು ಹೊರಗಿನ ವಸ್ತುಗಳನ್ನೂ ಅವಲಂಬಿ-ಸಿರುವದಿಲ್ಲ. ಎಲ್ಲಿಯವರೆಗೆ ಮಾನವನು ಮಾನವನೆ ಆಗಿ, ಮಾನವ ದೃಷ್ಟಿ-

ಯಿಂದಲೆ ಅದಕ್ಕಾಗಿ ಪ್ರಯತ್ನ ಮಾಡುವನೋ ಅಲ್ಲಿಯವರೆಗೆ ಸ್ಥಾಯಿಯಾದ ಶಾಂತಿಯು ಸಾಧ್ಯವಿಲ್ಲ. ಮಾನವನ ಸ್ವಭಾವವು ಮಾನವ ಸ್ವಭಾವವೇ ಆಗಿದೆ: ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಇಷ್ಟು ಬಿಟ್ಟರೆ ಮತ್ತೇನಿದೆ ಅವನ ಜೀವನದಲ್ಲಿ ? ಮುಖ್ಯ ಘಟಕಗಳಾಗಿದ್ದ ಈ ಅರಿಷಡ್ವರ್ಗವಿಲ್ಲದಿದ್ದರೆ ಇಂದು ಮಾನವ ಜೀವನವೇ ಇಲ್ಲ. ಇವನ್ನು ಇದ್ದಕ್ಕಿದ್ದಂತೆ ಉಪಯೋಗಿಸಿದರೆ ಅದು ಮಾನವ ಜೀವನವೇ ಅಲ್ಲ. ಮಾನವನು ಈಗ ತಾನಿದ್ದ ಸ್ಥಿತಿಯಲ್ಲಿಯೇ ಇದ್ದುಕೊಂಡು ಶಾಂತಿಸ್ಥಾಪನೆಯನ್ನು ಮಾಡಹೊರಟರೆ ಅದು ಸಾಧ್ಯವೇ ? ಇಲ್ಲ, ಎಂದಿಗೂ ಸಾಧ್ಯವಿಲ್ಲ. ಮಾನವ ಸ್ವಭಾವವು ಕೊಂಚಮಟ್ಟಿಗಾದರೂ ದೈವೀಸ್ವಭಾವವಾಗಿ ಮಾರ್ಪಟ್ಟ ಹೊರತು ಸ್ಥಾಯೀ ಶಾಂತಿಯು ಸಿಗಲು ಸಾಧ್ಯವೆ ? ಇದ್ದ ಸ್ವಭಾವದಲ್ಲಿ ಎಷ್ಟೇ ವಿಜ್ಞಾನದ ಪ್ರಗತಿಯಾದರೂ ಅದರಿಂದ ಶಾಂತಿ ಎಂದೂ ಸಿಗುವ ಸಾಧ್ಯತೆಯಿಲ್ಲ. ಇಂಥ ಪರಿವರ್ತನೆಗಾಗಿ ಇಲ್ಲಿ ನಾವು ಆ ಪ್ರಭುಶಕ್ತಿಯನ್ನು ಆಹ್ವಾನಿಸಬೇಕು. ಆ ಪ್ರಭುಶಕ್ತಿಯೇ ಶಾಂತಿಯನ್ನು ಸ್ಥಾಪಿಸಲು ನಮಗೆ ಸಹಾಯ ಮಾಡುವದಲ್ಲದೆ, ಬೇರಾವುದೂ ಮಾಡಲಾರದು. ಪ್ರಾರ್ಥನೆಯಿಂದ ಶಕ್ತಿ ಸಂಪಾದನೆಯಾಗುತ್ತದೆ. ಆ ಶಕ್ತಿ ಸಂಪಾದನೆಗಾಗಿ ಪ್ರಾರ್ಥನೆಯನ್ನು ಮಾಡಬೇಕು. ಈ ಪ್ರಾರ್ಥನಾಯೋಗದಲ್ಲಿ ಆ ಪ್ರಭುಶಕ್ತಿಯನ್ನು ಆಹ್ವಾನಿಸಿ ಈ ಮಹತ್ಕಾರ್ಯವನ್ನು ಮಾಡುವದೇ ಜೀವನದ ಸರ್ವೋತ್ಕೃಷ್ಟವಾದ ಧ್ಯೇಯವಾಗಿದೆ.

## ಪ್ರಾರ್ಥನಾಯೋಗದ ಉದ್ದೇಶ

ಇದೀಗ ಪ್ರಾರ್ಥನಾಯೋಗದ ಮೂಲೋದ್ದೇಶಕ್ಕೆ ನಾವು ಬಂದು ಮುಟ್ಟಿದ್ದೇವೆ. ಪ್ರಾರ್ಥನಾಯೋಗವನ್ನು ಮಾಡುವಾಗ ಅಥವಾ ಮಾಡುವದರಿಂದ ಪ್ರಭುಶಕ್ತಿಯು ಇಳಿದು ಬಂದು ಕಾರ್ಯಮಾಡುತ್ತದೆ. ಇದರಲ್ಲಿ ಪ್ರಾರ್ಥನಾ ಯೋಗದ ಮುಖ್ಯ ಉದ್ದೇಶ ದ್ವಿವಿಧವಾಗಿದೆ : (೧) ಶಾಂತಿ ಪ್ರಸ್ಥಾಪನೆ ಹಾಗು (೨) ಶಕ್ತಿಪ್ರಾಪ್ತಿ. ಶಾಂತಿಯ ಭದ್ರವಾದ ತಳಹದಿಯ ಮೇಲೆ ಶಕ್ತಿಯ ಮಂದಿರವು ಕಟ್ಟಲ್ಪಡಬೇಕು. ಬರಿಯ ಶಕ್ತಿಯೊಂದೇ ಒಳಿತಿಗೂ ಕಾರಣವಾಗ ಬಹುದು, ಕೆಡುಕಿಗೂ ಕಾರಣವಾಗಬಹುದು. ಉಗ್ರ ತಪಸ್ಸಿಗೆ ಫಲವನ್ನು ನೀಡುವ ದೇವನು ಆ ಫಲದ ಉಪಯೋಗದ ವಿಷಯದಲ್ಲಿ ಮಾನವನಿಗೆ ಸ್ವತಂತ್ರವನ್ನು ಕೊಡುತ್ತಾನೆ. ಪ್ರಭುಶಕ್ತಿಯ ಸದುಪಯೋಗದ ಮತಿಯನ್ನು

ಪಡೆದುಕೊಳ್ಳದಿದ್ದರೆ, ತಪಸ್ಸಿಗೆ ಕುಳಿತ ಇಬ್ಬರು ಪ್ರತಿಸ್ಪರ್ಧಿಗಳು ಒಬ್ಬರನ್ನೊಬ್ಬರು ಕೆಡಿಸಲೋಸುಗ ಹಾರೈಸಿ, ಸಿದ್ಧಿಯು ಕೊನೆಗೆ ಒಬ್ಬನು ಇನ್ನೊಬ್ಬನ ಎರಡು ಪಟ್ಟು ಕೇಡನ್ನೇ ಬಯಸಿ, ಒಬ್ಬನು ಒಂದು ಕಣ್ಣನ್ನು ಇನ್ನೊಬ್ಬನು ಎರಡೂ ಕಣ್ಣುಗಳನ್ನು ಕಳೆದುಕೊಂಡ ತೆರನಾಗುವದು. ಹೀಗೆ ಪ್ರಾಪ್ತವಾದ ದೈವೀ ಶಕ್ತಿಯನ್ನು ದುರುಪಯೋಗಿಸಬಾರದು. ಆ ಶಾಂತಿಯನ್ನೊಡಗೂಡಿದ ಶಕ್ತಿಯು ಸದಾ ಒಳಿತನ್ನೇ ಮಾಡೀತೇ ವಿನಾ ಕೆಡುಕನ್ನೆಂದಿಗೂ ಮಾಡಲಾರದು. ರೋಗ ರುಜಿನಗಳನ್ನೂ, ಇನ್ನಿತರ ಬಾಧೆಗಳನ್ನೂ ನಿವಾರಿಸಿಕೊಳ್ಳಲು ಅದನ್ನು ಧಾರಾಳವಾಗಿ ಉಪಯೋಗಿಸಿಕೊಳ್ಳಬಹುದು. ಇದೇನು ತಪ್ಪಲ್ಲ; ಯಾಕೆಂದರೆ 'ಶರೀರಮಾದ್ಯಂ ಖಲು ಧರ್ಮಸಾಧನಮ್'. ವೈಯಕ್ತಿಕ ಸ್ವಭಾವದ ಉತ್ತಮತೆಗಾಗಿ, ಸತ್ಕಾರ್ಯಕ್ಕಾಗಿ, ಅನ್ಯರ ಹಿತಕ್ಕಾಗಿ, ಸಮಾಜ-ಕುಟುಂಬಗಳ ಕಲ್ಯಾಣಕ್ಕಾಗಿ ಪ್ರಾರ್ಥನೆಯ ಕಾಲಕ್ಕೆ ಇಳಿದು ಬರುವ ಪ್ರಭು ಶಕ್ತಿಯನ್ನು ಉಪಯೋಗವನ್ನು ಮಾಡಿಕೊಳ್ಳಬೇಕು.

## ನಿದರ್ಶನಗಳು

ಶಾಂತಿ ಪ್ರಸ್ಥಾಪನೆ ಹಾಗು ಶಕ್ತಿಪ್ರಾಪ್ತಿಗಳು ಪ್ರಾರ್ಥನಾಯೋಗದಿಂದ ಸಾಧ್ಯವಾಗುವದೆಂಬದಕ್ಕೆ ಸಾಕ್ಷಿಯೇನು? ಇದಕ್ಕೇನಾದರೂ ನಿದರ್ಶನಗಳಿವೆಯೆ? ಎಂಬ ಪ್ರಶ್ನೆಗಳು ಮೂಡಿಕೊಳ್ಳುವದು ಸ್ವಾಭಾವಿಕ. ಹಾಗೆ ಸಂಶಯಕ್ಕೊಳಗಾಗುವದು ಎಷ್ಟು ಸಹಜವಾಗಿದೆಯೋ ಅಷ್ಟೇ ಅವರ ಉತ್ತರವೂ ಸುಲಭವಾಗಿವೆ. ವಿಶ್ವದ ಒಂದಿಲ್ಲೊಂದು ಮೂಲೆಯಲ್ಲಿ ಕಾಲಕಾಲಕ್ಕೆ ಜನಿಸಿ ಇಂಥ ಜೀವನವನ್ನು ಸಾಗಿಸಿದ ಮತ್ತು ಸಾಗಿಸುತ್ತಿರುವ ಸಂತರ ಸತ್ಪುರುಷರ ಸಾಧು ಜೀವಿಗಳ ಮಹಾತ್ಮರ ಪುಣ್ಯಕರವಾದ ಜೀವನಗಳೇ ದೈವೀಸ್ವಭಾವದಲ್ಲಿ ಮಾನವಸ್ವಭಾವವು ಪ್ರಾರ್ಥನೆಯಿಂದ ಪರಿವರ್ತನೆಯಾಗುವದಕ್ಕೆ ಸಾಕ್ಷಿಯಾಗಿವೆ. ಮಹಾತ್ಮಾ ಗಾಂಧಿಯವರು ಒಂದೆಡೆ ಪ್ರಾರ್ಥನೆಯ ಮಹತ್ವವನ್ನು ಕುರಿತು ಹೇಳುವಾಗ, 'ಈಶ್ವರ ಪ್ರಾರ್ಥನೆಯು ನನ್ನ ರಕ್ಷಣೆಯನ್ನು ಮಾಡಿತು. ಪ್ರಾರ್ಥನೆಯ ಆಶ್ರಯವನ್ನು ಪಡೆಯದಿದ್ದರೆ ನಾನು ಅದೆಂದೋ ಹುಚ್ಚನಾಗಿ ಹೋಗುತ್ತಿದ್ದೆ. ಅನ್ಯರಂತೆ ಸಾರ್ವಜನಿಕ ಹಾಗು ವೈಯಕ್ತಿಕ ಜೀವನದಲ್ಲಿ ನಾನಾದರೂ ಬಹು ಕಟುವಾದ ಅನುಭವಗಳನ್ನು ಅನುಭವಿಸಬೇಕಾಯಿತು. ಅದರಿಂದಾಗಿ ನನ್ನ ಅಂತರಂಗದಲ್ಲಿ ಕೆಲವು ಸಮಯದ ವರೆಗೆ ಒಂದು ಬಗೆಯ

ನಿರಾಶೆ ಕವಿಯಿತು. ಆ ನಿರಾಶೆಯನ್ನು ದೂರ ಮಾಡುವದರಲ್ಲಿ ನನಗೇನಾದರೂ ಸಫಲತೆ ಉಂಟಾಗಿದ್ದರೆ ಅದು ಕೇವಲ ಪ್ರಾರ್ಥನೆಯಿಂದಲೇ! ಪ್ರಾರ್ಥನೆ-ಯಿಲ್ಲದೆ ಮನಸ್ಸಿಗೆ ನೆಮ್ಮದಿಯಾಗದಂಥ ಒಂದು ಸ್ಥಿತಿಯೂ ನನಗೆ ಪ್ರಾಪ್ತವಾಯಿತು. ದೇವನ ಬಗೆಗೆ ನನ್ನ ನಂಬುಗೆಯು ಕೊಬ್ಬಿ ಕೊನರೊಡೆಯುತ್ತ, ಹಬ್ಬಿ ಹರವರಿಯುತ್ತ ಹೋದಂತೆ ಪ್ರಾರ್ಥನೆಗಾಗಿ ನನ್ನ ಆತುರವು ವಿಸ್ತಾರಗೊಂಡಿತು'— ಎಂದು ಬಹು ಸುಂದರವಾಗಿ ಬಣ್ಣಿಸಿದ್ದಾರೆ.

ಪಾಶ್ಚಿಮಾತ್ಯರಲ್ಲಿಯೂ ಇಂಥ ಉದಾಹರಣೆಗಳಿಗೇನು ಕೊರತೆಯಿಲ್ಲ. ಅಂಥವರಲ್ಲಿ ಒಬ್ಬಿಬ್ಬರ ಹೆಸರನ್ನೂ ಎತ್ತಿಕೊಳ್ಳಬಹುದು. ಜಾರ್ಜ ಮ್ಯುಲರ್ ಎಂಬ ಅಮೇರಿಕೆಯ ಸತ್ಪುರುಷರೊಬ್ಬರ ಕೈಯಲ್ಲಿ ಕಾಸು ಕೂಡ ಇಲ್ಲದೆ ದೊಡ್ಡದೊಂದು ಅನಾಥಾಲಯವನ್ನು ನಡೆಸುತ್ತಿದ್ದಾರೆ. ಪ್ರಭುಶಕ್ತಿಯಲ್ಲಿಯ ತಮ್ಮ ಅಪಾರವಾದ ಅಚಲವಾದ ಶ್ರದ್ಧೆ ಹಾಗು ಪ್ರಾರ್ಥನೆಗಳ ಸಹಾಯದಿಂದ ಅವರು ಎಂಥ ತೊಂದರೆಗಳನ್ನಾದರೂ ಎದುರಿಸುವ ಸಾಮರ್ಥ್ಯ ಪಡೆಯಬಹು-ದಾಗಿದೆ ಎಂಬುದನ್ನು ವಿವರಿಸುತ್ತಾರೆ. ಅವರು "A Venture of Faith" ಎಂಬ ತಮ್ಮ ಗ್ರಂಥದಲ್ಲಿ ಪ್ರಾರ್ಥನೆಯ ಅನೇಕ ಪವಾಡಗಳನ್ನು ಬರೆದಿದ್ದಾರೆ. ಚಾರ್ಲಸ್ ಫಿಲ್‌ಮೋರ ಎಂಬ ಇನ್ನೊಬ್ಬ ಸತ್ಪುರುಷರು ಅಂಗವಿಕಲರು. ಪ್ರಾರ್ಥನೆಯ ಮಹತಿಯನ್ನು ಕಂಡುಕೊಂಡ ಅವರು ಅದರ ಬಲದಿಂದ ಒಂದು ಉತ್ತಮವಾದ ಸಂಸ್ಥೆಯನ್ನು ಕಟ್ಟಿ ಅದನ್ನು ಕೇವಲ ಪ್ರಾರ್ಥನೆಗಾಗಿಯೇ ಮೀಸಲಿರಿಸಿದ್ದಾರೆ. ಯಾರಿಗಾದರೂ ರೋಗರುಜಿನಗಳು ಒದಗಿದ್ದರೆ ಅವರಿಗಾಗಿ ಪ್ರಾರ್ಥನೆಯ ನಂತರ ಪ್ರಸಾದವನ್ನು ಕಳುಹಿಸಿ ಕೊಡುತ್ತಾರೆ; ಅವರ ರೋಗ ವಾಸಿಯಾಗುತ್ತದೆ. ರೋಗವಿಮುಕ್ತರಾದ ಜನರು ನೀಡುವ ಸಹಾಯದಿಂದಲೇ ಈ ಸಂಸ್ಥೆಯು ಬಾಳಿಕೊಂಡು ಬಂದಿದೆ. ಹೀಗೆಯೇ ಪ್ರಾರ್ಥನೆಯ ಪ್ರಭಾವದ ಬಗೆಗಿನ ಇಂಥ ಹಲವಾರು ಉದಾಹರಣೆಗಳನ್ನು ಕೊಡಬಹುದು. ಇವುಗಳಿಂದ ವೈಜ್ಞಾನಿಕ ದೃಷ್ಟಿಯನ್ನು ಪಡೆದ ಪಾಶ್ಚಿಮಾತ್ಯರು ಪ್ರಾರ್ಥನೆಯ ಬಗೆಗೆ ಯಾವ ತರಹದ ಸದ್ಭಾವನೆಯನ್ನು ತಾಳಿರುವರೆಂಬದು ತಿಳಿದು ಬರುತ್ತದೆ.

## ಶ್ರದ್ಧೆ–ಶರಣಾಗತಿ

ಈ ಅನುಪಮವಾದ ಪ್ರಾರ್ಥನಾಯೋಗವನ್ನು ಮಾಡಬೇಕಾದರೆ ಸಾಧಕನಲ್ಲಿರಬೇಕಾದ ಅರ್ಹತೆಯ ಬಗೆಗೆ ಒಂದೆರಡು ಮಾತುಗಳನ್ನು ನಾವು ನೆನಪಿಡ

ಬೇಕು. ಈ ಪ್ರಾರ್ಥನಾಯೋಗದ ಸಾಧಕನಲ್ಲಿ ಎರಡೇ ಎರಡು ಗುಣಗಳಿದ್ದರೆ ಸಾಕು. ಒಂದು ಶ್ರದ್ಧೆ; ಇನ್ನೊಂದು ಶರಣಾಗತಿ ಮನುಷ್ಯನಲ್ಲಿ ಅಪಾರವಾದ ಅಚಲವಾದ ಶ್ರದ್ಧೆಯಿದೆ ಎನ್ನುವವಕ್ಕೆ ತಾಳ್ಮೆಯೇ ಒರೆಗಲ್ಲು! ವಿವತ್ತೇ ತಾಳ್ಮೆಯ ಒರೆಗಲ್ಲು!! ಈ ಸಹನಗುಣವು ಸತ್ವಗುಣದ್ದಾದರೆ, ಆತುರವು ರಜೋಗುಣದ್ದು; ಆಲಸ್ಯ ಹಾಗು ಔದಾಸೀನ್ಯಗಳು ತಮೋಗುಣ ಪ್ರಧಾನ ವಾದವುಗಳು. ಶ್ರದ್ಧೆಯಿದ್ದಲ್ಲಿ ಈ ಸಹನಶಕ್ತಿಯು ಅರ್ಥಾತ್ ಸತ್ವಗುಣವು ವೃದ್ಧಿಂಗತವಾಗುತ್ತದೆ. ಶರಣಾಗತಿಯೆಂದರೆ, ಆ ಪ್ರಭುವಿನಲ್ಲಿ ಸರ್ವವನ್ನೂ ಅರ್ಪಿಸುವದು. ಇದರಿಂದ ದುಡ್ಡು ದುಗ್ಗಾಣಿ, ಹೆಂಡಿರು ಮಕ್ಕಳು ಮುಂತಾದವರನ್ನು ಅವನಿಗೆ ಅರ್ಪಿಸಬೇಕೆಂದರ್ಥವಲ್ಲ! ಅವುಗಳ ಅಗತ್ಯವೂ ಅವನಿಗಿಲ್ಲ!! ಅಹಂಕಾರವನ್ನು ಆತನಿಗೆ ಒಪ್ಪಿಸಬೇಕು. ಇದು ನಿಜವಾದ ಶರಣಾಗತಿ.

ಒಮ್ಮೊಮ್ಮೆ ಸಾಧಕನು ಆ ಪರಮ ಪ್ರಭುವಿನಲ್ಲಿ ಹೀಗೆ ಅಚಲವಾದ ಶ್ರದ್ಧೆ, ಅನುಪಮವಾದ ಶರಣಾಗತಿಯುಳ್ಳವನಾಗಿದ್ದರೂ ತೊಂದರೆಗೀಡಾಗುತ್ತಾನೆ, ತೊಳಲುತ್ತಾನೆ. ಆಗ ಒಮ್ಮೊಮ್ಮೆ ನಿರಾಶಾವೃತನೂ ಆಗುತ್ತಾನೆ. ಆದರೆ ಇದು ಪ್ರಭುವಿನ ಬಗೆಗೆ ನಮಗಿರುವ ಅಜ್ಞಾನದ ಕುರುಹು. ಪ್ರಭುವಿನಲ್ಲಿ ಎರಡು ಶಕ್ತಿಗಳಿವೆ: ಅವನಲ್ಲಿ ಅನುಗ್ರಹಶಕ್ತಿಯು ಇರುವಂತೆಯೇ ನಿಗ್ರಹಶಕ್ತಿಯೂ ಇದೆ. ಪ್ರಾರ್ಥನೆಯ ಕಾಲಕ್ಕೆ ನಾವು ಅದೆಷ್ಟೋ ಬೇಡಿಕೆಗಳನ್ನು ಆ ಪ್ರಭುವಿನೆದುರು ಮಂಡಿಸುತ್ತೇವೆ; ಅವೆಲ್ಲ ಬೇಡಿಕೆಗಳೂ ಕೈಗೂಡುವದಿಲ್ಲ. ನಾವು ಬೇಡಿದ ಬಯಕೆಗಳೆಲ್ಲ ಬಳಿಸಾರಲಿಕ್ಕಿಲ್ಲ; ನಾವು ಕೋರಿದ ಕೋರಿಕೆಗಳೆಲ್ಲ ಕೈಸೇರಲಿಕ್ಕಿಲ್ಲ. ಆಗ ನಾವು ಉದ್ವಿಗ್ನರಾಗುತ್ತೇವೆ. ಆದರೆ ಅದು ತಪ್ಪು. ನಮಗಿಂತಲೂ ಹೆಚ್ಚಾಗಿ ನಮ್ಮ ಹಿತದ ಅರಿವು ಪ್ರಭುವಿಗಿರುತ್ತದೆ. ಅವನ ಶಕ್ತಿಯು ಆಗಮಗಳಲ್ಲಿ ಪ್ರಣೀತವಾದಂತೆ 'ಅಘಟಿತಘಟನಾ ಪಟೀಯಸೀ' ಆಗಿರುತ್ತದೆ. ಅವನು 'ಕರ್ತುಮಕರ್ತುಮನ್ಯಥಾ ಕರ್ತುಂ' ಶಕ್ತನಿದ್ದಾನೆ. ಸರ್ವಸಮರ್ಥನಿದ್ದಾನೆ. ಅಂಥ ಅನಿರ್ವಚನೀಯ ಶಕ್ತಿಯುಳ್ಳ ಪ್ರಭುವು ಏನನ್ನಾದರೂ ತಡೆಹಿಡಿದರೆ, ಅದನ್ನು ನಮ್ಮ ಹಿತಕ್ಕಾಗಿಯೇ ತಡೆಹಿಡಿಯುತ್ತಾನೆ, ಇಲ್ಲಿ ನಾವೇಕೆ ಇಷ್ಟು ಭಯಗ್ರಸ್ತರಾಗಬೇಕು, ಇಷ್ಟು ನಿರಾಶರಾಗಬೇಕು ? ನಾವು ಬೇಡದೆ ಇದ್ದ ಎಷ್ಟೋ ಸಂಗತಿಗಳನ್ನು ಅವನ ಅನುಗ್ರಹಶಕ್ತಿಯು ನಮಗಾಗಿ ಅನುಗ್ರಹನೀಡಬಹುದು. ಅದು ಇನ್ನೂ ಏನನ್ನು ಮಾಡ

ಲರಿಯದು ? ಸಂಕಟಗಳನ್ನು ಸಮಯಾನುಕೂಲ ಸನ್ನಿವೇಶಗಳನ್ನಾಗಿಯೂ ಸೋಲಿನ ಸ್ಥಿತಿಯನ್ನು ಗೆಲುವಿನ ಗುಟ್ಟನ್ನಾಗಿಯೂ, ದುರ್ಬಲತೆಯ ದುರವಸ್ಥೆಯನ್ನು ಸಬಲತೆಯ ಸಿದ್ಧತೆಯನ್ನಾಗಿಯೂ ಆ ಅನುಗ್ರಹಶಕ್ತಿಯು ತನ್ನ ಸ್ಪರ್ಶ ಮಾತ್ರದಿಂದ ಮಾರ್ಪಡಿಸಬಲ್ಲುದು ! ಆ ಪ್ರಭುವಿನ ಅನುಗ್ರಹ ಶಕ್ತಿಯು ನಮಗೆ ಗೆಲುವಿನ ಮೇಲೆ ಗೆಲುವನ್ನು, ಅನುಕೂಲತೆಯ ಮೇಲೆ ಅನುಕೂಲತೆಯನ್ನು ಒದಗಿಸಿ ನಮ್ಮ ಜೀವನವನ್ನು ನಂದನವನವನ್ನಾಗಿ ಮಾಡುತ್ತಿದ್ದಾಗ, ಅಹಂಕಾರಕ್ಕೊಳಗಾಗಿ 'ನಾನೇ ಮಾಡಿದೆ, ನನ್ನಿಂದಾಯಿತು' ಎಂದೆನ್ನದೆ, ವಿನಯದಿಂದ ಪುನಃ ಪುನಃ 'ಹೇ ಪ್ರಭೋ ! ನಿನ್ನ ಅನುಗ್ರಹಶಕ್ತಿಗೆ ಜಯವಾಗಲಿ !' 'O Lord ! Let Thy Grace be glorified !' ಈ ರೀತಿಯಾಗಿ ನುಡಿದು ನಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತಿರಬೇಕು. ಅದರಂತೆ, ಪ್ರಭುವಿನ ನಿಗ್ರಹಶಕ್ತಿಯು ನಮಗೆ ಅಕಲ್ಯಾಣಕಾರಕವಾಗಬಹುದಾದ ಯಾವವೇ ಬೇಡಿಕೆಗಳನ್ನು ಪೂರೈಸದಿದ್ದಾಗ ಅಥವಾ ನಮಗೆ ಮಾತ್ರ ಅನಿಷ್ಟಗಳಾಗಿ ತೋರುವ ಘಟನೆಗಳನ್ನು ನಮ್ಮ ಜೀವನದಲ್ಲಿ ಜರುಗಿಸಿದಾಗ ನಾವು ನಿರಾಶೆಗೆ ಒಳಗಾಗದೆ, 'ಹೇ ಪ್ರಭೋ ನಿನ್ನ ಸಂಕಲ್ಪವಿದ್ದಂತಾಗಲಿ !' 'O Lord, Let Thy Will be done !' ಎಂದು ಅನ್ನುತ್ತಿರಬೇಕು. ಮೊದಲಿನ ಅಂತಃಕರಣದುದ್ಗಾರವು ಅಹಂಕಾರದ ಶರಣಾಗತಿಯನ್ನು ಹೇಗೆ ಮಾಡಬೇಕೆಂಬುದನ್ನು ಒತ್ತಿ ಹೇಳಿದರೆ, ಎರಡನೆಯದು ಪ್ರಭುವಿನಲ್ಲಿಯ ನಮ್ಮ ಶ್ರದ್ಧೆಯಲ್ಲಿ ಅಚಲವಾಗಿ ನಾವು ಹೇಗೆ ನಿಲ್ಲಬೇಕೆಂಬುದನ್ನು ಎತ್ತಿ ತೋರಿಸುತ್ತದೆ. ಮಾನವನು ಎರಡು ಕಣ್ಣುಗಳಿಂದ ನೋಡಿದರೆ ದೇವನು ಮೈತುಂಬ ಕಣ್ಣುಗಳಿಂದ ನೋಡುವನು. ಕಾರ್ಯ ಕೈಗೂಡದಿದ್ದರೆ ಉದ್ವಿಗ್ನಗೊಳ್ಳದೆ ಅದು ಬೇಗನೆ ಕೈಗೂಡಲೋಸುಗ ಆತುರತೆಯನ್ನೂ ತಾಳದೆ ನಿನ್ನ ಅನುಗ್ರಹ, ನಿನ್ನ ನಿಗ್ರಹ ಇದ್ದಂತಾಗಲಿ ಎಂದು ಶ್ರದ್ಧೆ ಶರಣಾಗತಿಗಳೊಡನೆ ಜೀವನ ನೌಕೆಯನ್ನು ನಾಗಿಸಬೇಕು.

## ಪ್ರಾರ್ಥನಾಯೋಗವು ಸಾಮೂಹಿಕವೇ ಏಕೆ?

ಇಂತಹ ಉನ್ನತ ತತ್ವದ ಹಿನ್ನೆಲೆಯಿದ್ದ ಈ ಪ್ರಾರ್ಥನಾಯೋಗವು, ಸಾಮೂಹಿಕವಾಗಿಯೇ ಏಕಿರಬೇಕು ?— ಎಂಬ ಪ್ರಶ್ನೆ ವಿಚಾರಾರ್ಹವಾದುದು. ಇದಕ್ಕೊಂದು ದೃಷ್ಟಾಂತವನ್ನು ಕೊಡಬಹುದು. ಒಂದು ಮನೆತನದ ಹಿರಿಯ

ನಾದ ತಂದೆಯು ಚಾರಿತ್ರ್ಯಸಂಪನ್ನನಿದ್ದುದಕ್ಕಾಗಿ, ಅವನ ಬಗೆಗೆ ಜನರೆಲ್ಲ ಆದರ ಭಾವವುಳ್ಳವರಾಗಿರುತ್ತಾರೆ. ಆದರೆ ಅವನ ಮಕ್ಕಳ ನಡತೆ ಅಷ್ಟೊಂದು ವಿಶ್ವಾಸಕ್ಕೆ ಪಾತ್ರವಾಗಿರುವದಿಲ್ಲ. ಹೀಗಿದ್ದರೂ ತಂದೆಯ ಮುಖ ನೋಡಿ, ಜನರು ಆ ಮನೆಮಂದಿಗೆಲ್ಲ ತಮ್ಮ ಸಹಾಯ–ಸಹಕಾರಗಳನ್ನು ನೀಡುತ್ತಾರೆ. ತಂದೆಗಾಗುವ ಲಾಭ ಮಕ್ಕಳಿಗೆಲ್ಲ— ಅವರು ಪಾತ್ರರಿರದಿದ್ದರೂ–ಆಗುತ್ತದೆ. ಇದು ಲೌಕಿಕದಲ್ಲಿ ನಿಜವಿದ್ದಂತೆ ಪರಮಾರ್ಥದಲ್ಲಿಯೂ ನಿಜವಿದೆ. ಸಾಮೂಹಿಕವಾಗಿ ಪ್ರಾರ್ಥನಾಯೋಗವನ್ನು ಆಚರಿಸುವದರಿಂದ, ಅದರಲ್ಲಿ ಭಾಗವಹಿಸುವ ಒಬ್ಬ ವ್ಯಕ್ತಿಗೆ ಆಗುವ ದೈವೀಕೃಪೆಯ ಲಾಭವು ಉಳಿದವರಿಗೂ ಆಗುತ್ತದೆ. ಎರಡನೆಯದಾಗಿ, ಯಾವನೊಬ್ಬ ಸಾಧಕನು ವೈಯಕ್ತಿಕವಾಗಿ ಎಷ್ಟು ಸಾಧನವನ್ನು ಮಾಡಿದರೂ ಅವನಿಗೆ ಪ್ರಗತಿಯಾಗದಿರುವದು ಅನೇಕ ಸಲ ಅನುಭವಕ್ಕೆ ಬಂದ ಮಾತಾಗಿದೆ. ಇದಕ್ಕೆ ಕಾರಣವು ಅವನ ಕರ್ಮಬಂಧವೇ ಆಗಿದೆ. ಬಹುಜನ್ಮಗಳ ಕರ್ಮಗಳು ಅವನ ಯೋಗಸಿದ್ಧಿಗೆ ಅಡ್ಡಬರುತ್ತವೆ. ಆದರೆ ಗುಂಪುಗೂಡಿ ಯೋಗವನ್ನಾಚರಿಸುವಾಗ ಕೇವಲ ಒಬ್ಬನ ಸುಕೃತ ವಿಶೇಷಕ್ಕಾಗಿ ಪ್ರಭುಶಕ್ತಿಯು ಇಳಿದುಬಂದು ಕಾರ್ಯಮಾಡುವ ಸಂದರ್ಭದಲ್ಲಿ ಆದರ ಲಾಭವು ಸರ್ವರಿಗೂ ಮುಟ್ಟುತ್ತದೆ. ಪ್ರಾರ್ಥನಾಯೋಗವನ್ನು ಸಾಮೂಹಿಕವಾಗಿ ಆಚರಿಸುವದರ ಘನವಾದ ಉದ್ದೇಶ ಮತ್ತು ಮಹತಿ ಇದರಿಂದ ವ್ಯಕ್ತವಾಗುತ್ತದೆ. ಕರ್ಮ ನಿರ್ಮೂಲವಾಗುವದು ಮತ್ತು ತಡೆಯಾದ ಪ್ರಾಕ್ತನ ಕರ್ಮ ಓರೆಯಾಗುವದು— ಇವು ಸಾಮೂಹಿಕ ಪ್ರಾರ್ಥನಾಯೋಗದಿಂದ ಒದಗುವ ಲಾಭಗಳಾಗಿರುತ್ತವೆ.

# (೨)

ಪ್ರಾರ್ಥನೆ, ಸಾಮೂಹಿಕ ಪ್ರಾರ್ಥನೆ, ಪ್ರಾರ್ಥನಾಯೋಗ, ಸಾಮೂಹಿಕ ಪ್ರಾರ್ಥನಾಯೋಗ ಇವುಗಳಲ್ಲಿಯ ಸೂಕ್ಷ್ಮವಾದ ಅಭ್ಯಂತರವನ್ನು ತಿಳಿದುಕೊಂಡು ಕಾರ್ಯಾಚರಣೆಗೆ ಪ್ರವೃತ್ತರಾಗಬೇಕು; ಅಂದರೆ ನಿಶ್ಚಿತವಾದ ಒಂದು ಗುರಿಯು ಸಾಧಿಸುವದು. ಪ್ರಾರ್ಥನೆಯು ಒಂದು ಯೋಗದಲ್ಲಿ ಪರಿಣಮಿಸಬೇಕಾದುದರಿಂದ ಯೋಗಾನುಸಂಧಾನದಲ್ಲಿ ಪಾಲಿಸಬೇಕಾದ ಸಾಮಾನ್ಯ ನಿಯಮಗಳನ್ನು ಇಲ್ಲಿಯೂ ಪಾಲಿಸಬೇಕಾಗುವದು. ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಸ್ನಾನ ಶುಚಿ-ರ್ಭೂತರಾಗಿ ಸಾಮೂಹಿಕ ಪ್ರಾರ್ಥನೆಗಾಗಿ ಆರಿಸಿಕೊಂಡ ಸ್ಥಳದಲ್ಲಿ ಕೂಡಬೇಕಾಗುತ್ತದೆ. ಪ್ರಾರ್ಥನೆಯ ಸ್ಥಳಕ್ಕೆ ಬಂದ ಬಳಿಕ ಮೊದಲು ಕೈಕಾಲು ಮುಖಗಳನ್ನು ತೊಳೆದುಕೊಂಡು ನಿರ್ಮಲವಾಗಬೇಕು. ಸ್ತ್ರೀ–ಪುರುಷರು ಗೊತ್ತು ಮಾಡಿದ ಸ್ಥಳಗಳಿಗೆ ಬಂದು ಪ್ರತ್ಯೇಕವಾಗಿ ಕುಳಿತುಕೊಳ್ಳಬೇಕು. ಚಿಕ್ಕಮಕ್ಕಳು ಸದ್ದುಮಾಡಿ ಪ್ರಶಾಂತ ವಾತಾವರಣವನ್ನು ಕೆಡಿಸಬಾರದೆಂದು ಹಿರಿಯರು ನೋಡಿಕೊಳ್ಳಬೇಕು. ಪ್ರಾರ್ಥನೆ ಪ್ರಾರಂಭವಾದ ಬಳಿಕ ತಡವಾಗಿ ಬಂದವರು ಪ್ರಾರ್ಥನೆಗೆ ತಡೆಯಾಗದಂತೆ, ತಮಗಿಂತಲೂ ಮೊದಲೇ ಬಂದವರಿಗೆ ತೊಂದರೆಯಾಗದಂತೆ ಶಾಂತರೀತಿಯಿಂದ ಬಂದು ನಿಯಮಿಸಿದ ಒಂದು ಸ್ಥಳದಲ್ಲಿ ಕುಳಿತುಕೊಳ್ಳಬೇಕು. ನಡುನಡುವೆ ಯಾರೂ ಗದ್ದಲ ಮಾಡಬಾರದು. ಶುದ್ಧ ಹವೆಗಾಗಿ ಚಿತ್ತಶುದ್ಧಿಗಾಗಿ ಪ್ರಾರ್ಥನೆಯ ಸ್ಥಳದಲ್ಲಿ ಸುಗಂಧ ದ್ರವ್ಯಗಳ ಸೌಮ್ಯ ಧೂಪ ಹಾಕಬೇಕು. ಇದೆಲ್ಲ ಪ್ರಾರ್ಥನೆಯ ಪೂರ್ವ ಸಿದ್ಧತೆಯೆಂದು ತಿಳಿಯೋಣ.

ಎಲ್ಲ ಯೋಗಗಳಲ್ಲಿ ಪ್ರಾರ್ಥನಾಯೋಗವು ಬಹಳ ಸುಲಭವಾದದ್ದು. ಯೋಗ ಸಾಧನೆಗೆ ಕೆಲವು ಆಸನ ಮುದ್ರೆ ಅಧಿದೇವತೆ ಮಂತ್ರ ಜಪ ಇತ್ಯಾದಿಗಳು ಅವಶ್ಯವಿರುವಂತೆ ಈ ಪ್ರಾರ್ಥನಾಯೋಗದಲ್ಲಿಯೂ ಆಸನ ಇತ್ಯಾದಿಗಳನ್ನು ಅವಶ್ಯವಾಗಿ ಆರಿಸಿಕೊಳ್ಳಬೇಕಾಗುತ್ತದೆ. ಅನುಸಂಧಾನ ಕ್ರಮಕ್ಕೆ ಪದ್ಮಾಸ-ನವು ಶ್ರೇಷ್ಠವಾದ ಆಸನವಾಗಿದೆ. ಆದರೆ ಈ ಆಸನ ಹಾಕುವದು ಎಲ್ಲರಿಗೂ ಸಾಧ್ಯವಾಗಲಿಕ್ಕಿಲ್ಲ. ಅದಕ್ಕಾಗಿ ತಮಗೆ ಸುಖದಾಯಕವಾದ ಒಂದು ಆಸನದಲ್ಲಿ– ಅದಕ್ಕೆ ಸುಖಾಸನವೆಂದು ಬೇಕಾದರೆ ಕರೆಯಿರಿ– ಕುಳಿತುಕೊಳ್ಳಬೇಕು.

ಆಸನವನ್ನು 'ತ್ರಿಪುನ್ನತಂ' ಎಂದರೆ ತಲೆ ಎದೆ ಮತ್ತು ನಡ– ಇವು ಮೂರು ಒಂದು ಸರಳ ರೇಷೆಯಲ್ಲಿ ಬರುವಂತೆ ಹಾಕಿರಬೇಕು. ತಲೆಯನ್ನು ಹಿಂದೆ-ಮುಂದೆ ಎಡಕ್ಕೆ-ಬಲಕ್ಕೆ ಬಾಗಿಸಬಾರದು. ಮುದ್ರೆಗಾಗಿ ಬಲಗೈಯನ್ನು ಎಡದ ಕೈಮೇಲೆ ಇಟ್ಟು ಎರಡೂ ಹೆಬ್ಬೆರಳಿನ ತುದಿಗಳನ್ನು ತ್ರಿಕೋಣವಾಗುವಂತೆ ಕೂಡಿಸಿ ಹೊಕ್ಕಳ ಕೆಳಗೆ ಹಿಡಿದು ಸರಳರೇಷೆಯಲ್ಲಿ ಕೂಡ್ರಬೇಕು. ಹೊಕ್ಕಳ ಭಾಗವು ನಾಭಿಚಕ್ರದ ಸ್ಥಾನ; ನಾಭಿಚಕ್ರದಲ್ಲಿ ಅಗ್ನಿತತ್ವವಿರುತ್ತದೆ. ಅಂತೆಯೇ ಊಟ ಮಾಡಿದ ಆಹಾರ ಜೀರ್ಣವಾಗುತ್ತದೆ. ಕೈಬೆರಳುಗಳಲ್ಲಿ ಹೆಬ್ಬೆರಳಿನಲ್ಲಿ ಅಗ್ನಿತತ್ವವು ಇರುತ್ತದೆ. ಹೆಬ್ಬೆರಳುಗಳನ್ನು ಒಂದಕ್ಕೊಂದು ಕೂಡಿಸುವದರಿಂದ ಜಪ ತಪ ಧ್ಯಾನಗಳ ಕಾಲಕ್ಕೆ ಜಾಗೃತವಾಗುವ ವಿದ್ಯುತ್ ದೇಹದಲ್ಲಿಯೇ ಸಂಚಾರವಾಗುತ್ತ ಅದು ಅಲ್ಲಿಯೇ ಉಳಿದು ಶಕ್ತಿಸಂಚಯ-ವಾಗುತ್ತದೆ. ಯೋಗಶಾಸ್ತ್ರದಲ್ಲಿ ೩೨ ವಿವಿಧ ಮುದ್ರೆಗಳನ್ನು ಹೇಳುತ್ತಾರೆ. ಆದರೆ ಈ ಒಂದು ಸುಲಭವಾದ ಮುದ್ರೆಯಿಂದ ಅಗ್ನಿ ತತ್ವದ ಪ್ರಕೋಪ ಇಲ್ಲವೆ ಕೊರ-ತೆಯು ಸಮತೂಕದಲ್ಲಿ ಉಳಿಯುವದು ಮತ್ತು ಅಗ್ನಿಯ ಪ್ರಕೋಪ ಕೊರತೆ ಗಳಿಂದ ಉಂಟಾಗಿರುವ ರೋಗಗಳ ನಿವಾರಣೆಯೂ ಆಗುವದು; ಪ್ರಕೃತಿ ಸ್ವಾಸ್ಥ್ಯದಲ್ಲಿ ಉಳಿಯುವದು. ಪ್ರಾರ್ಥನೆಗೆ ಹುಲ್ಲುಚಾಪೆ, ಕಟ್ಟಿಗೆಯ ಮಣೆ, ಕಂಬಲಾಸನ ಇತ್ಯಾದಿಗಳ ಮೇಲೆ ಆಸನ ಹಾಕಿ ಕುಳಿತುಕೊಳ್ಳಬೇಕು. ಬರಿಯ ನೆಲದ ಮೇಲೆ ಕೂಡ್ರುವದರಿಂದ ಶರೀರದಲ್ಲಿ ಸಂಚಾರವಾಗುವ ವಿದ್ಯುತ್ ಭೂಮಿಯಿಂದ ಹೀರಲ್ಪಟ್ಟು ಅವರ ಪ್ರಯೋಜನವಾಗದೇ ಹೋಗುವದು. ಪ್ರಾರ್ಥನೆಯ ಕಾಲಕ್ಕೆ ಉಡುಪುಗಳು ಮಿತಪ್ರಮಾಣದಲ್ಲಿರಬೇಕು. ಆರೋಗ್ಯ ಅನುಭವಗಳ ದೃಷ್ಟಿಯಿಂದ ಇದನ್ನು ಪಾಲಿಸುವದು ಮಹತ್ವದ ಸಂಗತಿ-ಯಾಗಿರುತ್ತದೆ. ಆ ಕಾಲಕ್ಕೆ ಹಲ್ಲುಗಳ ಮೇಲೆ ಹಲ್ಲುಗಳನ್ನು ಒತ್ತಿ ಕೂಡಿಸದೆ ಶರೀರವನ್ನು ಸಡಲಿಸಿ ಮೂಗಿನ ತುದಿಯ ಕಡೆಗೆ ನಮ ದೃಷ್ಟಿಯನ್ನಿಟ್ಟು ನೋಡುತ್ತಿರಬೇಕು. ಆಗ ಅನಿಮಿಷ ದೃಷ್ಟಿ ಅಂದರೆ ಅರೆತೆರೆದ ಕಣ್ಣು ಉಳ್ಳವರಾಗಿರಬಹುದು. ಕೆಲವರಿಗೆ ಕಣ್ಣುಗಳನ್ನು ಮುಚ್ಚುವ ಅಭ್ಯಾಸವೂ ಇರುತ್ತದೆ. ಅವರು ಹಾಗೆಯೂ ಮಾಡಬಹುದು. ಪ್ರಾರ್ಥನೆಯ ಸಮಯದಲ್ಲಿ ನರ-ದ್ರಾವಕವು ದೇಹದ ತುಂಬಾ ಸಂಚರಿಸುವದು; ಪ್ರಾಣತತ್ವವು ನಾಭಿಯಿಂದ ಜಾಗ್ರತವಾಗಿ ಎಲ್ಲ ಕಡೆಗೂ ವ್ಯಾಪಿಸುವದು. ಬಟ್ಟೆ-ಬರೆಗಳಿಂದ ಇದಕ್ಕೆ ತೊಂದರೆಯುಂಟಾಗಿರಬಾರದು. ಕಾಲು ಬೆಚ್ಚಗಿರುವದೂ ತಲೆಯು ತಂಪಾ

ಗಿರುವದೂ ಆರೋಗ್ಯ ಲಕ್ಷಣವು. ಪ್ರಾರ್ಥನೆಯ ಕಾಲಕ್ಕೆ ಇಳಿದು ಬರುವ ಪ್ರಭು ಶಕ್ತಿಯ ಅನುಗ್ರಹ ಸ್ಪರ್ಶವು ಮೊದಲಿಗೆ ತಲೆಗೆ ಆಗಬೇಕು. ಅದಕ್ಕಾಗಿ ತಲೆಯ ಮೇಲಿನ ತೊಡವನ್ನು ತೆಗೆದಿರಿಸಬೇಕು.

ಸರ್ಪಭೂಷಣ ಶಿವಯೋಗಿಗಳು ಬ್ರಹ್ಮನ ಲಕ್ಷಣವನ್ನು ವಿವರಿಸುತ್ತ 'ಅವರವರ ಮನ ಒಲಿದುದೇ ಬ್ರಹ್ಮ, ಸುವಿವೇಕಿಗಳಿಗೆ ಆತ್ಮತತ್ವವೇ ಬ್ರಹ್ಮ, ಯೋಗಿ-ಗಳಿಗೆ ನಾದ ಬಿಂದು ಕಳೆಯೇ ಬ್ರಹ್ಮ' ಎಂದು ತಿಳಿಸುತ್ತಾರೆ. ಆತ್ಮ ಸಾಕ್ಷಾತ್ಕಾರಕ್ಕಾಗಿ ಮೂರು ಮುಖ್ಯ ಮಾರ್ಗಗಳುಂಟು; ಅವು ಭಕ್ತಿಮಾರ್ಗ, ಜ್ಞಾನ-ಮಾರ್ಗ, ಕರ್ಮಮಾರ್ಗ ಎಂದು- ಯಾರಾದರೂ ಕೂಡಲೆ ಹೇಳಬಹುದು. ಆದರೆ ಯೋಗಮಾರ್ಗದ ಕ್ರಮವೇ ಬೇರೆ. ಅಲ್ಲಿಯೂ ಆತ್ಮಸಾಕ್ಷಾತ್ಕಾರದ ಗುರಿಯೇ ಪ್ರಾಮುಖ್ಯವಾಗಿರುತ್ತದೆ. ಯೋಗಿಗಳು ಇದನ್ನು ನಾದ-ಬಿಂದು-ಕಳೆಗಳ ಅನುಸಂಧಾನದಿಂದ ಸಾಧಿಸುವರು. ಈ ಅನುಸಂಧಾನ ಕ್ರಮದಿಂದ ಕುಂಡಲಿನಿ ಜಾಗ್ರತವಾಗಿ ಅದರಿಂದ ಅಪಾರ ಶಕ್ತಿ ಸಂಪನ್ನವಾಗುವದು, ಅನು-ಪಮವಾದ ಆನಂದವೂ ಉಂಟಾಗುವದು. ಪ್ರಾರ್ಥನಾಯೋಗವು ನಾದಾನು ಸಂಧಾನಕ್ಕೆ ಸಂಬಂಧಪಟ್ಟಿರುತ್ತದೆ. ಪ್ರಾರ್ಥನಾಯೋಗದಲ್ಲಿ ಮಂತ್ರೋ-ಚ್ಚಾರಣೆಯು ಬಹಳ ಮಹತ್ವದ್ದಾಗಿರುತ್ತದೆ. ಮಂತ್ರವು ಶಬ್ದಗಳ ಸಮೂಹದಿಂದ ಕೂಡಿಕೊಂಡಿರುತ್ತದೆ. ಶಬ್ದಗಳನ್ನು ಮಾತ್ರಾಬದ್ಧವಾಗಿ ಅನ್ನಬೇಕು. ಮಾತ್ರೆಗಳನ್ನು ಒಂದು ಸರಿಯಾದ ಕ್ರಮದಲ್ಲಿ ಅನ್ನುತ್ತಿದ್ದರೆ ಅದು ಮಂತ್ರವೆನಿಸುವದು, 'ಮನನಾತ್ ತ್ರಾಯತೆ ಇತಿ ಮಂತ್ರಃ' ಎಂದಿರುವುದರಿಂದ ಮಂತ್ರದಿಂದ ಮನನ ಸಾಮರ್ಥ್ಯ ಬೆಳೆಯಬೇಕು. ಮನಸ್ಸು ಒಂದೆಡೆಗೆ ನಿಲ್ಲದೆ ಯಾವಾಗಲೂ ಏನಾದರೊಂದನ್ನು ಕುರಿತು ಆಲೋಚನೆ ಮಾಡುತ್ತಿರುತ್ತದೆ. ಇದಕ್ಕೆ ಪ್ರತಿಯಾಗಿ ಅದು ಪ್ರಭುಶಕ್ತಿಯನ್ನು ಧ್ಯಾನ ಮಾಡುತ್ತಿರಬೇಕು. ಅಲ್ಲ-ಸಲ್ಲದ ಆಲೋಚನೆ ವಿಚಾರಗಳಿಂದ ಬಿಡುಗಡೆಯನ್ನುಂಟುಮಾಡುವದು ಯಾವುದಿದೆಯೋ ಅದು ಮಂತ್ರವಾಗಿರುವದು. ಮನಸ್ಸಿನಲ್ಲಿ ಮೂಡುವ ಚಿತ್ತ ವಿಕ್ಷೇಪದಿಂದ ಬಿಡುಗಡೆ ಯಾವುದರಿಂದಲೋ ಅದು ಮಂತ್ರವಾಗುವದು. 'ಮಾ' ಶಬ್ದದಿಂದ ಮಾತ್ರೆ ಎಂಬ ಪದವು ಹುಟ್ಟಿಕೊಂಡು ಅಳತೆ ಎಂಬ ಅರ್ಥವನ್ನು ಸೂಚಿಸುವದು. ಆದ್ದರಿಂದ ಮಂತ್ರವನ್ನು ಕ್ರಮಬದ್ಧವಾಗಿ ತಾಳ ಲಯ ಬದ್ಧವಾಗಿ ಅನ್ನಬೇಕು. ಅವನ್ನು ವೇಗವಾಗಿಯೂ ಅನ್ನಬಾರದು ಬಹಳ ಸಾವಕಾಶವಾಗಿಯೂ

ಅನ್ನಬಾರದು (ನ ದೃತಂ ನ ವಿಲಂಬಿತಂ.) ಮಂತ್ರವು ಉಚ್ಚಾರಣೆಯ ಕ್ರಮಕ್ಕನು ಗುಣವಾಗಿ ವಾಚಕ, ಉಪಾಂಶ ಮತ್ತು ಮಾನಸಿಕವೆಂದು ಮೂದೆರನಾಗಿರು-ವದು. ಕೆಲವರು ಮಂತ್ರವನ್ನು ಧ್ವನಿ ತೆಗೆದು ಅನ್ನುವರು, ಇದು ವಾಚಕ ಮಂತ್ರ ಜಪವು. ಕೆಲವರು ಅದನ್ನು ತುಟಿಗಳಲ್ಲಿ ಮಾತ್ರ ಅನ್ನುವರು, ಇದಕ್ಕೆ ಉಪಾಂಶ ಎಂದು ಹೆಸರು. ಇನ್ನೂ ಕೆಲವರು ಮನಸ್ಸಿನಲ್ಲಿಯೇ ಮಂತ್ರಜಪ ಮಾಡುವರು, ಇದಕ್ಕೆ ಮಾನಸಿಕ ಜಪವೆಂಮ ಹೆಸರು. ಮಂತ್ರೋಚ್ಚಾರಣೆ-ಯಿಂದ ನಿಸರ್ಗದಲ್ಲಿ ಕಂಪನಗಳು (Vibrations) ಹುಟ್ಟಿ ಆಕಾಶ ತತ್ವವನ್ನು ಅಲ್ಲೋಲಗೊಳಿಸುವವು, 'ಶಬ್ದ ಗುಣಂ ಆಕಾಶಂ' ಎಂದಿರುವದರಿಂದ. ಶ್ರೀರುದ್ರ ಮಂತ್ರ ಪಠಣದ ರಹಸ್ಯವನ್ನಿಲ್ಲಿ ಜ್ಞಾಪಿಸಿಕೊಳ್ಳಬೇಕು. ಆಗ ಅಂತರಿಕ್ಷದಲ್ಲಿ ಅವ್ಯಕ್ತವಾದ ಅಗೋಚರವಾದ ಸೂಕ್ಷ್ಮ ಶಕ್ತಿಗಳು ಚೇತನಗೊಂಡು ಬಂದು ಸಹಾಯಕ್ಕಾಗಿ ನಿಲ್ಲುವವು, ಸಹಾಯವನ್ನು ನೀಡುವವು; ಆನಂದವನ್ನೂ ಬೀರುವವು. ಕೇಳದಿದ್ದ ಧ್ವನಿ ಕೇಳಿಬರುವದು, ಕಾಣದೆ ಇದ್ದುದು ಕಾಣುವದು ಕತ್ತಲೆಯಲ್ಲಿ ಪ್ರಕಾಶವೂ ತೋರುವದು. ಎಂದರೆ ನಾದ ಬಿಂದು ಕಳೆಗಳು ಸಾಧಿಸುವವು.

ಮಂತ್ರದಲ್ಲಿಯ ಮಾತ್ರೆಗಳ ಮಹತ್ವವೇನು ? ಶಬ್ದಗಳು ನಾದ ಬ್ರಹ್ಮನ ಸ್ವರೂಪವನ್ನು ತಿಳಿಸುತ್ತವೆ. ಪ್ರಪಂಚದಲ್ಲಿ ಜಾಗ್ರದ ವ್ಯವಹಾರವೆಲ್ಲ ಶಬ್ದ ದಿಂದಲೇ ಸಾಗಿದೆ. ಸ್ವಪ್ನದಲ್ಲಿಯೂ ಶಬ್ದಗಳ ವ್ಯವಹಾರ ನಡೆದಿರುವದನ್ನು ಮನಗಾಣಬೇಕು. ಸುಷುಪ್ತಿಯಲ್ಲಿ ಶಬ್ದಗಳ ಇಂತಹ ವ್ಯವಹಾರವಿಲ್ಲ; ಆದರೆ ಅಲ್ಲಿ 'ಸುಂಯಿ' ಗುಡುವ ನಾದವು ಶ್ವಾಸದ ಮೂಲಕ ಎಡೆಬಿಡದೆ ನಡೆದಿರು ತ್ತದೆ. ಈ ನಾದವು ಅಸ್ಪಷ್ಟವಾದ ಶಬ್ದದ ವ್ಯವಹಾರವನ್ನೇ ವ್ಯಕ್ತಗೊಳಿಸುತ್ತದೆ. ತುರೀಯದಲ್ಲಿ ಮಾತ್ರ ಶಬ್ದದ ವ್ಯವಹಾರವೆಲ್ಲ ಅಡಗುವದೆಂದು ದಾರ್ಶನಿಕರೂ ಅನುಭಾವಿಗಳೂ ಹೇಳುತ್ತಾರೆ. ಸಪ್ಪಳವೆಲ್ಲವೂ ಸಂಗೀತವಾಗುವದಿಲ್ಲ. ತಾಳ ಲಯಬದ್ಧವಾದ ನಾದವೇ ಸಂಗಿತವಾಗುವದು. ಅದರಂತೆ ಜಾಗ್ರ ಸ್ವಪ್ನ ಸುಷುಪ್ತಿಗಳಲ್ಲಿಯ ಶಬ್ದದ ವ್ಯವಹಾರವೆಲ್ಲ ಮಂತ್ರವಾಗುವದಿಲ್ಲ. ಆ ವ್ಯವಹಾರ ದಲ್ಲಿ ತಾಳಲಯ ಬದ್ಧವಾದ ಶಬ್ದಗಳ ಬಳಕೆ ನಡೆದರೆ ಮಂತ್ರಾನುಸಂಧಾನ-ದಿಂದೊಡಗೂಡಿದ ಜೀವನ ಸಾಗಿದೆಯೆನ್ನಬೇಕು. ಮಾನವನ ಶ್ವಾಸೋಚ್ಛ್ವಾಸ ದಲ್ಲಿ 'ಹಂ ಸಂ' ಮಂತ್ರೋಚ್ಚಾರಣೆ ಸ್ವಾಭಾವಿಕವಾಗಿ ನಡೆದೇ ಇರುವದು. ಈ 'ಹಂಸಂ' ಮಂತ್ರದಿಂದ 'ಓಂ'ಕಾರವು ಜನಿಸುವದು. ಈ 'ಓಂ'ಕಾರದ ವಿಕೃತ

ಸ್ವರೂಪವೇ ಶಬ್ದ. 'ತಜ್ಜಪಂ ತದರ್ಥ ಭಾವನಂ' ಎಂದಿರುವದರಿಂದ ಪರಮಾತ್ಮನ ಹೆಸರನ್ನು ಸೂಚಿಸುವ ಈ 'ಓಂ'ಕಾರ ಮಂತ್ರ ಜಪದಿಂದ ಪರಮಾತ್ಮನ ಸ್ವರೂಪವನ್ನರಿತು ಆ ಸ್ವರೂಪವೇ ತಾವಾಗುವರು. ತಾಳ ಬದ್ಧವಾಗಿರದ ಶ್ವಾಸವು ಕ್ಷೇಮಕರವಲ್ಲ. ಅಲ್ಪಾಯುಗಳಾಗಲು ಶ್ವಾಸದಲ್ಲಿ ತಾಳ ತಪ್ಪಿದುದೇ ಕಾರಣವಾಗಿದೆ. ತಾಳಬದ್ಧವಾಗಿದ್ದರೆ ನೂರಾರು ವರ್ಷಗಳ ವರೆಗೆ ಬಾಳಬಲ್ಲರೆಂಬುದನ್ನು ಯೋಗಿಗಳ ಚರಿತ್ರೆಯಿಂದ ಕಾಣಬಹುದು. ವ್ಯಕ್ತಿಗಳಲ್ಲಿ ಹೇಗೋ ಹಾಗೆಯೇ ನಿಸರ್ಗದಲ್ಲಿಯೂ ತಾಳ ತಪ್ಪಿದೆ. ಇದರ ಕಟುವಾದ ಅನುಭವವು ದೇಶ ದೇಶಗಳಲ್ಲಿ ವ್ಯಕ್ತವಾಗಹತ್ತಿರುತ್ತವೆ. ನಿಸರ್ಗದಲ್ಲಿಯೂ ವ್ಯಕ್ತಿಯಲ್ಲಿಯೂ ತಾಳಬದ್ಧವಾದ ಸ್ಥಿತಿಯು ತೋರುವದಕ್ಕಾಗಿ ಪ್ರಯತ್ನ ಬೇಕು, ಪ್ರಾರ್ಥನಾಯೋಗದ ಮೂಲಕವಾಗಿ ಆ ಅಪಾರ ಪ್ರಯತ್ನ ನಡೆಯಬೇಕು.

ರಾಷ್ಟ್ರೀಯ ಐಕ್ಯತೆಗೆ ಭಂಗವನ್ನೊಡ್ಡಿದ ಕಾರಣಗಳಲ್ಲಿ ವೈಯಕ್ತಿಕ ಇಲ್ಲವೆ ಪ್ರತ್ಯೇಕತಾಭಾವನೆಯು ಪ್ರಬಲವಾಗಿದೆ ಎಂದು ತಿಳಿಸಿದೆಯಷ್ಟೆ! ಪ್ರಾರ್ಥನಾಯೋಗದಲ್ಲಿ ಬೆರಿಸಿದ ಐದು ಮೆಟ್ಟಲುಗಳಲ್ಲಿ ಒಂದು ವೈಜ್ಞಾನಿಕ ದೃಷ್ಟಿ ಬೆರೆತು ಈ ಪ್ರತ್ಯೇಕತಾಭಾವನೆಯ ನಿವಾರಣೋಪಾಯವನ್ನು ಕಾಣಲಾಗಿದೆ. ನಮ್ಮ ನಾಡಿನ ಜೀವನದಲ್ಲಿ ಸಂಪ್ರದಾಯ ಸಮಯಭೇದ ಬೆಳೆದಂತೆ ಪ್ರತ್ಯೇಕತಾಭಾವನೆಯು ವಿಪುಲವಾಗಿ ಬೆಳೆದು ರಾಷ್ಟ್ರೀಯ ಐಕ್ಯತೆಯೇ ಅಡಗಿ ನೂರಾರು ಜಾತಿ ಮತಗಳೂ ಕುಲ-ಗೋತ್ರಗಳೂ ಪಕ್ಷ-ಪಂಗಡಗಳೂ ತಾಂಡವ ವಾಡಿ ಸಂಕುಚಿತ ವೃತ್ತಿಯನ್ನು ಬೆಳೆಸಿರುತ್ತವೆ. ಇಂಥ ಪರಿಸ್ಥಿತಿಯಲ್ಲಿ ಪ್ರಾರ್ಥನಾಯೋಗವು ಹೊಸದೊಂದು ಸಂಪ್ರದಾಯವಾಗದಂತೆ ಎಚ್ಚರಪಡಬೇಕಾಗಿದೆ. ಯಾವ ಸಂಪ್ರದಾಯವಿದ್ದರೂ ತಮ್ಮಲ್ಲಿ ಪ್ರತ್ಯೇಕತಾ ಭಾವನೆ ಬೇರೂರದಂತೆ ನೋಡಿಕೊಳ್ಳುವದು ರಾಷ್ಟ್ರೀಯರಾದ ನಮ್ಮ ಕರ್ತವ್ಯ; ಸಹ ಜೀವನದ ಸಿದ್ಧಾಂತದಲ್ಲಿ ಈ ರಹಸ್ಯವಡಗಿರುತ್ತದೆ. ಇಂದು ಸಹ ಜೀವನ ತತ್ವವನ್ನು ಆಚರಣೆಯಲ್ಲಿ ತರದಿದ್ದರೆ ರಾಷ್ಟ್ರೀಯ ಬಾಳುವೆ ಸಾಗಿಸಿಕೊಂಡು ಹೋಗಲು ಸಾಧ್ಯವೇ ಇಲ್ಲ. ಪ್ರಾರ್ಥನಾಯೋಗದ ಈ ಹೊಸ ಪ್ರಯೋಗದಲ್ಲಿ ರಾಷ್ಟ್ರದ ಐಕ್ಯಜೀವನ ಸಂಘಟನೆಗಳ ಸಂವರ್ಧನೆಗೆ ಸಾಕಷ್ಟು ಅವಕಾಶವನ್ನು ನೀಡುವ ಯತ್ನ ಮಾಡಲಾಗಿದೆ.

ಪ್ರಾರ್ಥನಾಯೋಗದ ಐದು ಮೆಟ್ಟಲುಗಳಲ್ಲಿ ಮೊದಲನೆಯದಾದ 'ಓಂ'ಕಾರ ನಿನಾದದಿಂದ ವಾತಾವರಣ ಶುದ್ಧಿಗೊಳ್ಳಬೇಕು. ಪ್ರಾರ್ಥನೆಗೆ

ಅಂತರಾಯವಾಗುವ ಸಂಗತಿಗಳೆಲ್ಲ ಇದರಿಂದ ಓರೆಯಾಗಲಿ ಎಂದೇ ಈ ಮೆಟ್ಟಲಿನಲ್ಲಿ ಓಂಕಾರ ನಾದವನ್ನುಂಟುಮಾಡಬೇಕು. ಇದರಲ್ಲಿ ಪಠಿಸುವ 'ಹೇ ಪ್ರಭೋ ಪ್ರಸೀದ 'ಓಂ' ಎಂಬ ಮಂತ್ರವು ಯಾವುದೊಂದು ಕುಲ-ಜಾತಿ-ಮತ ಪಂಥದ ಇಲ್ಲವೆ ಗೋತ್ರ ಸೂತ್ರದ ಸಂಕೇತವಾಗಿರದೆ ಎಲ್ಲರ ಪಠನೆಗೂ ಅನುಕೂಲಿಸುವಂಥದಿರುತ್ತದೆ. ಎಷ್ಟು ಸಲವಾದರೂ, ಎಷ್ಟು ಅವಧಿಯವರೆಗಾದರೂ ಇದನ್ನು ಪಠಿಸಬಹುದು. ಆದರೆ ಅದರಲ್ಲಿ ಒಂದು ಕ್ರಮವಿರಬೇಕು.

ಎರಡನೆಯ ಮೆಟ್ಟಲಿನಲ್ಲಿ ಮೌನಧ್ಯಾನದಲ್ಲಿ ಭಾವಶುದ್ಧಿಯೇ ಗುರಿಯಾಗಿರುತ್ತದೆ. ಆ ಕಾಲಕ್ಕೆ ಪ್ರಭುವು ಸರ್ವ ವ್ಯಾಪಕನಾಗಿದ್ದಾನೆ, ಅವನು ಸರ್ವಜ್ಞನಾಗಿದ್ದಾನೆ, ಸರ್ವ ಕರ್ತೃತ್ವ ಶಕ್ತಿಯುಳ್ಳವನಾಗಿದ್ದಾನೆ. ಅವನು ಪರಂಜ್ಯೋತಿ ಸ್ವರೂಪನಾಗಿದ್ದು ಅವನು ನನ್ನೊಳಗೂ ವಾಸಮಾಡಿಕೊಂಡಿದ್ದಾನೆ– ಎಂಬ ಅನನ್ಯ ಚಿಂತನೆ ಇರಬೇಕು. ಹೀಗೆ ಧ್ಯಾನಕ್ಕೆ ತೊಡಗಿದಾಗ ಮನಸ್ಸು ಒಂದೆಡೆಗೆ ನಿಲ್ಲದೆ ಅತ್ತಿತ್ತ ಸುತ್ತೆಲ್ಲ ಸುಳಿದಾಡಬಹುದು; ಮನಸ್ಸಿನಲ್ಲಿ ಅಲ್ಲಸಲ್ಲದ ಕ್ರೂರ ಕುಹಕ ವಿಚಾರಗಳೂ ಬರಬಹುದು. ಇವಕ್ಕೆ ಬೆದರ ಕೂಡದು. ಮನಸ್ಸಿನಲ್ಲಿ ಮೂಡುವ ಆಲೋಚನೆ ವಿಚಾರಗಳನ್ನು ಹೊಡೆದೋಡಿಸಲಿಕ್ಕೆ ಹಾಗು ಅವು ಬರಬಾರದೆಂದು ಗುದ್ದಾಡಲಿಕ್ಕೆ ಯತ್ನಿಸಿದರೆ ಅವು ಇನ್ನೂ ವಿಕಾರಗೊಂಡು ಕರಾಳವಾಗಿ ಕಾಣಿಸಿಕೊಳ್ಳುತ್ತವೆ. ಧ್ಯಾನದಲ್ಲಿ ಹಟಮಾರಿ ಮನಸ್ಸಿಗೆ ಶಿಕ್ಷಣ ಕೊಡಬೇಕಾಗಿದ್ದುದರಿಂದ ತಾಳ್ಮೆ ವಹಿಸಬೇಕು. ಇಷ್ಟು ದಿವಸಗಳ ವರೆಗೆ ಅತಿಥಿಗಳೆಂದು ಅಂಥ ವಿಚಾರಗಳಿಗೆ ನಾವು ಆಸ್ಪದವನ್ನೇ ಕೊಡುತ್ತ ಬಂದಿದ್ದೇವೆ. ನಮ್ಮನ್ನು ಅಂಡಲೆಯಲು ಅವೂ ಒಂದು ಅಧಿಕಾರವನ್ನೇ ಪಡೆದಿರುತ್ತವೆನ್ನಿರಿ. ಆದರೆ ನಮ್ಮ ನಮ್ಮ ಮನೆಗಳಿಗೆ ಬರುತ್ತಿದ್ದವರ ವಿಷಯದಲ್ಲಿ ನಮಗೆ ತಿರಸ್ಕಾರವುಂಟಾದರೆ ಅವರನ್ನು ನಾವು ಹೇಗೆ ಉಪೇಕ್ಷಿಸುವೆವೊ, ಅವರ ಬಗೆಗೆ ನಾವು ಹೇಗೆ ಅನಾದರವನ್ನು ತಾಳುವೆವೊ ಹಾಗೆಯೇ ಅತಿಥಿಗಳಾಗಿ ಬಂದು ತೊಂದರೆಪಡಿಸುತ್ತಿರುವ ಈ ವಿಚಾರಗಳ ಬಗೆಗೆ ನಮ್ಮ ಭಾವನೆಯಾಗಬೇಕು. ಪಾತಂಜಲಿಋಷಿಯು ಯೋಗಸೂತ್ರಗಳಲ್ಲಿ 'ವಿತರ್ಕ ಬಾಧನೆ ಪ್ರತಿಪಕ್ಷ ಭಾವನಮ್' ಎಂದು ಹೇಳಿರುವಂತೆ ವಿಪರೀತ ಭಾವನೆಗಳು ಹುಟ್ಟಿಕೊಂಡಾಗ, ಅವು ಅಂಡಲೆದು ತಿಕ್ಕಿ ಮುಕ್ಕುವಾಗ ಅವುಗಳ ವಿರುದ್ಧವಾದ ಭಾವನೆಗಳನ್ನು ತಾಳಬೇಕು ಇಲ್ಲವೆ ಅಂಥ ಸದ್ಭಾವನೆ ತಳೆದ ಸತ್ಪುರುಷರ ಧ್ಯಾನಮಾಡಬೇಕು ಎಂವರೆ

ವಿತರ್ಕವು, ವಿಕಾರಗಳು ತಾವಾಗಿಯೇ ನಷ್ಟವಾಗುವವು. ಅಭ್ಯಾಸದಿಂದ ಮನಸ್ಸಿಗೆ ಶಿಕ್ಷಣ ಕೊಡಬೇಕೆಂಬ ಮಾತನ್ನು ಮರೆಯಕೂಡದು.

ಪ್ರಾರ್ಥನಾಯೋಗದ ಮೂರನೆಯ ಮೆಟ್ಟಿಲಿನಲ್ಲಿ ಪ್ರಭುಶಕ್ತಿಯ ಆಹ್ವಾನ ಮಾಡುವದಿರುತ್ತದೆ. ಅದಕ್ಕಾಗಿ 'ಹೇ ಪ್ರಭೋ ಪ್ರಸೀದ ಓಂ' ಎಂಬ ಮಂತ್ರವನ್ನು ತಾಳ ಲಯ ಬದ್ಧವಾಗಿ ನಿರ್ದಿಷ್ಟ ಸಂಖ್ಯೆ ಇಲ್ಲವೆ ನಿರ್ದಿಷ್ಟ ಧಿಯ ವರೆಗೆ ಜಪಿಸಬೇಕಾಗುವದು. ಆ ಶಕ್ತಿ ಇಳಿದು ಬರುವದೆಂಬುದಕ್ಕೆ ಸಾಕ್ಷಿಯೇನು ಎಂದು ಕೇಳಬಹುದು. ಇದಕ್ಕೆ ಅನೇಕ ಸಾಕ್ಷ್ಯಗಳನ್ನು ಕೊಡಬಹುದಾದರೂ ಎರಡು ಮುಖ್ಯ ಸಂಗತಿಗಳನ್ನು ಮರೆಯಬಾರದು. ಅಲ್ಲಿ ಒಂದು ಪ್ರಕಾಶ ತೋರುವದು ಮತ್ತು ಇನ್ನೊಂದು ಆನಂದ ತಲೆದೋರುವದು. ಪ್ರಕಾಶವು ಎಲ್ಲರ ಕಣ್ಣಿಗೆ ಕಾಣದಿದ್ದರೂ, ಅಂತರಿಂದ್ರಿಯವು, ಸ್ಫುರಣಶಕ್ತಿಯು ಜಾಗ್ರತವಾದವರ ಇಲ್ಲವೆ ಜಾಗ್ರತವಾಗುವ ಕ್ರಮದಲ್ಲಿರುವ ಕೆಲವರ ಕಣ್ಣಿಗೆ ಅದು ಕಾಣುವದು. ಅವರಿಗೆ ಬಿಂದು ಸಾಕ್ಷಾತ್ಕಾರವಾಗಬಹುದು ಇಲ್ಲವೆ ಅವರು ಕೆಲವು ನಾದಗಳನ್ನೂ ಕೇಳಬಹುದು. ಸಾಮಾನ್ಯವಾಗಿ ಎಲ್ಲರೂ ಒಂದು ಅನ್ಯಾದೃಶವಾದ ಶಾಂತ ವಾತಾವರಣದಲ್ಲಿರುವೆವೆಂಬ ಭಾವನೆ ಪಡೆಯುವರು. ಪ್ರತಿಯೊಬ್ಬರಲ್ಲಿಯೂ ಆನಂದ ಪ್ರತೀತಿಯು ಮೂಡಿಕೊಳ್ಳುವದು. ಆ ಪ್ರಕಾಶ ಪರಮಾನಂದಗಳ ನಿರ್ಮಲ ಪ್ರಭೆಯಲ್ಲಿ ಮನಸ್ಸು ತಿಳಿಯಾಗಿ ಉತ್ಸಾಹವು ಮೊಳಕೆಯೊಡೆಯುವದು. ಪ್ರಭುವಿನ ಪ್ರಕಾಶ, ಮನಸ್ಸಿಗುಂಟಾಗುವ ಆನಂದಗಳಿಂದಾಗಿ ಪ್ರಭು ಶಕ್ತಿಯು ಇಳಿದು ಬಂದುದನ್ನರಿಯಬೇಕು. ಆ ಶಕ್ತಿಯ ಸ್ಪರ್ಶದಿಂದಾಗಿ ಪದಾರ್ಥವು ಪ್ರಸಾದವಾಗುವದು.

ನಾಲ್ಕನೆಯ ಮೆಟ್ಟಿಲಿನಲ್ಲಿ ಪ್ರಭುಶಕ್ತಿಯ ಬಗೆಗೆ ಕೃತಜ್ಞತಾರ್ಪಣೆ ಮಾಡಬೇಕಾಗುವದು. ಅದಕ್ಕಾಗಿ ಆತನ ಪರಂಜ್ಯೋತಿ ಸ್ವರೂಪ ಕರುಣಾಹೃದಯ ಪರಿಪೂರ್ಣತೆ ಸರ್ವವ್ಯಾಪಕತೆ ಇವುಗಳನ್ನು ಕುರಿತಾದ ಸ್ತೋತ್ರಗಳನ್ನು ಹೇಳಬೇಕು. ಸುನಾದಪೂರಿತವಿದ್ದರೂ ಹೃದಯದ ಮಿಡಿತದಿಂದ ಹೊರಹೊಮ್ಮದ ಪದ್ಯವು, ಸ್ತೋತ್ರವು ಕೃತಜ್ಞತೆಯನ್ನು ವ್ಯಕ್ತಗೊಳಿಸಲಾರದು. ಆದ್ದರಿಂದ ಭಾವಪೂರ್ಣವಾದ ಸ್ತುತಿಯಿರಬೇಕು.

ಪ್ರಾರ್ಥನಾಯೋಗದ ಕೊನೆಯ ಹಂತದಲ್ಲಿ ಅನುಭವನಿರೂಪಣೆಗೆ ಅವಕಾಶವನ್ನು ಕಲ್ಪಿಸಿಕೊಳ್ಳಬೇಕು. ಪ್ರಾರ್ಥನೆಯ ಪರಿಣಾಮ ವೈಯಕ್ತಿಕ-

ವಾಗಿ ಇಲ್ಲವೆ ಸಾಮೂಹಿಕವಾಗಿ ಎನಿತಾಯಿತು, ಅದರಲ್ಲಿ ಬರುವ ತೊಡಕು-ತೊಂದರೆಗಳ ನಿವಾರಣೆ ಎಂತು, ಅನುಭವಿಗಳ ಜೀವನದಲ್ಲಿ ಒದಗುವ ಘಟನೆಗಳ ಸ್ವರೂಪವಾವುದು— ಇತ್ಯಾದಿಯಾಗಿ ಅಧ್ಯಾತ್ಮ ಪ್ರಗತಿಪರ ಪ್ರವಚನ ಕೆಲವು ಅವಧಿಯ ವರೆಗೆ ನಡೆಯುವದರಿಂದ ಸಾಧಕ ಜೀವನಕ್ಕೆ ಹೊಸ ಚೇತನೆ ಬಂದಂತಾಗುವದು.

"Prayer is a preface to the book of Life, the girdling on of all mover for battle; it is the pilgrim's preparation for journey." ಪ್ರಾರ್ಥನೆಯು ಜೀವನವೆಂಬ ಗ್ರಂಥಕ್ಕೆ ಮುನ್ನುಡಿಯಿದ್ದಂತೆ. ಪದದ ಅರ್ಥ ಪಲ್ಲವಿಯಲ್ಲಿ ಹೇಗೋ ಹಾಗೆಯೇ ಗ್ರಂಥದ ಸಾರವೆಲ್ಲ ಮುನ್ನುಡಿಯಲ್ಲಿ. ಅದರಂತೆ ಜೀವನ ಸಾರವೆಲ್ಲವೂ ಪ್ರಾರ್ಥನೆಯಲ್ಲಿ ಅಡಗಿರುತ್ತದೆ. ಪ್ರಾರ್ಥನೆಯು ಯುದ್ಧಕ್ಕಾಗಿ ಹೊರಡುವ ಸೈನಿಕನ ಕವಚವಿದ್ದಂತೆ. ಜೀವನವು ಒಂದು ಹೋರಾಟವಾಗಿದೆ. ಮನುಷ್ಯನು ತನ್ನ ಪೌರುಷತ್ವದಿಂದ ಜೀವನದಲ್ಲಿ ಎದುರಾಗುವ ಕಷ್ಟನಷ್ಟಗಳಿಗೆ ಬಾಗದೆ ಕಲಿಯಾಗಿ ಅವನ್ನು ಎದುರಿಸಬೇಕಾಗುತ್ತಿರುತ್ತದೆ. ಪ್ರಾರ್ಥನೆಯು ಕಲಿಯಾಗಿ ಹೋರಾಡುವ ಪುರುಷನಿಗೆ ರಕ್ಷಾಕವಚವಾಗಿದೆ. ಕಷ್ಟ ಕಾರ್ಪಣ್ಯಗಳ ಪ್ರಾಬಲ್ಯವು ರಕ್ಷಾಕವಚವಾದ ಪ್ರಾರ್ಥನೆಯ ಎದುರು ನಡೆಯಲಾರದು. ಪ್ರಾರ್ಥನೆಯು ಯಾತ್ರೆಗಾಗಿ ಹೊರಡುವ ಯಾತ್ರಿಕನ ಸಿದ್ಧತೆಯಿದ್ದಂತೆ. ಯಾತ್ರೆಗೆ ಸಿದ್ಧನಾದವನು ಒಂದು ಪ್ರಸನ್ನಭಾವದಿಂದ ಹೇಗೆ ಕೂಡಿಕೊಂಡಿರುವನೋ ಹಾಗೆಯೇ ಪ್ರಾರ್ಥನಾಯೋಗಕ್ಕೆ ಅಣಿಯಾಗುವ ವ್ಯಕ್ತಿಯು ತುಂಬಾ ಪ್ರಸನ್ನತೆಯಿಂದ ಕೂಡಿಕೊಂಡಿರಬೇಕು. ಪಾತಂಜಲಿ ಋಷಿಗಳು 'ಈಶ್ವರಪ್ರಣಿಧಾನಾದ್ವಾ' ಎಂಬ ಸೂತ್ರದಲ್ಲಿ ಪರಮಾತ್ಮನಲ್ಲಿಯ ಅನನ್ಯವಾದ ಶುದ್ಧ–ಶರಣಾಗತಿಯಿಂದ ಸರ್ವಸಮರ್ಥವಾದ ಆತನು ಪ್ರಸನ್ನನಾಗಿ ಸಾಧಕನಿಗೆ ಎಲ್ಲಂದದಿಂದ ಅನುಗ್ರಹಿಸುವನೆಂದು ಹೇಳಿದ್ದಾರೆ. ಪರಮಾತ್ಮನ ನಾಮ ರೂಪ ಕ್ರಿಯೆ (ಲೀಲೆ) ಸ್ಥಾನ ಗುಣ ಪ್ರಭಾವ ಮೊದಲಾದವುಗಳ ಶ್ರವಣ ಮನನ ಕೀರ್ತನೆಗಳನ್ನು ಮಾಡುವದು, ತಾನು ಎಸಗುವ ಸಮಸ್ತ ಕಾರ್ಯ ಕಲಾಪಗಳ ಫಲಗಳನ್ನು ಅವನಿಗೆ ಅರ್ಪಿಸುವದು, ತಾನು ಪರಮಾತ್ಮನ ಒಂದು ಅನುಪಮವಾದ ಉಪಕರಣವಾಗಬೇಕೆಂದು ಹಂಬಲಿಸುವದು, ಹಾಗು ಅದರಂತೆ ನಡೆಯಲು ಕಟಿಬದ್ಧನಾಗುವದು, ಆತನ ಸ್ಫುರಣೆಯಿಂದ ಹೊರಹೊಮ್ಮುವ ಆಜ್ಞೆ-

ಗಳನ್ನು ನಿರ್ವಂಚನಾ ಭಾವನೆಯಿಂದ ಪರಿಪಾಲಿಸುವದು— ಇವೆಲ್ಲ ಈಶ್ವರನ ಪ್ರಣಿಧಾನದಲ್ಲಿ ಅಡಕವಾಗಿರುತ್ತವೆ. ಮಾನವನ ಹೃದಯವು ಮೂಕವಾಗ ದಿದ್ದರೆ ದೇವನು ಕಿವುಡನೆಂದೂ ಆಗುವದಿಲ್ಲ. (God is never deaf except when man's heart is dumb). ಆದ್ದರಿಂದ ಅಂತಃ-ಕರಣದಿಂದ, ಹೃದಯದ ಒಲವರದಿಂದ ಆತನನ್ನು ಕರೆದರೆ ಆತನು ಓಗೊಡು-ತ್ತಾನೆ. ಅದಕ್ಕಾಗಿ ಮಾನವನು ಅರುಹಿನಿಂದ ನಡೆದುಕೊಳ್ಳಬೇಕು. ನಮ್ಮ ಜೀವನದ ಬಹುಭಾಗವು ಮರವೆಯಿಂದ ಕೂಡಿಕೊಂಡು ತೀರ ಅಲ್ಪ ಭಾಗವು ಮಾತ್ರ ಅರುಹಿನಿಂದ ಯುಕ್ತವಾಗಿರುತ್ತದೆ. ಮರವೆಯಳಿದು ಅರುಹು ತಾನೇ ತಾನಾಗಿ ತುಂಬ ಬೆಳಗಿದರೆ ಆಗ ಜೀವನವು ಸರ್ವಾಂಗಸುಂದರವಾಗುವದು. ಪ್ರಾರ್ಥನಾಯೋಗದ ನಾದವು ಆಧಾರದ ವರೆಗೂ ಇಳಿದು ಬಂದು ದೇಹವನ್ನು ವ್ಯಾಪಿಸಿದರೆ ಅರುಹು ಬೆಳಗುವದು. ಅಲ್ಲಮಪ್ರಭುದೇವರ ಮಾತಿನಲ್ಲಿ ತಿಳಿಸುವ ದಾದರೆ ಸರ್ವಾಂಗವೆಲ್ಲ ಲಿಂಗವಾಗುವದು. ಇದುವೇ ಪ್ರಾರ್ಥನೆಯ ಪ್ರಯೋಜನವು.

ಹರಿವ ನೀರಿಗೆ ಮೈಯೆಲ್ಲ ಕಾಲು,
ಉರಿವ ಅಗ್ನಿಗೆ ಮೈಯೆಲ್ಲ ನಾಲಿಗೆ.
ಬೀಸುವ ಗಾಳಿಗೆ ಮೈಯೆಲ್ಲ ಕೈ.
ಗುಹೇಶ್ವರಾ, ನಿಮ್ಮ ಶರಣಂಗೆ ಸರ್ವಾಂಗ ಲಿಂಗ.

## (೩)

"ಒಂದು ನೀಲದೊಳಗೆ ಮೂರುಲೋಕವಡಗಿತ್ತ ಕಂಡೆ !"

—ಅಲ್ಲಮಪ್ರಭುದೇವರು

ಮನುಷ್ಯನ ಮನಸ್ಸಿನಲ್ಲಿ ಅನಂತ ಭಾವನೆಗಳು ಮೂಡುತ್ತವೆ. ಇವು ಅವನ ಜೀವನದ ಗಿರಿ–ಗುರಿಯನ್ನು ವ್ಯಕ್ತಗೊಳಿಸುತ್ತವೆ. ಈ ಭಾವನೆಗಳಲ್ಲಿ ಕೆಲವು ಕ್ಷಣಿಕವಾಗಿ, ಇನ್ನು ಕೆಲವು ಅವನಿರುವ ವರೆಗೆ ಚಿರಂತನವಾಗಿ ಅವನ ಜೀವನದಲ್ಲಿ ಬಹು ಪ್ರಮುಖವಾದ ಪಾತ್ರವನ್ನಾಡುತ್ತವೆ. ದೇಹಾಂತ್ಯದಲ್ಲಿಯೂ ಈ ಭಾವನೆಗಳ ಪ್ರಭಾವವು ಸಂಸ್ಕಾರರೂಪವಾಗಿ ಉಳಿದು ಪುನರ್ಜನ್ಮದಲ್ಲಿಯೂ ವ್ಯಕ್ತವಾಗುತ್ತದೆಂದು ಹೇಳುತ್ತಾರೆ. ಈ ಭಾವನೆಗಳಿಗೆ ಬಣ್ಣವಿದೆ ಎಂಬ ಮಾತು ಆಶ್ಚರ್ಯಜನಕವಾಗಬಹುದು. ಆದರೆ ವಿಚಾರಾಂತ್ಯದಲ್ಲಿ ಸಂದೇಹ-ಕ್ಕೊಳಗಾದ ಮನಸ್ಸು ಇದನ್ನೊಪ್ಪಿಕೊಳ್ಳದಿರದು. ಮನುಷ್ಯನ ಸುತ್ತಲೂ ಒಂದು ಪ್ರಭೆ (Auro) ಯಿರುತ್ತದೆ. ಇದು ಆತನಲ್ಲಿರುವ ಪ್ರಮುಖ ಭಾವನೆಯನ್ನು ತಿಳಿಸುವದು. ಆಂಗ್ಲ ಮಹಿಳೆ ಆಯವ್ಹಾ ಬರ್ಗ ವ್ಹಿಟನ್ ಎಂಬಾಕೆ What Colour means to You' ಎಂಬ ತನ್ನ ಚಿಕ್ಕದಾದ ಆದರೂ ಬಹಳ ಚೊಕ್ಕಟವಾದ ಗ್ರಂಥದಲ್ಲಿ ಈ ಪ್ರಭೆಯು ಯಾವ ಯಾವ ಬಣ್ಣಗಳಲ್ಲಿ ತೋರುವದು, ಆಗ ಅದು ಯಾವ ನಿರ್ದಿಷ್ಟವಾದ ಅರ್ಥದ ಅಭಿವ್ಯಕ್ತಿಯನ್ನುಂಟು ಮಾಡುವದು ಎಂಬದನ್ನು ಬಹಳ ಮನೋಹರವಾಗಿ ಪ್ರಯೋಗಪೂರ್ವಕವಾಗಿ ತಿಳಿಸಿದ್ದಾಳೆ. ಥಿಯೋಸೊಫಿಸ್ಟಳಾದ ಈಕೆಯಂತೆ ಇನ್ನುಳಿದ ಪ್ರಸಿದ್ಧ ಥಿಯೊ-ಸೊಫಿಸ್ಟರೂ ಭಾವನೆ-ಬಣ್ಣಗಳ ಸಂಬಂಧವನ್ನುಕುರಿತು ಅನೇಕ ಮಾತುಗಳನ್ನು ಹೇಳಿದ್ದಾರೆ. ಯೋಗಶಾಸ್ತ್ರದಲ್ಲಿಯ ನಾದ-ಬಿಂದು-ಕಳೆಗಳನ್ನು ಕುರಿತಾದ ವಿಚಾರಗಳಿಗೆ ಈ ಸಂಗತಿಗಳು ಸಮೀಪವಾಗಿರುತ್ತವೆ. ಮನುಷ್ಯರು ಯೋಗಾ ಭ್ಯಾಸವನ್ನು ಮಾಡದೆ ಇದ್ದರೂ ಕ್ಷಣಕ್ಷಣಕ್ಕೆ ಅವರಲ್ಲಿ ಉದ್ಭವವಾಗುತ್ತಿರುವ ಭಾವನೆಗಳು ತಮ್ಮ ಬಣ್ಣವನ್ನು ವ್ಯಕ್ತಗೊಳಿಸುತ್ತವೆ; ತನ್ಮೂಲಕವಾಗಿ ತಮ್ಮ ಸ್ವರೂಪವನ್ನೂ ವ್ಯಕ್ತಗೊಳಿಸುತ್ತವೆ ಎಂಬುದು ಬಹು ಮಹತ್ವದ ಮಾತು. ಯೋಗಿಗಳು ಕಾಣುವ ಪ್ರಕಾಶವು ಇವುಗಳಿಂದ ಭಿನ್ನವಾಗಿರುತ್ತದೆ. ಅಲ್ಲಿ ಅಸಂಸ್ಕೃತ ಭಾವನೆಗಳು ಒಂದು ಸಂಸ್ಕಾರವನ್ನು ಪಡೆದು ದಿವ್ಯ ಭಾವನೆ-ಯತ್ತ ಸಾಗಿರುತ್ತವೆ. ಅಸಂಸ್ಕೃತ ಭಾವನೆಗಳನ್ನೂ ಸಂಸ್ಕೃತವಾದ ಭಾವನೆ

ಗಳನ್ನೂ ಎದುರಿಗಿಟ್ಟುಕೊಂಡು ಬಣ್ಣದ ದೃಷ್ಟಿಯಿಂದ ಅವನ್ನು ಕಂಡಾಗ ಮಾನವೀಯತೆಯ ನಿಜವಾದ ಅರಿವು ಉಂಟಾಗುತ್ತದೆ. ಸತ್ಪುರುಷರ, ಮುನಿ-ಯೋಗಿಗಳ ಸನ್ನಿಕರ್ಷದಲ್ಲಿ ಬರುವ ಪಾಮರರೂ ಪೂರ್ಣವಾಗಿ ಮಾನವರೆನಿಸಿಕೊಳ್ಳಲು ತಕ್ಕವರಾಗುತ್ತಾರೆ, ಪ್ರಾಣಿಗಳೂ ಸ್ವಭಾವ ವೈರವನ್ನು ಬಿಟ್ಟು ಸುಖಮಯವಾದ ಸಹಜೀವನವನ್ನು ಸಾಗಿಸುತ್ತವೆ— ಎಂಬುದನ್ನು ನೆನೆದಾಗ ಈ ಭಾವನೆಗಳಿಗಿರುವ ಮಹತಿಯು ಇನ್ನೂ ಹೆಚ್ಚು ಸ್ಪಷ್ಟವಾಗುತ್ತದೆ.

ಭಾವಕ್ಕೆ 'ರಾಗ' ಎಂದು ಹೆಸರು. ರಾಗ, ರಂಜನ, ರಂಗ ಇತ್ಯಾದಿ ಪದಗಳು 'ರಂಜ್—ಬಣ್ಣ ಕೊಡು', ಎಂಬ ಧಾತುವಿನಿಂದ ಬಂದುವಾಗಿರುವದರಿಂದ ಪರ್ಯಾಯವಾಗಿ ಭಾವಕ್ಕೆ ಬಣ್ಣ ಎಂಬ ಅರ್ಥವೇ ಉಂಟಾಗುತ್ತದೆ. ಸಾಹಿತ್ಯವನ್ನು ಅವಲೋಕಿಸಿದಾಗ, ಹಾಗೆಯೇ ದಿನದಿನದ ಜೀವನ ವ್ಯವಹಾರವನ್ನು ನಿರೀಕ್ಷಿಸಿದಾಗ ಭಾವನೆಗೂ ಬಣ್ಣಕ್ಕೂ ಎಷ್ಟು ನಿಕಟವಾದ ಸಂಬಂಧವಿದೆ ಎಂಬುದು ವಿದಿತವಾಗುತ್ತದೆ. ಮನುಷ್ಯನು ದುಃಖ-ದುಮ್ಮಾನದಲ್ಲಿದ್ದಾಗ ಇಲ್ಲವೆ ಸ್ಮಶಾನಯಾತ್ರೆಯಲ್ಲಿ ಹೊರಟಾಗ ಅಲ್ಲಿ ಒಂದು ಉತ್ಸಾಹ ರಹಿತವಾದ ದುಃಖ ಭರಿತವಾದ ವಾತಾವಾರಣವು ಪಸರಿಸಿರುತ್ತದೆ. ಇಂಥಹದೊಂದು ದುಃಖದ ಭಾವವಿದ್ದಲ್ಲಿ ಸುತ್ತಲೂ ಕರಿಯ ಬಣ್ಣವು ವ್ಯಾಪಿಸಿರುತ್ತದೆ. ಕ್ರೈಸ್ತರು ಮರಣ-ದಿಂದುಂಟಾದ ದುಃಖದ ಭಾವನೆಯಲ್ಲಿದ್ದಾಗ ಕರಿಯ ಪಟ್ಟಿಯನ್ನು ಹಚ್ಚಿಕೊಂಡು ೧೦ ದಿನಗಳ ವರೆಗೆ ತಮ್ಮ ಗ್ಲಾನಿಭಾವವನ್ನು ತೋರಿಸುತ್ತಾರೆ. ಹೀಗೆ ದುಃಖದಲ್ಲಿದ್ದವರ ಮುಖದ ತೇಜವೆಲ್ಲ ಅಡಗಿ ಅದು ಒಂದು ಕಾಳ ಕರಾಳ ಚಿಹ್ನೆ-ಯನ್ನು ವ್ಯಕ್ತಗೊಳಿಸುತ್ತದೆ. ಅಪಮಾನದಿಂದಾಗಿ ದುಃಖವುಂಟಾದಾಗ ಮೋರೆ ಕಪ್ಪಿಟ್ಟಿತು ಎಂದು ಹೇಳುವ ಮಾತು ಸಹ ಇದನ್ನೇ ತಿಳಿಸುವದು.

ಹಾಗೆಯೇ ಸಿಟ್ಟು ಸಿಡುಕುತನ ವ್ಯಕ್ತವಾದಾಗ ಅಲ್ಲಿ ಕೆಂಪು ಬಣ್ಣವು ಆವರಿಸುತ್ತದೆ. ಸಿಟ್ಟು ಮೂಗಿನ ತುದಿಯ ಮೇಲೆ ಕುಣಿಯುತ್ತದೆ. ಮುಖ ಕೆಂಜಿಗನಂತಾಗುತ್ತದೆ. ಕಣ್ಣು ಕೆಂಪೇರುತ್ತವೆ. ಆಗ ಕೆಂಪು ಹಣ್ಣು ಮೆಣಸಿನ ಕಾಯಿಗಿರುವ ಬಣ್ಣ ಸ್ಮರಿಸಿಕೊಳ್ಳಬೇಕು. ಬಸವಣ್ಣನವರ ವಚನವೊಂದರಲ್ಲಿ 'ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ' ಎಂಬ ಮಾತು ಬರುತ್ತದೆ. ಇದೂ ಸಹ ಸಿಟ್ಟಿಗೆದ್ದಾಗ ರಕ್ತ ಕುದಿಯ ಹತ್ತಿ ಕೆಂಪು ವಾತಾವರಣವನ್ನೇ ನಿರ್ಮಿಸು-ತ್ತದೆ ಎಂಬ ಮಾತನ್ನು ಸ್ಪಷ್ಟಗೊಳಿಸುತ್ತದೆ. ರಾಮಾಯಣದ ಒಂದು ಸ್ವಾರಸ್ಯವಾದ ಕಥೆಯನ್ನಿಲ್ಲಿ ಗಮನಿಸಬೇಕು. ರಾಮನ ಕಥೆಯನ್ನು ಶಿಷ್ಯರಂತೆ

ತಾನೂ ಕೇಳಬೇಕೆಂದು ವೇಷ ಮರೆಯಿಸಿಕೊಂಡು ಶಿಷ್ಯರ ಸಮೂಹದಲ್ಲಿ ಮಾರುತಿಯು ಕುಳಿತಿದ್ದಾಗ, ಅಶೋಕ ವನವಲ್ಲಿ ಮಾರುತಿಯು ಬಿಳಿಯ ಹೂಗಳನ್ನು ಕಂಡನು –ಎಂಬ ಮಾತನ್ನು ಆತನು ಕೇಳಿದನು. ಅವನಿಗೆ ಇದು ಸುಳ್ಳು ಎಂದು ನಿರ್ಧಾರವಾಗಿ ತಾನು ವೇಷ ಮರೆಯಿಸಿಕೊಂಡಿರುವನೆಂಬ ಅರಿವು ತಪ್ಪಿ, 'ಇದು ಸುಳ್ಳು, ನಾನು ಕೆಂಪು ಹೂಗಳನ್ನು ಕಂಡೆನು' ಎಂದನಂತೆ. ಆಗ ಮಾತು ವಿಕೋಪಕ್ಕೆ ಹೋಗುವದನ್ನು ತಡೆಯುವದಕ್ಕಾಗಿ ರಾಮನು 'ಅಶೋಕವನದಲ್ಲಿ ಬಿಳಿಯ ಹೂಗಳಿದ್ದರೂ, ಆಗ ನೀನು ಸಿಟ್ಟಿನ ಭರದಲ್ಲಿದ್ದುದರಿಂದ ಅಲ್ಲಿಯ ಬಿಳಿಯ ಹೂಗಳು ನಿನಗೆ ಕೆಂಪು ಕಂಡವು' ಎಂದು ಸಮಾಧಾನ ಮಾಡಿದನಂತೆ. ಇದರ ತಾತ್ಪರ್ಯವಿಷ್ಟೆ! ನಮ್ಮಲ್ಲಿಯ ಸಿಟ್ಟಿನ ಭಾವದಿಂದಾಗಿ ವಸ್ತುಗಳಿಗೆ ಸಿಟ್ಟಿನಲ್ಲಿ ವ್ಯಕ್ತವಾಗುವ ಆ ಬಣ್ಣವನ್ನು ಆರೋಪಿಸುತ್ತೇವೆ.

ಸಹಕಾರ ಸೌಹಾರ್ದ್ರ ಪ್ರೇಮ ಭಾವನೆಗಳು ಹುಟ್ಟಿಕೊಂಡಾಗ ಗುಲಾಬಿ ಹೂವಿನ ಗುಲಾಬಿ ಬಣ್ಣವು ಪಸರಿಸಿರುತ್ತದೆ. ಯೋಗಶಾಸ್ತ್ರದಲ್ಲಿ ಪ್ರಾಣಾಪಾನ ಇತ್ಯಾದಿ ವಾಯುಗಳಲ್ಲಿ ವ್ಯಾನ ವಾಯುವಿಗೆ ಗುಲಾಬಿ ಬಣ್ಣವನ್ನು ಹೇಳುತ್ತಾರೆ. ಹರ್ಷ ಶುದ್ಧ ಭಾವನೆಗಳಿಗೆ ಬಿಳಿಯ ಬಣ್ಣವನ್ನೂ, ಉತ್ಸಾಹ ಹುಮ್ಮಸುಗಳಿಗೆ ಹಸಿರು ಬಣ್ಣವನ್ನೂ ಹೋಲಿಸುವದುಂಟು. ನಿಸರ್ಗದಲ್ಲಿ ಉತ್ಸಾಹ ತುಂಬಿಕೊಂಡಿರುವಾಗ ತಿರುಗಾಡಲಿಕ್ಕೆ ಹೋದರೆ ಉತ್ಸಾಹ ಭರಿತರಾಗುವದನ್ನು ಜ್ಞಾಪಿಸಿಕೊಳ್ಳಬೇಕು. ಮನುಷ್ಯನ ಬುದ್ಧಿ ಪ್ರಕಾಶಕ್ಕೆ ಸುವರ್ಣ, ಶುದ್ಧ ಬಂಗಾರ, ಸೂರ್ಯನ ಹೊಂಬಣ್ಣದ ಬಣ್ಣವನ್ನು ಉಪಮಿಸುವರು. ಹಿರಣ್ಯಗರ್ಭ, ಹಿರಣ್ಮಯಪಾತ್ರ ಇತ್ಯಾದಿ ಶಬ್ದಗಳಿಂದ ಸುವರ್ಣ–ಬುದ್ಧಿಯೆಂಬುದು ಸ್ಪಷ್ಟವಾಗುತ್ತದೆ. ವ್ಯಾಖ್ಯಾನ ಪ್ರವಚನಗಳು ನಡೆದಾಗ ಅಲ್ಲೆಲ್ಲ ಸುವರ್ಣದ ಬಣ್ಣ ವ್ಯಾಪಿಸಿರುತ್ತದೆ.

ಯೋಗಾನುಸಂಧಾನದಲ್ಲಿ ತತ್ಪರವಾಗಿರುವವರ ಅಂತರಂಗದಲ್ಲಿ ನೀಲ ಜ್ಯೋತಿಯ ಪ್ರಭೆಯು ಪಸರಿಸುವಂತೆ ಬಹಿರಂಗದಲ್ಲಿಯೂ ಅದು ಪಸರಿಸುತ್ತದೆ. ಸರ್ಪಭೂಷಣ ಶಿವಯೋಗಿಗಳು ತಮ್ಮ ಕೈವಲ್ಯಕಲ್ಪವಲ್ಲರಿಯ ಯೋಗ ಪ್ರತಿಪಾದನ ಸ್ಥಳದಲ್ಲಿ ಯೋಗಿಗಳು ಅಂತರಂಗದಲ್ಲಿ ಕಾಣುವ ಈ ಜ್ಯೋತಿಯ ಸೊಗಸಾದ ನಿಲವನ್ನು ವಿವರಿಸಿದ್ದಾರೆ. ನೀಲದುಪ್ಪರಿಗೆ, ನೀಲಗಿರಿ, ನೀಲದ್ವಾರ, ನೀಲ ಜ್ಯೋತಿಯ ದಿವ್ಯ ಜ್ವಾಲೆ ಎಂದು ಬಗೆಬಗೆಯಾಗಿ ಅದನ್ನು ಬಗೆಬಗೆಯಾಗಿ ಬಣ್ಣಿಸಿದ್ದಾರೆ.




ಮೂಲ ಕುಂಡಲಿಯನೆತ್ತಿ । ಆಜ್ಞೇಯದ
ಮೇಲಣ ನೆಲೆಗೆ ಹತ್ತಿ ।
ಸಾಲಿಟ್ಟು ಸುರಿತಿರ್ಪ । ಹಾಲನೆ ಸವಿದುಂಡು
ನೀಲ ಜ್ಯೋತಿಯ ದಿವ್ಯ ಜ್ವಾಲೆಯೊಳ್ ಬೆಳಗೆಂದು
ಬೋಧಿಸೆನ್ನನು ಗುರುವೆ। ನಿಮ್ಮಯ ದಿವ್ಯ
ಪಾದವ ನಂಬಿರುವೆ ||

ಎಂದು ಬೇಡಿಕೊಂಡಿದ್ದಾರೆ. ಮೇಲೆ ಉದ್ಧರಿಸಲಾಗಿದ್ದ ಪ್ರಭುದೇವರ ವಚನ ಭಾಗದಲ್ಲಿಯ ' ಒಂದು ನೀಲದೊಳಗೆ.... ' ಎಂಬ ಪದಗಳಲ್ಲಿ ಬರುವ 'ನೀಲ'ವು ಈ ನೀಲಪ್ರಕಾಶವನ್ನೇ ವಿವರಿಸುವದು. ಈ ನೀಲಪ್ರಕಾಶವು ಆಕಾಶ ತತ್ವವೇ ಆಗಿದೆ. ಪಂಚ ಮಹಾಭೂತ ತತ್ವಗಳಲ್ಲಿ ಆಕಾಶ ತತ್ವಕ್ಕೆ ನೀಲಬಣ್ಣವನ್ನು ಹೋಲಿಸುವರು. ಈ ತತ್ವದಲ್ಲಿ ಇನ್ನುಳಿದ ನಾಲ್ಕೂ ತತ್ವಗಳು ಅಡಗಿರುವವು. ಆಕಾಶವು ಭೂಗೋಲವನ್ನೂ ಖಗೋಲವನ್ನೂ ಅಂತರಾಳವನ್ನೂ ಗರ್ಭೀಕರಿಸಿ-ಕೊಂಡಿರುತ್ತದೆ. ಎಂತಲೇ ಇದಕ್ಕೆ ಅನಂತವೆಂದು ಹೆಸರು. 'ಆತ್ಮಾಕಾಶಮಯಂ ತಾವತ್' ಎಂದು ಹೇಳಿರುವದರಿಂದ ಆಕಾಶ, ಅನಂತ, ಆತ್ಮ ಇವು ಸಮಾನಾ-ರ್ಥಕ ಪದಗಳು. ನಿಜವಾಗಿ ಆಕಾಶಕ್ಕೆ ಬಣ್ಣವಿಲ್ಲ. ಒಂದು ವೇಳೆ ಅದಕ್ಕೆ ಬಣ್ಣ ಹೇಳುವುದಾದರೆ ಅದು ತಿಳಿ ನೀಲ. ಪ್ರಭುವಿನ ಧ್ಯಾನದಲ್ಲಿ ಕುಳಿತು ಕೊಂಡಾಗ, ಅನನ್ಯಸಮರ್ಪಣ ಭಾವದಿಂದ ಧ್ಯಾನ ಮಾಡುತ್ತಿರುವಾಗ ಶುಭ್ರ ನೀಲ ಬಣ್ಣವು ಒಳಹೊರಗೂ ಪಸರಿಸಿ ತೋರುತ್ತಿದೆ. ಅಲ್ಲಿ ಭಾವವೆಲ್ಲ ಬರಿದಾಗಿ ಅನಂತದೊಡನೆ ಆತ್ಮವು ವಿಹರಿಸುತ್ತಿರುವದರಿಂದ ಆಕಾಶ ತತ್ವದ ಅನುಭವವು ಗಮ್ಯವಾಗುತ್ತಿದೆ. ಆ ಸಮಯದಲ್ಲಿ ಮನಸ್ಸಿನಲ್ಲಿ ಅನ್ಯ ಚಿಂತನೆಗಳು ಮೂಡಿ ಕೊಂಡರೆ ಆ ನೀಲಬಣ್ಣದಲ್ಲಿ ಕೆಂಪು, ಕರಿ ಇತ್ಯಾದಿ ಗೆರೆಗಳು ಕಂಡು-ಬರುತ್ತವೆ.

ಪ್ರಾರ್ಥನೆಯೂ ಒಂದು ಯೋಗವಾದುದರಿಂದ ಇಲ್ಲಿಯೂ ಆ ನೀಲ ಜ್ಯೋತಿಯು ಕಾಣಿಸಿಕೊಳ್ಳುವದು ಸ್ವಾಭಾವಿಕ. ಪ್ರಾರ್ಥನೆಯಲ್ಲಿ ಶ್ರದ್ಧೆ ಶರಣಾಗತಿಗಳು ಬೆಳೆಯುತ್ತ ಸಾಗಿದಂತೆ ಈ ನೀಲ ಬಣ್ಣವು ಹೆಚ್ಚು ಹೆಚ್ಚು ಸ್ಫುಟವಾಗುತ್ತ ಹೋಗುವದು. ಸಾಮೂಹಿಕ ಪ್ರಾರ್ಥನಾಯೋಗದಲ್ಲಿ ಆರಂಭದಲ್ಲಿ ಎಲ್ಲರ ಭಾವವೂ, ಎಲ್ಲರ ಚಿತ್ತ ಮನ ಇತ್ಯಾದಿ ಅಂತಃಕರಣಗಳೂ

ಒಂದೇ ಬಗೆಯಾಗಿ ಇರುವದಿಲ್ಲವಾದುದರಿಂದ ಅಲ್ಲಿ ಕಾಣುವ ಬಣ್ಣ ಆಕಾರ-ರಹಿತವಾಗಿ ಮಸುಕು ಮಸುಕಾಗಿ ಇರುತ್ತದೆ. ವಿಶಿಷ್ಟವಾದ ನಿರ್ದಿಷ್ಟವಾದ ಯಾವ ಆಕಾರವೂ ಇರದ್ದರಿಂದ ಇದು ನಮ್ಮ ಭಾವವು ಇನ್ನೂ ನಿರ್ದಿಷ್ಟವಾಗಿಲ್ಲ-ವೆಂಬುದನ್ನು ತಿಳಿಸುತ್ತದೆ. ಪ್ರಭುವಿನಲ್ಲಿ ನಮ್ಮ ಭಾವವೆಲ್ಲ ಲೀನವಾಗಿ, ಏಕಾಗ್ರತೆ ತೀವ್ರವಾಗಿ, ಶದ್ಧೆ–ಶರಣಾಗತಿಗಳು ಗಾಢವಾದಂತೆ ನೀಲಬಣ್ಣವು ಸ್ಪಷ್ಟವಾಗಿ ಕಾಣಬರುವದು. ಇದು ಪ್ರಾರ್ಥನಾಯೋಗದ ಸಿದ್ಧಿಯಲ್ಲಿ ಮೊದಲಿನ ಮೆಟ್ಟಲನ್ನು ಸೂಚಿಸುತ್ತದೆ.

ಪ್ರಾರ್ಥನಾಯೋಗದ ‘ಪರಿಣಾಮವನ್ನು ವ್ಯಕ್ತಗೊಳಿಸುವ ಎರಡನೆಯ ಮೆಟ್ಟಲಿನಲ್ಲಿ ಶ್ರದ್ಧೆ–ಶರಣಾಗತಿಗಳು ಬಲಿತು ಒಂದು ನಿರ್ದಿಷ್ಟ ಸ್ವರೂಪಕ್ಕೆ ಬರುವವು. ಆಗ ಸುತ್ತಲೂ ವ್ಯಾಪಿಸಿರುವ ನೀಲ ಬಣ್ಣದಲ್ಲಿಯೂ ಒಂದು ಆಕಾರವು ಮೂಡಿಕೊಳ್ಳಲಿಕ್ಕೆ ಬೇಕು. ಇಂಥ ಅವಸ್ಥೆಯಲ್ಲಿ ನೀಲ ಬಣ್ಣದಲ್ಲಿ ಒಂದು ಎಲೆಯ ಆಕಾರವಾಗಲಿ ಒಂದು ಕಮಲದ ಇಲ್ಲವೆ ಯಾವುದಾದರೊಂದು ಹೂವಿನ ಆಕಾರವಾಗಲಿ ಕಾಣಹತ್ತುವದು. ಇದರಿಂದ ನಮ್ಮ ಭಾವವು ಶುದ್ಧವಾಗುತ್ತ, ಒಂದು ನಿರ್ದಿಷ್ಟವಾದ ಆಕಾರವನ್ನು ತಳೆಯುತ್ತ ನಡೆದಿದೆ ಎಂಬುದನ್ನು ಅರಿತುಕೊಳ್ಳಬೇಕು.

ಪ್ರಾರ್ಥನಾಯೋಗದ ಸಿದ್ಧಿಯ ಕೊನೆಯ ಹಂತದಲ್ಲಿ ಸುತ್ತಲೂ ವ್ಯಾಪಿ-ಸಿರುವ ನೀಲಪ್ರಭೆಯಲ್ಲಿ ಒಂದು ಕಮಲ ಒಂದು ಹೂವು ಅಲ್ಲ, ಹಲವಾರು ಹೂಗಳು ಶುದ್ಧವಾದ ಆಕರ್ಷಕವಾದ ರೂಪತಾಳಿ ರಾಶಿರಾಶಿಯಾಗಿ ಪ್ರಭುವಿನ ಪಾದದಲ್ಲಿ ಮಳೆಸುರಿದಂತೆ ಸುರಿಯುತ್ತವೆ. ಇದುವೆ ಪ್ರಭುವಿನ ಪಾದಕ್ಕೆ ಸಲ್ಲಿಸುವ ಪುಷ್ಪವೃಷ್ಟಿಯು. ಇಂಥ ಅವಸ್ಥೆಯಲ್ಲಿ ಹೊರ-ಒಳಗು, ಹಿಂದು-ಇಂದು-ಮುಂದು ಎಂಬ ಅವಕಾಶ ಕಾಲಗಳ ಕಲ್ಪನೆಯಡಗಿ ಎತ್ತೆತ್ತ ನೋಡಿದತ್ತತ್ತ ಪ್ರಶಾಂತ ಗಂಭೀರವಾದ ವಾತಾವರಣವೇ ತಲೆದೋರುತ್ತವೆ. ಈ ಅವಸ್ಥೆಯಲ್ಲಿ ವಾಕ್‌ಸಿದ್ಧಿ, ಸ್ಪರ್ಶಸಿದ್ಧಿ ಮೊದಲಾದವುಗಳೂ ಸಹಜವಾಗಿ ಉಂಟಾಗುತ್ತವೆ. ಪಂಚೇಂದ್ರಿಯಗಳೆಲ್ಲ ಪರಿಶುದ್ಧತೆಯನ್ನು ಪಡೆಯುವದರಿಂದ ಪವಾಡಗಳು ತಾವಾಗಿಯೇ ನಿಲುಕುತ್ತವೆ. ಪವಾಡಗಳನ್ನು ಮೆರೆಯಿಸುವ ಇಚ್ಛೆ ಇಲ್ಲವೆನಿ-ಸುವದಾದರೂ ಆ ಪವಾಡಗಳು ತನ್ನ ತಾನೇ ಸಂಭವಿಸುತ್ತಿರುತ್ತದೆ. ಪವಾಡ ಪ್ರದರ್ಶನವಾಗಲಿ, ನಾದ ಬಿಂದು ಕಳೆಗಳ ಸಾಕ್ಷಾತ್ಕಾರವಾಗಲಿ ಆಧ್ಯಾತ್ಮ

ಜೀವಿಯ ಲಕ್ಷ್ಯವಲ್ಲ. ಇವನ್ನು ಉದ್ದೇಶಿಸಿ ಅವನು ಸಾಧನೆಯನ್ನೇನೂ ಮಾಡುವದಿಲ್ಲ, ಮಾಡಕೂಡದು. ಆಧ್ಯಾತ್ಮ ಜೀವಿಯ ಲಕ್ಷ್ಯವು ಸಾಮರಸ್ಯ, ಯೋಗಸಾಧನೆಯಿಂದ ಪಡೆದುಕೊಳ್ಳಬೇಕಾದ ಸಾಮರಸ್ಯ. ಭಾವಗಳನ್ನು ತೆರವು ಮಾಡಿಕೊಂಡರೆ ಪ್ರಭುಕಾರುಣ್ಯಶಕ್ತಿಯು ಸಂಪೂರ್ಣವಾಗಿ ಇಳಿದುಬಂದು ಅಂಗ ಮನ ಭಾವಗಳನ್ನೆಲ್ಲ ವ್ಯಾಪಿಸಿಕೊಳ್ಳುವದು. ಅನುವು ಮಾಡಿಕೊಳ್ಳುವದು. ಮಾತ್ರ ಆತ್ಮನ ಅವಿರಳವಾದ ಸಾಧನೆಯ ಗುರಿಯಾಗಿದೆ; ಸಂಪಾದನೆಯು ಲಕ್ಷ್ಯವಾಗಿದೆ. ಪ್ರಾರ್ಥನಾಯೋಗದಿಂದ ಇದು ಸಾಧ್ಯವಿದೆ. ಮಾನವನು ಆತ್ಮಕಲ್ಯಾಣಕ್ಕೋಸುಗ ಇದನ್ನು ಸಾಧಿಸಿಕೊಳ್ಳಬೇಕಾಗಿದೆ.

ಜೀವನು ತಳೆಯುವ ಭಾವಗಳಿಂದ ಜೀವನಕ್ಕೆ ಬೆಲೆಯಿರುತ್ತದೆ, ಪೊಳ್ಳು ಗಲುಗಿನಲ್ಲಿ ಹೊರಡುವ ಸ್ವರಸಮ್ಮೇಳ ಸ್ವರಗಾಂಭೀರ್ಯಗಳಿಂದ ಆ ಗಲುಗಿಗೆ ಮಹತ್ವವಿರುವಂತೆ! ನಾವು ತಳೆಯುವ ಭಾವಗಳು ಉದಾತ್ತವಾಗದಿದ್ದರೆ ನಮ್ಮ ಜೀವನವು ಉನ್ನತವಾಗುವದಿಲ್ಲ. 'ಯಥಾ ಭಾವಃ ತಥಾ ದೇವಃ' ಎಂದು ಹೇಳುವರು. ಹಾಗಲ್ಲ, 'ಯಥಾ ಭಾವಃ ತಥಾ ಜೀವಃ'. ನಾವು ತಳೆಯುವ ಸದ್ಭಾವನೆಗಳಿಂದ ಜೀವನವು ಉದಾತ್ತವೂ ಭವ್ಯವೂ ಆಗುವದು. ಕಾಗದ ನಾಣ್ಯಗಳಿಗೆ ಬೆಲೆ ಯಾವುದರಿಂದ? ಅದರಲ್ಲಿರುವ ಸರಕಾರದ ಮುದ್ರೆಯಿಂದ, 'I promise to pay you....' ಎಂಬ ಮುದ್ರೆಯಿಂದಲ್ಲವೆ? ಹಾಗೆಯೇ ನಾವು ಮಾಡುವ ಕರ್ಮಗಳು ಮುದ್ರೆಯುಳ್ಳ ಕಾಗದವಿದ್ದಂತೆ. ಅವುಗಳ ಹಿಂದೆ ಇರುವ ಸದ್ಭಾವನೆಗಳಿಂದ ಆ ಕರ್ಮಗಳಿಗೆ ಬೆಲೆಯುಂಟು. ಆ ಸದ್ಭಾವ ಇಲ್ಲದಿದ್ದರೆ ಆ ಕರ್ಮಗಳಿಗೇನು, ಆ ಜೀವಕ್ಕೇನು ಬೆಲೆ? ತಾಯಿ ಹರ್ಷಾತಿರೇಕ ದಿಂದ ಮಗನ ಮೈಮೇಲೆ ಕೈಯಾಡಿಸಿ ಕಣ್ತುಂಬ ನೋಡಿ ಅವನನ್ನು ಹರಸು- ತ್ತಾಳೆ. ವಿಜ್ಞಾನಿಯೊಬ್ಬನು ಆ ತಾಯಿಯು ಮಗನ ಮೇಲೆ ಆಡಿಸಿದ ಕೈಯ ಉದ್ದ ಅಗಲ ಅಳತೆಯನ್ನು, ಅದರಿಂದ ಮಗನ ಮೇಲೆ ಬೀಳುವ ಭಾರವನ್ನು ವಿವರಿಸಿ ಹೇಳಬಲ್ಲ. ಇಲ್ಲಿ ತಾಯಿಯ ಅಂತಃಕರಣ ಆ ವಿಜ್ಞಾನಿಗೆ ಎಂದೂ ತಿಳಿಯದು. ವಿಜ್ಞಾನಿಗೆ ಅಂತರಂಗದ ಸದ್ಭಾವನೆಯ ಆಳ ಎಷ್ಟೂ ಗೊತ್ತಾಗದು. ತಾಯಿಯು ಮಗನ ಮೇಲೆ ಸುರಿಸುವ ಸದ್ಭಾವನೆ ಪವಿತ್ರ ಭಾವನೆಗಳಂಥ ಹಲವಾರು ಭಾವನೆಗಳನ್ನು ತಳೆಯುವದರಿಂದ ದೇವನ ನಿಲವನ್ನು ಅರಿತು- ಕೊಳ್ಳಲೂ ಅದನ್ನು ಅರಿತು ಅಳತೆ ಮಾಡಲೂ ಸಾಧ್ಯವಾಗುತ್ತದೆ. ಸದ್ಭಾವನೆ

ಗಳಿಂದ ವಿತರ್ಕಭಾವನೆಗಳು, ವಿಕಾರಗಳು ತಾವಾಗಿಯೇ ಉರುಳಿ ಬೀಳುವವು. ಜೀವನವು ಮಧುರ ಗಾನದಿಂದ ಆನಂದವನ್ನು ಬೀರುವದು; ಆದರಿಂದ ಸಾರ್ಥಕ್ಯವನ್ನು ಪಡೆಯುವದು. ಪ್ರಾರ್ಥನಾಯೋಗವು ಜನಸಾಮಾನ್ಯರಾದಿಯಾಗಿ ಎಲ್ಲ ತರಹದ ಜನರಿಗೂ ಕಲ್ಪಿಸಿಕೊಡುವ ಅವಕಾಶವಿಂತಿದೆ.

---

# ನವಕಲ್ಯಾಣಮಠದ ಪ್ರಕಟನೆಗಳು

## ಇಂಗ್ಲಿಷದಲ್ಲಿ

1 The Virasaiva Weltanschauung
(ಜಗತ್ತಿನ ಬಗೆಗೆ ವೀರಶೈವದ ದೃಷ್ಟಿಕೋನ) 0-50

2 Religion of Humanity
(ಮಾನವ ಧರ್ಮ) 3-00

3 The Virasaiva Philosophy and Mysticism
(ವೀರಶೈವ ತತ್ವಜ್ಞಾನ ಮತ್ತು ಅನುಭಾವ) 5-00

4 A World Expectant
(ಮುಂಬರುವ ಜಗತ್ತು) 6-00

5 Anatomy of man and God
(ದೇವ-ಮಾನವರ ಅಂತರಂಗ) 3-50

6 Education and Socialism
(ಶಿಕ್ಷಣ ಮತ್ತು ಸಮಾಜಶಾಸ್ತ್ರ) 2-00

7 Budha and Basava
(ಬುದ್ಧ ಮತ್ತು ಬಸವ) 4-00

## ಹಿಂದಿಯಲ್ಲಿ

१ वीरशैव धर्म (ವೀರಶೈವ ಧರ್ಮ) 1-50

# ನವಕಲ್ಯಾಣಮಠದ ಪ್ರಕಟನೆಗಳು

| | | |
|---|---|---|
| ೧ | ವೀರಶೈವ ದರ್ಶನ | ೨–೫೦ |
| ೨ | ಕಾಲಪ್ರವಾಹ | ೧–೨೫ |
| ೩ | ಮೊನ್‌ಕಣ್ | ೨–೦೦ |
| ೪ | ಅನ್ವೇಷಣೆ | ೨–೦೦ |
| ೫ | ಅರುವತ್ತರ ಒಸಗೆ | ೧–೦೦ |
| ೬ | ಶರಣರ ಶಿವಪ್ರಪಂಚ | ೦–೧೦ |
| ೭ | ಲಿಂಗಪೂಜೆ | ೦–೨೫ |
| ೮ | ಲಿಂಗಪೂಜೆ ಮತ್ತು ಇತರ ವಿಧಾನಗಳು | ೦–೩೭ |
| ೯ | ಅಣ್ಣನ ಸೊಳ್ನುಡಿ | ೦–೨೫ |
| ೧೦ | ಬಸವಲಿಂಗ ನಾಮಾವಳಿ | ೦–೧೯ |
| ೧೧ | ಷಡಕ್ಷರ ರಗಳೆ | ೦–೨೫ |
| ೧೨ | ಪ್ರಾರ್ಥನಾಯೋಗ | ೦–೨೫ |
| ೧೩ | ಸಂದೇಶಗಳು | ೦–೭೫ |
| ೧೪ | ಪಲ್ಲಟ | ೨–೦೦ |
| ೧೫ | ಮುಂಕಣ್ | ೨–೦೦ |
| ೧೬ | ಕದಳಿಯ ವಚನಗಳು | ೦–೨೫ |
| ೧೭ | ಭಾವಕುಸುಮ | ೦–೫೦ |